ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 72

ವಿಚಾರ ಸಾಹಿತ್ಯ

# ಹಕ್ಕಿಯ ಪಯಣ

(ಡಿ.ವಿ.ಜಿ. ಅವರ ಅಗ್ರಲೇಖನಗಳು)

ಸಂಪಾದಕರು: ಹಾ.ಮಾ. ನಾಯಕ








ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಹಕ್ಕಿಯ ಪಯಣ

(ಡಿ.ವಿ.ಜಿ. ಅವರ ಕೆಲವು ಆಯ್ದ ಲೇಖನಗಳು)

ಸಂಪಾದಕ

ಹಾ. ಮಾ. ನಾಯಕ






ವಿಶ್ವ ಕನ್ನಡ ಸಮ್ಮೇಳನ

೧೪/೩ ಎ, ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨

*HAKKIYA PAYAṆA*: A collection of essays by D. V. Gundappa (1888–1975); Edited by Dr. H. M. Nayak; Published by K. Jayacharya, K.A.S., Additional Director, Directorate of Kannada and Culture (VISWA KANNADA SAMMELANA), 14/3 A, Nrupatunga Road, Bangalore 560 002. Pages viii + 230.

First Edition: 1983; 5000 Copies



ಬೆಲೆ: ರೂ. 3–00



ಮುದ್ರಕರು
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

**ಆರ್. ಗುಂಡೂರಾವ್**
ಮುಖ್ಯ ಮಂತ್ರಿ




ವಿಧಾನಸೌಧ
ಬೆಂಗಳೂರು
ದಿನಾಂಕ ೧೮–೯–೧೯೮೨

## ಸಂಕಲ್ಪ . . . ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು.

ಇದರಂತೆ ಒಂದುನೂರಾಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳೂ ಇವೆ. ಅನ್ಯಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವನ್ನುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

# ಮೊದಲ ಮಾತು

ಪ್ರಥಮ ಕನ್ನಡ ವಿಶ್ವಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ಗ್ರಂಥ ಮಾಲೆಗೆ ಡಿ. ವಿ. ಗುಂಡಪ್ಪನವರ (೧೮೮೮–೧೯೭೫) ಆಯ್ದ ಲೇಖನಗಳ ಸಂಪುಟ ವೊಂದನ್ನು ಸಿದ್ಧಪಡಿಸುವ ಕೆಲಸ ನನ್ನ ಪಾಲಿಗೆ ಬಂದದ್ದು ನನಗೆ ಒಂದು ಬಗೆಯ ಧನ್ಯತೆಯನ್ನು ತಂದಿದೆ. ಡಿ.ವಿ.ಜಿ. ನನ್ನನ್ನು ತುಂಬ ವಿಶ್ವಾಸದಿಂದ ಕಂಡ, ನಾನು ವಿಶೇಷವಾಗಿ ಆದರಿಸಿದ ಹಿರಿಯರಲ್ಲಿ ಗಣ್ಯರು. ಈ ಸಂಕಲನದ ಮೂಲಕ ನಾನು ಅವರ ನೆನಪಿಗೆ ಗೌರವ ಸಲ್ಲಿಸುತ್ತಿದೇನೆ.

ಡಿ.ವಿ.ಜಿ. ಅವರ ಸಾಹಿತ್ಯ ವೈವಿಧ್ಯಮಯವಾದದ್ದು; ವಿಪುಲವಾದದ್ದು. ಅವರ ಗದ್ಯರಾಶಿಯೂ ದೊಡ್ಡದೆ. ಒಂದು ಸಂಕಲನದ ಆಯ್ಕೆಗಾಗಿ ಅವರ ಎಲ್ಲ ಕೃತಿ ಗಳನ್ನೂ ಆಧರಿಸುವುದು ಸುಲಭವಲ್ಲ. ಆದರಿಂದ ಅವರಿಗೆ ನ್ಯಾಯವೂ ದೊರಕದು. ಸುಮಾರು ಇನ್ನೂರು ಪುಟಗಳಲ್ಲಿ ಅವರ ಪ್ರಾತಿನಿಧಿಕ ಗದ್ಯವನ್ನು ಆರಿಸುವುದು ನನಗೆ ಸಾಧ್ಯವಾಗಿ ತೋರಲಿಲ್ಲ. ಆದ್ದರಿಂದಲೇ ಪ್ರಕೃತ ಸಂಕಲನಕ್ಕೆ ಅವರ 'ಜ್ಞಾಪಕ ಚಿತ್ರಶಾಲೆ'ಯ ಎಂಟು ಸಂಪುಟಗಳನ್ನು ಆಧಾರವಾಗಿ ಇಟ್ಟುಕೊಂಡಿದೆ. ಈ ಪುಸ್ತಕ ಮಾಲೆ ಡಿವಿಜಿ ಅವರ ಬದುಕಿನ ಕೊನೆಯ ವರ್ಷಗಳಲ್ಲಿ ಪ್ರಕಟವಾದದ್ದು. ಮಾಲೆಯ ಕೊನೆಯ ಸಂಪುಟ ('ಸಂಕೀರ್ಣ ಸ್ಮೃತಿ ಸಂಪುಟ') ಮಾತ್ರ ಅವರು ತೀರಿಕೊಂಡ ಎರಡು ವರ್ಷಗಳ ನಂತರ (೧೯೭೭) ಪ್ರಕಟವಾಯಿತು. ತಾವು ಕೇಳಿದ್ದ ಕಂಡಿದ್ದ ಪ್ರಸಂಗಗಳನ್ನು, ವ್ಯಕ್ತಿಗಳನ್ನು ಚಿತ್ರಿಸುವುದರ ಮೂಲಕ ಕಳೆದು ಹೋದ ಕಾಲ ವನ್ನು ಸೆರೆಹಿಡಿಯುವ, ಸವಿನೆನಪುಗಳನ್ನು ತೋಡಿಕೊಳ್ಳುವ ವಿಶಿಷ್ಟ ಪ್ರಯತ್ನವನ್ನು ಡಿವಿಜಿ 'ಜ್ಞಾಪಕ ಚಿತ್ರಶಾಲೆ'ಯ ಸಂಪುಟಗಳಲ್ಲಿ ಮಾಡಿದ್ದಾರೆ. ಇದೊಂದು ಅನನ್ಯ ವಾದ ಚಿತ್ರಶಾಲೆ; ನೆನಪುಗಳ ಗಣಿ; ಸ್ಮರಣೆಯ ಒರತೆ. ಈ ಮಾಲೆಯ ಮೊದಲ ಏಳು ಸಂಪುಟಗಳು ಇವು: 'ಸಾಹಿತಿ ಸಜ್ಜನ ಸಾರ್ವಜನಿಕರು' (೧೯೬೯), 'ಕಲೋ-ಪಾಸಕರು' (೧೯೭೦), 'ಸಾಹಿತ್ಯೋಪಾಸಕರು' (೧೯೭೦), 'ಮೈಸೂರಿನ ದಿವಾನರು ಗಳು' (೧೯೭೧), 'ವೈದಿಕಧರ್ಮ ಸಂಪ್ರದಾಯಸ್ಥರು' (೧೯೭೨), 'ಹಲವರು ಸಾರ್ವಜನಿಕರು' (೧೯೭೩) ಮತ್ತು 'ಹೃದಯ ಸಂಪನ್ನರು' (೧೯೭೪).

ಡಿವಿಜಿ ಅವರ ಅನುಭವ ತುಂಬ ವ್ಯಾಪಕವಾದದ್ದು. ಅವರ ಬದುಕು ಬಹು ಕ್ಷೇತ್ರಗಳಲ್ಲಿ ಹರಿದಾಡಿದ್ದು. ಅವರಲ್ಲಿಗೆ ಬಂದುಹೋದ, ಅವರಿಗೆ ತಿಳಿದಿದ್ದ ವ್ಯಕ್ತಿ ಗಳು ನಾನಾ ಬಗೆಯವರು. ಅರಮನೆಯ ಅತ್ಯುನ್ನತ ಅಧಿಕಾರಗಳಲ್ಲಿದ್ದವರಿಂದ ತೊಡಗಿ, ಬೀದಿ ಬದಿಯಲ್ಲಿ ಅನ್ನ ಬೇಯಿಸಿಕೊಳ್ಳುವ ಅನಾಮಧೇಯರ ವರೆಗೆ ಡಿವಿಜಿ ಚಿತ್ರಿಸಿರುವ ವ್ಯಕ್ತಿಗಳ ವೈವಿಧ್ಯ; ರಾಜಕೀಯ ಕೋಲಾಹಲಗಳಿಂದ ಗಂಡಹೆಂಡಿರ ವಿರಸದ ತನಕ ಅವರು ಬಣ್ಣಿಸಿದ ಪ್ರಸಂಗಗಳ ವೈವಿಧ್ಯ; ಅವರು ಚಿತ್ರಿಸಿದ ವ್ಯಕ್ತಿ ಗಳು, ಸಂಗತಿಗಳು ಈಗ ನಮಗೆ ಕಾಣಸುವುದಿಲ್ಲ. ಕೆಲವಂತೂ ನಂಬಲಾಗದಷ್ಟು

ಅಪರೂಪದವು. ಕಳೆದು ಹೋದ ಆ ಕಾಲವನ್ನು ಊಹಿಸುವುದೇ ಇಂದಿನವರಿಗೆ ಕಷ್ಟ. ಆದ್ದರಿಂದ ಈ ಸಂಪುಟಗಳ ವಾಚನ ಬೇರೆಯದೇ ಆದ ಒಂದು ಪ್ರಪಂಚ ವನ್ನು ನಮಗೆ ಪರಿಚಯಿಸುತ್ತದೆ; ಅನನ್ಯವಾದ ಅನುಭವವನ್ನುಂಟುಮಾಡುತ್ತದೆ.

'ಜ್ಞಾಪಕ ಚಿತ್ರಶಾಲೆ'ಯ ಎಂಟು ಸಂಪುಟಗಳ ಒಟ್ಟು ಲೇಖನಗಳ ಸಂಖ್ಯೆ ೧೮೫; ಪುಟಗಳ ಸಂಖ್ಯೆ ೨೦೪೩. ಈ ಸಾಹಿತ್ಯರಾಶಿಯಿಂದ ಸುಮಾರು ಇನ್ನೂರು ಪುಟಗಳ ಪ್ರಾತಿನಿಧಿಕವಾದ ಈ ಹದಿನೆಂಟು ಲೇಖನಗಳ ಸಂಕಲನವನ್ನು ಸಿದ್ಧಪಡಿಸುವುದು ಸುಲಭವಾಗಲಿಲ್ಲ. ಲೇಖನಗಳನ್ನು ಮತ್ತೆ ಮತ್ತೆ ಓದಬೇಕಾಯಿತು. ಅನೇಕ ಸಲ ಆಯ್ದ ಪಟ್ಟಿಗಳನ್ನು ಮಾಡಿ ಬದಲಾಯಿಸಬೇಕಾಯಿತು. ಒಂದೊಂದು ಲೇಖನವೂ ಒಂದೊಂದು ದೃಷ್ಟಿಯಿಂದ ಮುಖ್ಯವೆನಿಸುತ್ತಿತ್ತು, ಆಕರ್ಷಕವೆನಿಸುತ್ತಿತ್ತು, ಚಾರಿತ್ರಿಕ ಕಾರಣದಿಂದ ಮಹತ್ವವೆನಿಸುತ್ತಿತ್ತು. ಯಾವುದನ್ನು ಉಳಿಸಿಕೊಳ್ಳುವುದು,ಯಾವುದನ್ನು ಬಿಡುವುದು ಎಂಬುದು ತುಂಬ ಕಷ್ಟವಾಯಿತು. ಹಲವು ಓದು, ಆಯ್ಕೆಗಳ ನಂತರ ಸಂಕಲನವನ್ನು ಪ್ರಸ್ತುತರೂಪದಲ್ಲಿ ಉಳಿಸಿಕೊಂಡಿದೇನೆ. ಈ ಲೇಖನಗಳು 'ಜ್ಞಾಪಕ ಚಿತ್ರಶಾಲೆ' ಮಾಲೆಯ ವೈಶಿಷ್ಟ್ಯವನ್ನೂ, ವೈವಿಧ್ಯವನ್ನೂ, ಡಿವಿಜಿ ಬರಹದ ಸ್ವಾರಸ್ಯ ವನ್ನೂ ಸಾಕಷ್ಟು ಸಮರ್ಪಕವಾಗಿ ಪ್ರತಿನಿಧಿಸುತ್ತವೆ ಎಂದುಕೊಂಡಿದೇನೆ. ಈ ಆಯ್ಕೆ ಮೂಲ ಲೇಖನಮಾಲೆಯನ್ನು ಓದಲು ಓದುಗರನ್ನು ಪ್ರಚೋದಿಸಿದರೆ ನನ್ನ ಶ್ರಮ ಸಾರ್ಥಕವಾದಂತೆ.

ಸಂಕಲನಕ್ಕೆ 'ಹಕ್ಕಿಯ ಪಯಣ' ಎಂಬ ಹೆಸರು ಕೊಟ್ಟಿದೇನೆ. ಅದೇ ಹೆಸರಿನ ಒಂದು ಪ್ರಬಂಧವೂ ಇಲ್ಲಿ ಸೇರಿದೆ. ಅದರಲ್ಲಿ ಧ್ವನಿತವಾಗಿರುವ ಜೀವನ 'ದೃಷ್ಟಿ' ಡಿವಿಜಿಯವರ 'ದರ್ಶನ'ವೆಂದು ನನ್ನ ಭಾವನೆ. ಅದರಿಂದ ಆ ಹೆಸರು ಉಚಿತ ಎನ್ನಿಸೀತೆಂದುಕೊಂಡಿದೇನೆ. ಈ ಸಂಕಲನದ ಮೊದಲನೆಯ ಲೇಖನ 'ಉಪೋದ್ಘಾತ' ಎಂಬುದು ಮಿಕ್ಕ ಲೇಖನಗಳಿಗಿಂತ ಭಿನ್ನವಾದದ್ದು. 'ಜ್ಞಾಪಕ ಚಿತ್ರಶಾಲೆ'ಯ ಮೊದಲ ನೆಯ ಸಂಪುಟದಲ್ಲಿ ಪ್ರಕಟವಾದ ಈ ಲೇಖನ ಇಡೀ ಲೇಖನಮಾಲೆಗೆ ಬರೆದ ಪ್ರಸ್ತಾವನೆ ಯೆಂದು ಭಾವಿಸುವುದರಲ್ಲಿ ತಪ್ಪಿಲ್ಲ. ಇದು ಡಿವಿಜಿಯವರ ಪ್ರಸ್ತುತ ಬರಹಗಳಿಗೆ ಸ್ವರೂಪ ನಿರೂಪಣೆಯ ಮುನ್ನುಡಿಯಾಗಿದೆ. ಚರಿತ್ರೆ ಬರವಣಿಗೆಯ ಪದರುಗಳನ್ನು ಅದು ಬಿಡಿಸಿ ವಿವರಿಸುತ್ತದೆ.

ಎದ್ದು ಕಾಣುವಂತಿದ್ದ ಕೆಲವು ಬರವಣಿಗೆಯ ಸ್ಖಾಲಿತ್ಯಗಳನ್ನು ಮುದ್ರಣ ದೋಷ ಗಳನ್ನು ಮಾತ್ರ ಇಲ್ಲಿ ಸರಿಪಡಿಸಿದೆ. ಇನ್ನು ಕೆಲವು ಕಡೆ ಸಂಪಾದಕೀಯ ತಿದ್ದುಪಡಿ ಗಳ ಅಗತ್ಯವಿದ್ದರೂ ಅದರ ಗೋಜಿಗೆ ಹೋಗಿಲ್ಲ. ಇಳಿವಯಸ್ಸು, ಅನಾರೋಗ್ಯ, ದೃಷ್ಟಿ ದೌರ್ಬಲ್ಯ ಇವುಗಳಿಂದಾಗಿ ಡಿವಿಜಿಯವರಿಗೆ ತಮ್ಮ ಈ ಪುಸ್ತಕಗಳನ್ನು ಸ್ವತಃ ಅಚ್ಚಿನಲ್ಲಿ ನೋಡುವುದು ಸಾಧ್ಯವಾಗದಿದ್ದುದರಿಂದ ಜೊತೆಗೆ ಇವು ಹೇಳಿ ಬರೆಸಿದ ಲೇಖನಗಳಾದುದರಿಂದ ಇವನ್ನು ಪರಿಷ್ಕರಿಸುವ ಅಗತ್ಯವಿದೆಯೆಂದು ನನಗೆ ಅನ್ನಿಸಿದೆ. ಅದು ಪ್ರತ್ಯೇಕವಾಗಿ ಆಗಬೇಕಾದ ದೊಡ್ಡ ಕೆಲಸ. ಏಕೆಂದರೆ 'ಜ್ಞಾಪಕ ಚಿತ್ರಶಾಲೆ' ಮಾಲೆಯ ಗ್ರಂಥಗಳು ಈ ಶತಮಾನದ ಕರ್ನಾಟಕದ ಸಾಹಿತ್ಯಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಚರಿತ್ರೆ, ಚರ್ಚೆಗಳಿಗೆ ವಿಶೇಷವಾಗಿ ನೆರವಾಗಬಲ್ಲ ಆಕರಗಳು.

ಈ ಸಂಕಲನದ ಆಯ್ಕೆಯನ್ನು ಪರಿಶೀಲಿಸಿ ಮೆಚ್ಚಿ ಒಪ್ಪಿಗೆ ಕೊಟ್ಟ, ಡಿವಿಜಿ ಕೃತಿಸ್ವಾಮ್ಯ ಹೊಂದಿರುವ ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ಅಧ್ಯಕ್ಷರಾದ ಹಿರಿಯ ಮಿತ್ರರು ಶ್ರೀ ನಿಟ್ಟೂರು ಶ್ರೀನಿವಾಸರಾಯರಿಗೆ, ಮುದ್ರಣದಲ್ಲಿ ನೆರವಾದ ಮಿತ್ರ ಶ್ರೀ ಪ್ರಧಾನ್ ಗುರುದತ್ತ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಹಾ. ಮಾ. ನಾಯಕ

ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು-೬
ಜನವರಿ ೩, ೧೯೭೪

# ಪರಿವಿಡಿ

೧

# ಉಪೋದ್ಘಾತ

ದೇಶಚರಿತ್ರೆ ((History), ವ್ಯಕ್ತಿಚರಿತ್ರೆ (Biography)—ಈ ಎರಡು ಗ್ರಂಥಜಾತಿಗಳೂ ನಮ್ಮ ದೇಶಕ್ಕೆ ತೀರಾ ಹೊಸವು. ಅವು ಯಾವ ದೇಶಕ್ಕೂ ತುಂಬ ಹಳೆಯವಲ್ಲ.

ಈ ಲೇಖನದಲ್ಲಿ 'ಚರಿತ್ರೆ' ಎಂದರೆ ದೇಶದ ಚರಿತ್ರೆ, ಹಿಸ್ಟರಿ (History), ಯಾವುದಾದರೊಂದು ಭೂಭಾಗದ ಅಥವಾ ಪ್ರದೇಶದ ಚರಿತ್ರೆ ಎಂದೂ, 'ವ್ಯಕ್ತಿ ಚರಿತ್ರೆ' ಎಂದರೆ ಒಬ್ಬಾನೊಬ್ಬ ಪ್ರಸಿದ್ಧ ಮನುಷ್ಯನ ಅಥವಾ ಮಹಿಳೆಯ ಜೀವಿತಚರಿತ್ರೆ, ಬಯೋಗ್ರಫಿ (Biography) ಎಂದೂ ಸಂಕೇತ. ವಿವರಗಳನ್ನು ಮುಂದೆ ನೋಡಲಾಗುತ್ತದೆ.

## ಈ ಸಾಹಿತ್ಯ ಎಲ್ಲೆಲ್ಲಿಯೂ ಈಚಿನದು

ಯೂರೋಪು ದೇಶಗಳ ಸಾಹಿತ್ಯ ಸಂಸ್ಕೃತಿಗಳಿಗೆ ಗ್ರೀಸ್ ದೇಶವು ಮಾತೃಸ್ಥಾನವೆಂದು ಎಲ್ಲರೂ ಅಂಗೀಕರಿಸಿದ್ದಾರೆ. ಅದು ಅಲ್ಲಿಗೆ ಬಹು ಪುರಾತನವಾದ ದೇಶ. ಆ ದೇಶದ ಪ್ರಥಮ ಚರಿತ್ರಕಾರನು ಹೆರೊಡೋಟಸ್ (Herodotus). ಇವನ ಕಾಲ ಸುಮಾರು ಕ್ರಿಸ್ತಪೂರ್ವ ೪೮೪ರಿಂದ ೪೨೫. ಇವನು ಬರೆದಿಟ್ಟದ್ದು ತನ್ನ ಕಾಲದ ಕಿಂವದಂತಿಗಳನ್ನ—ಪುರಾಣ ಕಥೆಗಳನ್ನ. ಆ ಪ್ರಬಂಧಗಳನ್ನು ಔಪಚಾರಿಕವಾಗಿ "ಚರಿತ್ರೆ" ಎಂದಿಟ್ಟುಕೊಳ್ಳಬಹುದು. ಅವನಾದ ಮೇಲೆ ಬಂದವನು ಸುಮಾರು ಅದೇ ಕಾಲದ ತುಚಿದಿದೀಸ್ (Thucydides). ಇವನ ಕಾಲ ಕ್ರಿ.ಪೂ. ಸುಮಾರು ೪೭೪ರಿಂದ ಸುಮಾರು ೪೦೩. ಇವನ ಪ್ರಬಂಧವೂ ಬಹುಮಟ್ಟಿಗೆ ಸ್ವಕಪೋಲಕಲ್ಪಿತವೇ. ಅವನ ಕಥಾನಾಯಕರ ಭಾಷಣಗಳನ್ನು ಅವನು ಸ್ವತಃ ಕಿವಿಯಿಂದ ಕೇಳಿದ್ದಿದ್ದರೆ ಹೇಗೋ ಹಾಗೆ 'ಸಾಕ್ಷಾತ್ ಪ್ರಕಾರ' (Direct reporting) ದಲ್ಲಿ, ಈಗಿನ ವರ್ತಮಾನ ಪತ್ರಿಕೆಗಳ ರೀತಿಯಲ್ಲಿ ಬರೆದಿದ್ದಾನೆ. ಆ ಭಾಷಣಗಳನ್ನು ಅವನು ಸ್ವಯಂ ಕೇಳಿದ್ದವನಲ್ಲ. ಬೇರೆ ಯಾರೋ ಕೇಳಿ ಅವನಿಗೆ ಹೇಳಿರಬಹುದೆಂಬುದಾದರೆ ಆ ವರದಿಗಾರನ ಜ್ಞಾಪಕಶಕ್ತಿ ಅದ್ಭುತವಾದದ್ದಾಗಿರಬೇಕು. ಆ ಕಾಲದಲ್ಲಿ ಶೀಘ್ರಲಿಪಿ ಕಲೆ (Shorthand, Stenography)

ಹುಟ್ಟಿರಲಿಲ್ಲ. ತುಚಿದಿದೀಸನು ತನ್ನ ಕಥಾಪಾತ್ರಗಳ ಭಾಷಣ ಘೋಷಣಗಳನ್ನು ತಾನೇ ರಚಿಸಿ ಕಥಾಪಾತ್ರಗಳಿಗೆ ಆರೋಪ ಮಾಡಿರಬೇಕು.

ಇಂಗ್ಲೆಂಡಿನ ಆದಿ ಚರಿತ್ರಕಾರ ಬೀಡ್ (Bede). ಈತನು ಕ್ರಿ.ಶ. ಸುಮಾರು ೬೭೩ರಿಂದ ೭೩೫ರ ವರೆಗೆ ಇದ್ದವನು. ಇವನ ಕೃತಿ ವಿಶೇಷವಾಗಿ ಕ್ರಿಸ್ತ ಮತಗಳ ಚರಿತ್ರೆ. ಇವನ ತರುವಾಯದ ಮಹಾಪ್ರಸಿದ್ಧ ಚರಿತ್ರಕಾರನು ಎಡ್ವರ್ಡ್ ಗಿಬ್ಬನ್ (Edward Gibbon). ಗಿಬ್ಬನ್ನನ ಕಾಲ ಕ್ರಿ.ಶ. ೧೭೩೭–೯೪. ಇವನು ಚರಿತ್ರೆಯಲ್ಲಿ ಆದು ಉತ್ತಮ ಸಾಹಿತ್ಯವೆನ್ನಿಸುವಂತೆ ಕಾವ್ಯದ ಸೊಗಸಿಟ್ಟು ಬರೆದವನು. ಇವನ ಕೃತಿಯ ವಿಷಯ ರೋಮ್ ಚಕ್ರಾಧಿಪತ್ಯದ ಅವನತಿ ಮತ್ತು ಪತನ. ಇವನ ಅನಂತರ ಬಂದ ಚರಿತ್ರಕಾರರಲ್ಲಿ ಮಕಾಲೆ (Macaulay), ಫ್ರೂಡ್ (Froude), ಫ್ರೀಮೆನ್ (Freeman), ಗಾರ್ಡಿನರ್ (Gardiner)—ಇವರು ಪ್ರಸಿದ್ಧರು.

ಇಂಗ್ಲೆಂಡಿನಲ್ಲಿ ಚರಿತ್ರೆಯ ರೂಪದ ಸಾಹಿತ್ಯ ಹೆಚ್ಚಾಗಿ ಬೆಳೆದು ಪ್ರಬಲಿಸಿದ್ದು ಮುಖ್ಯವಾಗಿ ೧೯ನೆಯ ಶತಮಾನದಲ್ಲಿ. ಫ್ರಾನ್ಸ್ ಜರ್ಮನಿಗಳಲ್ಲಿಯೂ ಹಾಗೆಯೇ. ಹೀಗಿರಲಾಗಿ ಹಿಂದೂ ಜನಕ್ಕೆ ಚಾರಿತ್ರಿಕ ಬುದ್ಧಿ (Sense of History) ಇಲ್ಲವೆಂಬ ಅಪವಾದ ಹೇರಿಸುವವರು ವಿಚಾರ ತಿಳಿಯದವರು.

ನಮ್ಮ ಪುರಾಣೇತಿಹಾಸಗಳಲ್ಲಿ ಚಾರಿತ್ರಿಕ ಸಾಮಗ್ರಿ ಅಡಗಿದೆ. ಅದನ್ನು ಗ್ರೀಸಿನ ಹೆರೊಡೋಟಸ್ಸಿನ ಪ್ರಬಂಧದ ಜಾತಿಗೆ ಸೇರಿಸಬಹುದು. ಈಗ ಚರಿತ್ರೆಯೆಂದರೆ ಕಥೆಯಲ್ಲ, ಪುರಾಣವಲ್ಲ, ಇತಿಹಾಸ ಕೂಡ ಅಲ್ಲ. ನಮ್ಮಲ್ಲಿ ಇತಿಹಾಸವೆಂದು ಕರೆಯುವ ಸಾಹಿತ್ಯಜಾತಿಯು ಕೂಡ ಇಂಗ್ಲಿಷಿನ ಹಿಸ್ಟರಿಯಿಂದ ಕೊಂಚ ಬೇರೆಯಾದದ್ದು. ಇತಿ + ಹ + ಆಸ—"ಹೀಗೆ ಆಯಿತಲ್ಲವೆ"—ಎಂಬುದು ಶಬ್ದಾರ್ಥ. ಇದೂ ಕಿಂವದಂತಿಯೇ. ಇದನ್ನು ಪುರಾವೃತ್ತವೆಂದು ಕರೆದಿದ್ದಾರೆ. ಇದು ಹಿಸ್ಟರಿಗೆ ಹತ್ತಿರ ಹತ್ತಿರ ಬರುತ್ತದೆ. ಚರಿತ್ರೆಯಲ್ಲಿ ಹೇಳುವ ಪ್ರತಿಯೊಂದು ಸಂಗತಿಯೂ ದಾಖಲೆಯಿಂದಲೂ ಸಾಕ್ಷ್ಯದಿಂದಲೂ ರುಜುವಾತಾದದ್ದಾಗಿರಬೇಕು. ಕೋರ್ಟುಗಳಲ್ಲಿ ಹೇಳಿದ ಸಂಗತಿಗಳು ಹೇಗೆ ದಸ್ತಾವೇಜುಗಳಿಂದಲೂ ಸಾಕ್ಷ್ಯಗಳ ವಾಙ್ಮೂಲಗಳಿಂದಲೂ ಪ್ರಮಾಣಪೂರ್ವಕವಾಗಿ ದೃಢಪಟ್ಟಿರಬೇಕೋ ಚರಿತ್ರೆಯ ಅಂಶಗಳೂ ಹಾಗೆ ಪ್ರಮಾಣಗಳಿಂದ ಸ್ಥಿರಪಟ್ಟಿರಬೇಕು. ಇದೇ ಪ್ರಕೃತಕಾಲದ ಚರಿತ್ರೆಯೆಂಬ ಸಾಹಿತ್ಯದ ಮುಖ್ಯ ಲಕ್ಷಣ. ಅದು ರುಜುವಾತಾದ ಸಂಗತಿಗಳ ಅರ್ಥಕಲ್ಪನೆ (Interpretation).

## ಚರಿತ್ರೆಯ ಮುಖ್ಯ ವಿಷಯ

ಹೀಗೆ ದೇಶಚರಿತ್ರೆಯೆಂಬ ಸಾಹಿತ್ಯಪ್ರಭೇದದಲ್ಲಿ ಮುಖ್ಯವಾಗಿ ಎರಡಂಶಗಳು ಅಂತರ್ಗತವಾಗಿರುತ್ತವೆ:

(೧) ಹೊರಗಣ ರುಜುವಾತಿಗೆ ಸಿಕ್ಕುವ ತಾರೀಖು, ಸ್ಥಳ, ಮಾನುಷ ಘಟನೆ, ಸಾಕ್ಷಿ—ಇಂಥ ಬಹಿರಂಗ ಸಂಗತಿಗಳು.

(೨) ಹೊರಗಣ ರುಜುವಾತಿಗೆ ಸಿಕ್ಕದೆ ಊಹೆಗೆ ಮಾತ್ರ ತೋರುವ ಜನದ ಮನೋಗತಗಳು, ಜನನಾಯಕರ ಅಂತರಂಗದ ಆಶಯಗಳು, ರಾಜರ ಸ್ವಾರ್ಥ ತಾತ್ಪರ್ಯಗಳು, ದಂಡನಾಯಕರ ಒಳಸಂಚುಗಳು, ಮಂತ್ರಿಗಳ ಹುನ್ನರುಗಳು–ಇವೇ ಮೊದಲಾದವು.

ಒಂದು ಉದಾಹರಣೆ: ಒಂದಾನೊಂದು ಆಕಾಶ ವಿಮಾನವು ಬೆಂಗಳೂರಿನ ಮೇಲೆ ಹಾರಿಹೋಯಿತೆಂದು ಭಾವಿಸೋಣ. ಅದು ಯಾವ ತಾರೀಖಿನಲ್ಲಿ, ಎಷ್ಟು ಹೊತ್ತಿನಲ್ಲಿ, ಯಾವ ದಿಕ್ಕಿನಿಂದ ಯಾವ ದಿಕ್ಕಿಗೆ–ಇಂಥ ವಿವರಗಳು ರುಜುವಾತಿಗೆ ಸಿಕ್ಕತಕ್ಕವು. ಆ ವಿಮಾನದಲ್ಲಿದ್ದದ್ದು ಯುದ್ಧ ಸಾಮಗ್ರಿಯೇ, ಔಷಧಗಳೇ, ವೈದ್ಯರೇ, ಆಹಾರ ಸಾಮಗ್ರಿಯೇ, ಅದನ್ನು ವಿತರಣೆ ಮಾಡುವ ದಾದಿಯರೇ? ಆ ವಿಮಾನ ಬರ್ಮಾ ಕಡೆಗೆ ಹೋಯಿತೇ, ಚೀಣಕ್ಕೆ ಹೋಯಿತೆ? ಚೀಣಕ್ಕೆ ಹೋದುದರ ಉದ್ದೇಶವೇನಿರಬಹುದು?—ಇವು ಊಹಾಪೋಹಗಳ ವಿಷಯ.

ಚರಿತ್ರೆಯಲ್ಲಿ ಹೀಗೆ ವಾಸ್ತವದ ಸಂಗತಿಗಳೂ, ಊಹಾಪೋಹದ ತರ್ಕಗಳೂ ಬೆರೆತುಕೊಂಡಿರುತ್ತವೆ. ಅವುಗಳನ್ನು ಬಿಡಿಸಿ ವಿಮರ್ಶೆ ಮಾಡುವುದು ಪ್ರಯಾಸದ ಕೆಲಸ. ಚರಿತ್ರಕಾರರಲ್ಲಿ ಭೇದವುಂಟಾಗುವುದು ಈ ಕಾರಣದಿಂದ.

ಚರಿತ್ರೆಯು ಸಾಹಿತ್ಯದ ಒಂದು ಪ್ರಭೇದವೆನಿಸುವುದು ಸ್ವಾಭಾವಿಕ. ಸಾಹಿತ್ಯವೆಂಬುದೇನು? ಒಟ್ಟಿನಲ್ಲಿ ಸಾಹಿತ್ಯವೆಂಬುದು ಮನುಷ್ಯಸನ್ನಿವೇಶಗಳ, ಮನುಷ್ಯವರ್ತನೆ ಪ್ರತಿವರ್ತನೆಗಳ ಮತ್ತು ಅವುಗಳಿಂದ ತೋರುವ ಆಶಯ ಉದ್ದೇಶಗಳ ನಿರೂಪಣೆ. ಇಂಥ ನಿರೂಪಣೆಯ ಸಂಗತಿಗಳು ಬಹುಶಃ ಕಲ್ಪಿತಗಳಾಗಿದ್ದರೆ ಅದು ಕಾವ್ಯವೋ ನಾಟಕವೋ ಕಾದಂಬರಿಯೋ ಆಗುತ್ತದೆ. ಆ ಸಂಗತಿಗಳು ವಾಸ್ತವಿಕ ಪ್ರಪಂಚದವಾಗಿದ್ದಾಗ ಅದು ಚರಿತ್ರೆಯೆನಿಸುತ್ತದೆ. ಚರಿತ್ರೆ ಸಾಹಿತ್ಯಗಳೆರಡಕ್ಕೂ ಮೂಲದ್ರವ್ಯ ಒಂದೇ. ಅದು ಮನುಷ್ಯಸ್ವಭಾವ. ಮನುಷ್ಯಸ್ವಭಾವದ ಊಹಾಪೋಹ ಕಲ್ಪನೆಯ ವರ್ಣ

ನೆಯೇ ಶುದ್ಧ ಸಾಹಿತ್ಯ.. ಅದರ ಯಥಾವತ್ತಾದ ವರದಿಯೇ ಚರಿತ್ರೆ. ವಾಗ್ಗುಂಫನದ ಸೊಗಸಿಗೂ, ವರ್ಣನೆಯ ಬೆಡಗಿಗೂ, ಕಥನ ಧೋರಣೆಗೂ ಎರಡರಲ್ಲೂ ಅವಕಾಶವುಂಟು. ಇಂಗ್ಲಿಷ್ ಚರಿತ್ರಕಾರರಲ್ಲಿ ಗಿಬ್ಬನ್, ಮಕಾಲೆ, ಫ್ರೂಡ್, ಟ್ರೆವೆಲ್ಯನ್—ಇವರ ಲೇಖನಶೈಲಿಯೂ ವರ್ಣನಾ ವೈಖರಿಯೂ, ಕಥನ ಚಮತ್ಕಾರವೂ ಇವರನ್ನು ಪ್ರಸಿದ್ಧರನ್ನಾಗಿಸಿ ಸಾಹಿತ್ಯ ಕಾರರ ಪಂಕ್ತಿಗೆ ಸೇರಿಸಿವೆ.

ವಾಸ್ತವಿಕ ಸಂಗತಿಗಳನ್ನು ವರದಿ ಮಾಡುವುದರಲ್ಲಿ ಲೇಖಕನು ತನ್ನ ಊಹಾಪೋಹಗಳನ್ನು ನಡಸುವಾಗ ವಾಸ್ತವ ಸತ್ಯಕ್ಕೆ ಅಷ್ಟಿಷ್ಟು ಧಕ್ಕೆ ತಗಲ ಬಹುದಲ್ಲ—ಎಂಬ ಆಕ್ಷೇಪಣೆ ಇಂಗ್ಲೆಂಡಿನಲ್ಲಿ ಇದ್ದದ್ದುಂಟು. ಈ ತರ್ಕದಲ್ಲಿ ಹೆಸರಾದವರು ಒಂದು ಕಡೆಯ ಫ್ರೂಡ್, ಇನ್ನೊಂದು ಕಡೆಯ ಫ್ರೀಮೆನ್. ಈ ತರ್ಕವು ತಾರ್ಕಿಕರ ಮನಸ್ಸಿನ ಧೋರಣೆಯನ್ನವಲಂಬಿಸಿಕೊಂಡಿರುತ್ತದೆ. ಸರ್ವಸಮ್ಮತವಾಗುವ ಉತ್ತರ ಅದಕ್ಕೆ ದುರ್ಲಭ. ಒಂದೇ ಕಾವ್ಯಕ್ಕೆ ಅರ್ಥ ಮಾಡುವುದರಲ್ಲಿ ಬೇರೆ ಬೇರೆ ವ್ಯಾಖ್ಯಾನಕಾರರು ಹೇಗೆ ಭಿನ್ನಾಭಿಪ್ರಾಯ ಗಳುಳ್ಳವರಾಗಿರುತ್ತಾರೋ ಹಾಗೆ ಒಂದಾನೊಂದು ವಾಸ್ತವಿಕ ಸಂಗತಿಯ ಅರ್ಥವ್ಯಾಪ್ತಿಯನ್ನು ಊಹಿಸುವುದರಲ್ಲಿ ಚರಿತ್ರಲೇಖಕರು ಭಿನ್ನಾಭಿಪ್ರಾಯ ವುಳ್ಳವರಾಗಿರುವುದು ಸಹಜ. ಇಂಥ ಸಂದರ್ಭದಲ್ಲಿ ವಾಚಕನ ಪಾಡೇನೆಂದು ಕೇಳಿದರೆ, ವಾಚಕನು ತನ್ನ ಸ್ವಂತ ವಿವೇಕವನ್ನು ಉಪಯೋಗಿಸಿ ಅದರಂತೆ ನಿರ್ಧರಿಸಿಕೊಳ್ಳಲು ಸ್ವತಂತ್ರನಾಗಿರುತ್ತಾನೆನ್ನಬೇಕಾಗುತ್ತದೆ. ಇಂಥ ವಿವೇಚನೆ ವಾಚಕನಿಗಿರುವ ಸ್ವಾತಂತ್ರ್ಯ ಮಾತ್ರವೇ ಅಲ್ಲ; ಅದು ಅವನ ಕರ್ತವ್ಯವೂ ಹೌದು. ಸೀಲಿ (Seeley) ಎಂಬ ಪ್ರಸಿದ್ಧ ಚರಿತ್ರಕಾರನು ಹೀಗೆ ಹೇಳಿದ್ದಾನೆ: ಈ ಹೊತ್ತು ನಾವು ಯಾವುದನ್ನು ಚರಿತ್ರೆ ಎನ್ನು ತ್ತೇವೆಯೊ ಅದರ ಸಂಗತಿ ನಿನ್ನೆಯ ರಾಜಕೀಯ. ನಮ್ಮ ಈ ಹೊತ್ತಿನ ರಾಜಕೀಯ ನಾಳೆಯ ಚರಿತ್ರೆಗೆ ವಸ್ತುವಾಗುತ್ತದೆ.

## ಚರಿತ್ರೆಯ ಆವಶ್ಯಕತೆ

ಹೀಗೆಂದರೆ ಅರ್ಥವೇನು ? ಚರಿತ್ರೆ ನಮ್ಮನ್ನು ಎಂದೂ ಬಿಟ್ಟದ್ದಲ್ಲ ಎಂದು. ನಾವು ಮಾಡುವುದು, ಮಾಡದೆ ಬಿಡುವುದು, ನಾವು ಪಡುವುದು, ಪಡದೆ ತಪ್ಪಿಸಿಕೊಳ್ಳುವುದು, ಇಂಥ ಎಲ್ಲ ನಮ್ಮ ಪಾಡೂ ಚರಿತ್ರೆಯೇ ಆದದ್ದರಿಂದ ನಾವು ಮಾಡುವುದರಲ್ಲಿಯೂ, ಪಡುವುದರಲ್ಲಿಯೂ, ವಿವೇಕದಿಂದ ನಡೆದು

ಕೊಂಡರೆ ಅಪಾಯಗಳು ತಪ್ಪುತ್ತವೆ, ಇಷ್ಟಾರ್ಥಗಳು ಕೊಂಚಮಟ್ಟಿಗಾದರೂ ಕೈಗೂಡುತ್ತವೆ ಎಂಬುದು. ಇಂಥ ವಿವೇಕವನ್ನು ನಾವು ಸಂಪಾದಿಸಿಕೊಳ್ಳಬೇಕೆಂದರೆ ಚರಿತ್ರೆಯ ವ್ಯಾಸಂಗವೇ ನಮಗಿರುವ ದಾರಿ.

ನಮ್ಮ ದೇಶದಲ್ಲಿ ಚರಿತ್ರೆಯ–ನಾನಾ ದೇಶಗಳ ಚರಿತ್ರೆಯ–ವ್ಯಾಸಂಗ ಈಗ ತೀರ ಕಡಮೆಯಾಗಿದೆ. ವಿಜ್ಞಾನ ಈಗೀಗ ಬಹುಮುಖ್ಯ ಎಂದು ಹೇಳುತ್ತ ಆ ನೆವದಲ್ಲಿ ಚರಿತ್ರೆಯ ಪ್ರಶಸ್ತಿಯನ್ನು ತಗ್ಗಿಸಿದ್ದೇವೆ. ಇದರ ಫಲಿತಾಂಶ ಈಗ ನಮ್ಮ ಅನುಭವಕ್ಕೆ ಚೆನ್ನಾಗಿ ಬರುತ್ತಿದೆ. ಹಿಂದು ಮುಂದು ತಿಳಿಯದೆ, ಹಿಂದೇನು ಮುಂದೇನೆಂದು ವಿಚಾರಿಸದೆ ರಾಜ್ಯ ನಿರ್ವಾಹ ಮಾಡುತ್ತೇವೆಂಬ ಕಾರ್ಯವಂತಿಕೆಯೇ ಆ ಫಲಿತಾಂಶ.

ದೇಶಚರಿತ್ರೆಯು ಆ ದೇಶದ ಜನಸಮಷ್ಟಿಯ ಚರಿತ್ರೆ; ಆ ಜನತೆಯ ಒಟ್ಟು ಜೀವನವನ್ನು ಕುರಿತ ಚರಿತ್ರೆ ಮತ್ತು ಜನಜೀವನದ ಎಲ್ಲ ಕ್ಷೇತ್ರಗಳಿಗೂ ಸೇರಿದ ಚರಿತ್ರೆ. ಹಾಗಿದ್ದರೂ ಮೊದಮೊದಲು ಆದ ಚರಿತ್ರೆಯ ಪುಸ್ತಕಗಳಲ್ಲಿ ರಾಜರೇ ಕಥಾನಾಯಕರಾಗಿದ್ದಾರೆ. ಜನಸಾಮಾನ್ಯದ ವಿಷಯ ಆ ಪುಸ್ತಕಗಳಲ್ಲಿ ಹೆಚ್ಚಾಗಿ ಕಾಣಬರುವುದಿಲ್ಲ. ರಾಜ, ಅವನ ದಂಡಯಾತ್ರೆಗಳು, ಅವನ ಸೇನಾನಾಯಕರು, ಅವನ ಪರಿವಾರ, ಅವನ ವೈಭವ, ಅವನ ಪ್ರತಾಪ—ಇವೇ ಪೂರ್ವಕಾಲದಲ್ಲಿ ಬರೆದ ಚರಿತ್ರೆಗಳಲ್ಲಿ ಎದ್ದು ಕಾಣುವ ಸಂಗತಿಗಳು. ಜನ ಹೇಗೆ ಬದುಕಿತ್ತು, ಅದಕ್ಕೆ ಏನು ಕಷ್ಟವಿತ್ತು, ಆ ಕಷ್ಟ ಹೇಗೆ ಪರಿಹಾರವಾಯಿತು—ಇಂಥ ವಿಚಾರಗಳು ಎಲ್ಲೋ ಒಂದೆರಡು ಪಂಕ್ತಿಯಷ್ಟು ಕೊಂಚವಾಗಿ ಕಾಣಬರುತ್ತವೆ.

ಇದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಲ್ಲ. ಪೂರ್ವಕಾಲದಲ್ಲಿ ಜನರ ಆಗುಹೋಗುಗಳೆಲ್ಲ ರಾಜನ ಕೈಯಲ್ಲಿದ್ದವು. ಅವನು ಸೂತ್ರ ತಿರುಗಿಸಿದಂತೆ ದೇಶಕಾರ್ಯಗಳು ನಡೆಯುತ್ತಿದ್ದವು. ಜನರು ರಾಜನನ್ನು ತಮ್ಮ ಏಕೈಕ ಪ್ರತಿನಿಧಿಯನ್ನಾಗಿ ಅಂಗೀಕರಿಸಿದ್ದರು. ಜನದ ಜೀವನ ಸರ್ವಸ್ವವೂ ರಾಜನ ಅಧೀನದಲ್ಲಿತ್ತು. ಆದದ್ದರಿಂದ ರಾಜಚರಿತ್ರೆಯೇ ದೇಶಚರಿತ್ರೆಯಾಯಿತು.

ರಾಜವಂಶ, ರಾಯಭಾರಿಗಳ ಬರೋಣ–ಹೋಗೋಣಗಳು, ದಂಡನಾಯಕರ ಪರಾಕ್ರಮ, ಯುದ್ಧರಂಗ, ಯುದ್ಧದಲ್ಲಿ ಸೇರಿದ್ದ ಚತುರಂಗಬಲದ ಸಂಖ್ಯೆ-ಸಜ್ಜುಗಳು, ಪಕ್ಷ-ಪ್ರತಿಪಕ್ಷಗಳ ಜಯಾಪಜಯಗಳು, ಪಲಾಯನಗಳು, ಕೌಲು-ಕರಾರುಗಳು—ಇವೇ ಮೊದಮೊದಲಿನ ಚರಿತ್ರೆಯ ಮುಖ್ಯ

ವಿಷಯಗಳಾಗಿದ್ದವು. ಹೀಗೆ ರಾಜಕೀಯವೇ ಚರಿತ್ರೆಯ ಮುಖ್ಯ ವಸ್ತು ವೆಂಬ ಭಾವನೆ ಪ್ರಬಲಿಸಿತು.

## ಚರಿತ್ರೆಯಲ್ಲಿ ಹೊಸ ರೀತಿ

ಕಾಲಕ್ರಮದಲ್ಲಿ ಈ ಭಾವನೆ ಬದಲಾಯಿಸಿತು. ಪಾಶ್ಚಾತ್ಯ ದೇಶಗಳಲ್ಲಿ ಪ್ರಜಾಭಿಪ್ರಾಯ ಬಲಪಟ್ಟು, ರಾಜ್ಯನಿರ್ವಾಹದಲ್ಲಿ ಪ್ರಜೆಯೆಂಬ ಭಾಗಕ್ಕೆ ಪ್ರಾಬಲ್ಯ ಬಂದಂತೆಲ್ಲಾ ಪ್ರಜೆಯೆಂಬ ರಾಜ್ಯಾಂಗದ ಮಹತ್ತ್ವವು ಚರಿತ್ರ ಲೇಖಕರಿಗೆ ಸ್ಪಷ್ಟವಾಗುತ್ತ ಬಂತು. ಅಲ್ಲಿಂದೀಚಿನ ಚರಿತ್ರೆಗಳಲ್ಲಿ ರಾಜಕೀಯವು ಎಷ್ಟು ಮುಖ್ಯವೋ ಜನಜೀವನದ ಇತರ ಕ್ಷೇತ್ರಗಳೂ ಅಷ್ಟು ಮುಖ್ಯವೆಂದು ಅಂಗೀಕೃತವಾಯಿತು. ದೇಶದ ಸಂಪತ್ತಿನ ಸ್ಥಿತಿ, ವ್ಯಾಪಾರ, ಜನದಲ್ಲಿ ವಿದ್ಯಾಪ್ರಚಾರ, ಕಲಾಕುಶಲತೆ, ವಿಜ್ಞಾನಾಭಿವೃದ್ಧಿ, ಅವರ ಮತಾಚಾರ ಗಳು, ಧರ್ಮ ಸಮಯಗಳು—ಇವೆಲ್ಲ ಚರಿತ್ರೆಗೆ ತಕ್ಕ ವಿಷಯಗಳೆಂದು ಸಾಮಾನ್ಯವಾಗಿ ಅಂಗೀಕೃತವಾಯಿತು. ಹೀಗೆ, ಈಚೀಚಿನ ಚರಿತ್ರಕಾರರು ಸಮಾಜಜೀವನವನ್ನೂ, ಜನದ ಸಂಸ್ಥೆ-ಸಂಪ್ರದಾಯಗಳನ್ನೂ ಚಿತ್ರಿಸು ವುದಕ್ಕೆ ಪ್ರಾರಂಭಿಸಿದರು. ಇನ್ನೂ ಈಚಿನ ಚರಿತ್ರಕಾರರು ದೇಶದಲ್ಲಾಗುವ ವಿಜ್ಞಾನ ಸಂಶೋಧನೆ, ವಿವಿಧ ಸಾಹಸಗಳು, ಯಂತ್ರ ಪರಿಶ್ರಮ, ಸಂಸ್ಕೃತಿ ಪ್ರಚಾರ, ತತ್ತ್ವಶೋಧನೆ ಇವೆಲ್ಲವೂ ಜನಜೀವನದ ಮುಖ್ಯ ಲಕ್ಷಣಗಳಾ ದದ್ದರಿಂದ ಆ ಎಲ್ಲ ವಿಷಯಗಳೂ ಚರಿತ್ರೆಯ ಗ್ರಂಥಕ್ಕೆ ಅವಶ್ಯವಾದ ಸಾಮಗ್ರಿಯೆಂದು ಪರಿಗಣಿಸಿರುತ್ತಾರೆ. ಈಚೀಚಿನ ಪ್ರಸಿದ್ಧ ಚರಿತ್ರಕಾರ ರಾದ ಟ್ರೆವೆಲ್ಯನ್ (Trevelyan), ನ್ಯಾಮಿಯರ್ (Namier), ಬ್ಯೂರಿ (Bury), ಗೂಚ್ (Gooch) ಮೊದಲಾದವರ ಲೇಖನಗಳಲ್ಲಿ ಚರಿತ್ರೆಯ ವಿಷಯ ವಿಸ್ತಾರವನ್ನು ಚೆನ್ನಾಗಿ ಕಾಣಲಾಗುತ್ತದೆ.

## ವ್ಯಕ್ತಿ ಚರಿತ್ರೆ

ದೇಶಚರಿತ್ರೆಯು ಹೀಗೆ ಸಮಗ್ರ ಜನಜೀವನದ ಪ್ರತಿಬಿಂಬವಾದರೆ ವ್ಯಕ್ತಿ ಚರಿತ್ರೆಯು ಜನಜೀವನದ ಮೂಲಾಂಕುರಪ್ರಾಯಗಳಾದ ಮಹಾಪುರುಷರ ಪ್ರತಿಬಿಂಬ. ಸಮಾಜದಲ್ಲಿ ಆಗಿಂದಾಗ್ಗೆ ಹೊರಡುವ ಹೊಸಹೊಸ ಅಭಿಪ್ರಾಯ ಗಳು, ಹೊಸಹೊಸ ಸಮಾರಂಭಗಳು, ಹೊಸಹೊಸ ಸಂಸ್ಥೆಗಳು—ಇವಕ್ಕೆ ಪ್ರಥಮಕಾರಣರಾದವರು ಜನಜೀವಿತದ ಮೂಲಪುರುಷರು. ಅವರ ಬೋಧನೆ

ಯಂತೆ, ಅವರು ಮಾಡಿದ ವಾದಪ್ರಚಾರದಂತೆ, ಅವರು ಅನುಸರಿಸಿದ ಸಂಪ್ರದಾಯದಂತೆ, ಅವರು ನಡೆದ ನಡವಳಿಕೆಯಂತೆ, ಜನಸಾಮಾನ್ಯ ನಡೆಯುತ್ತದೆ.

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥
—ಗೀತಾ, ೩–೨೧

ಹೀಗೆ, ಜನಜೀವನಕ್ಕೆ ಕೊಂಚವಾಗಿಯೋ ಹೆಚ್ಚಾಗಿಯೋ ಅಂಕುರಪ್ರಾಯರಾಗಿದ್ದವರು ಗಣ್ಯ ಪುರುಷರು. ಅಂಥವರ ಚರಿತ್ರೆ ಜೀವನಚರಿತ್ರೆ (Biography). ಹೀಗೆ ಜೀವನಚರಿತ್ರೆ ಎಂಬ ಸಾಹಿತ್ಯಜಾತಿಯು ದೇಶಚರಿತ್ರೆ ಎಂಬ ಸಾಹಿತ್ಯಕ್ಕೆ ಅಂಗಭೂತವಾದದ್ದು. ಜೀವನಚರಿತ್ರೆಯನ್ನು ದೇಶಚರಿತ್ರೆಯ ಅಂತರಂಗವೆಂದು ಭಾವಿಸುವುದು ಯುಕ್ತವಾಗುತ್ತದೆ.

ದೇಶಚರಿತ್ರೆಯ ರೂಪದ ಗ್ರಂಥರಚನೆಯು ಸಾಹಿತ್ಯದ ಚರಿತ್ರೆಯಲ್ಲಿ ಈಚೀಚಿನದೆಂದು ಮೇಲೆ ಹೇಳಿದೆ. ದೇಶಚರಿತ್ರೆಗಿಂತ ಆಧುನಿಕವಾದದ್ದು ವ್ಯಕ್ತಿಚರಿತ್ರೆ. ನಮ್ಮ ದೇಶದಲ್ಲಿ ಜೀವನಚರಿತ್ರೆಯ ಸಾಹಿತ್ಯವು ಗಾತ್ರದಲ್ಲಿ ಸಣ್ಣದಾಗಿದೆಯೆಂಬ ಕಾರಣದಿಂದ ನಾವು ಸಂಕೋಚಪಟ್ಟುಕೊಳ್ಳಬೇಕಾದ ಕಾರಣವಿಲ್ಲ. ಎಲ್ಲ ದೇಶಗಳಲ್ಲಿಯೂ ಅದು ಈಚೀಚಿನ ಸಾಹಿತ್ಯರಚನೆಯೇ.

ನಮ್ಮಲ್ಲಿ ಎಲ್ಲ ದೇಶಗಳಲ್ಲಿಯೂ ಇರುವಂತೆ ಜೀವನಚರಿತ್ರೆಯ ಸಾಹಿತ್ಯ ಕಾಲಕ್ರಮದಲ್ಲಿ ವೃದ್ಧಿಯಾಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಅಷ್ಟೇ ಅಲ್ಲ, ಅದು ಅತಿಯಾಗಿ ವೃದ್ಧಿಯಾದೀತೆಂದು ಶಂಕೆಪಡುವುದು ಅಕಾರಣವಲ್ಲ. ರಾಜಾಧಿರಾಜರುಗಳ ಕಾಲದಲ್ಲಿ, ಪಾಳೆಯಗಾರರ ಕಾಲದಲ್ಲಿ ಲೇಖನಶಕ್ತಿಯಿದ್ದ ವಿದ್ವಾಂಸರಿಗೆ ಆಶ್ರಯಕೊಟ್ಟು, ಅವರಿಂದ ಸ್ವಪ್ರಶಂಸಾ ಕಾವ್ಯವನ್ನು ಬರೆಯಿಸಿಕೊಂಡದ್ದೂ ಅಪರೂಪವಲ್ಲ. ನಮ್ಮ ಮಠಾಚಾರ್ಯರುಗಳನ್ನೂ, ಅವರ ಶಿಷ್ಯರುಗಳನ್ನೂ ಕುರಿತು ದಿಗ್ವಿಜಯ ಗ್ರಂಥಗಳು ಹೇರಳವಾಗಿವೆ. ಇನ್ನು ಮುಂದೆ ರಾಜಕೀಯದಲ್ಲಿಯೂ ವ್ಯಾಪಾರದಲ್ಲಿಯೂ ಪ್ರಸಿದ್ಧರಾದವರೂ ಮತ್ತು ಪ್ರಸಿದ್ಧಿಯನ್ನು ಅಪೇಕ್ಷಿಸುವವರೂ ತಮ್ಮ ತಮ್ಮ ಜೀವನಚರಿತ್ರೆಯನ್ನು ಬರೆಯಿಸಿ ಪ್ರಕಟಿಸಬಹುದು. ಇಂಗ್ಲಿಷ್ ಭಾಷೆಯಲ್ಲಿ ಇಂಥಾದ್ದು ನಡೆದಿದೆ. ಗ್ರಾಮಾಂತರಗಳ ಪಾದರಿಗಳ ಜೀವನಚರಿತ್ರೆಗಳನ್ನೂ, ಅವರ ಭಾಷಣಗಳ ಸಂಗ್ರಹವನ್ನೂ ಅವರ ಮಕ್ಕಳೋ, ಇತರ ಅಭಿಮಾನಿಗಳೋ ಪ್ರಕಟಿಸಿರುತ್ತಾರೆ. ಹತ್ತಿಪ್ಪತ್ತು ವರ್ಷಗಳ ಅನಂತರ ಆ ಪ್ರಬಂಧ

ಗಳು ಅವರ ಹತ್ತಿರದ ಜನರ ನೆನಪಿನಿಂದಲೂ ಅಳಿಸಿಹೋಗಿರುತ್ತವೆ. ಇಂಥ ಹುಲ್ಲು ಸಾಹಿತ್ಯದ ರಚನೆಯನ್ನು ತಪ್ಪಿಸುವುದು ಸಾಧ್ಯವಾಗಲಾರದು. ಆದರೂ ಸಾಹಿತ್ಯಾಭಿಮಾನಿಗಳು ಇಂಥ ಅಪಾಯ ಉಂಟೆಂಬುದನ್ನು ಜ್ಞಾಪಕದಲ್ಲಿರಿಸಿಕೊಳ್ಳುವುದು ಅವರ ಕರ್ತವ್ಯವಾಗುತ್ತದೆ.

## ಎರಡು ಪಕ್ಕಗಳು

ಜೀವನ ಚರಿತ್ರೆಯ ಮುಖ್ಯಾಂಶಗಳನ್ನು ಎರಡು ಜಾತಿಯಾಗಿ ವಿಂಗಡಿಸ ಬಹುದು— ೧. ಬಾಹ್ಯಸಂಗತಿಗಳು, ೨. ಅಂತಃಸ್ವಭಾವ.

ಬಾಹ್ಯಸಂಗತಿಗಳು ಎಂದರೆ, ಚರಿತ್ರನಾಯಕ ಹುಟ್ಟಿದ ತಾರೀಖು, ಸ್ಥಳ, ಕುಲ, ವಂಶಾನುಪೂರ್ವಿ, ವಿದ್ಯಾಭ್ಯಾಸದ ಸ್ಥಳ, ಅವನು ತೇರ್ಗಡೆ ಹೊಂದಿದ ಪರೀಕ್ಷೆಗಳು, ಅವನು ಸಂಪಾದಿಸಿದ ಹುದ್ದೆಗಳು, ಅವನ ವರಮಾನ, ಅವನ ಪ್ರಯಾಣಗಳು, ಅವನು ಮಾಡಿದ ಭಾಷಣಗಳು, ಅವನ ಲೇಖನಗಳು, ಅವನಿಗೆ ಬಂದ ಜಯಪತ್ರಗಳು, ಪ್ರಶಸ್ತಿಗಳು—ಇವು ಹೊರಗಣ ಸಂಗತಿಗಳು. ಈ ಸಂಗತಿಗಳು ಒಬ್ಬಾನೊಬ್ಬ ಮನುಷ್ಯನ ಛಾಯಾಚಿತ್ರಗಳಂತೆ (Photograph) ಅವನ ಆಕಾರ-ವಿಕಾರಗಳನ್ನು ಕೊಂಚ ಮಟ್ಟಿಗೆ ಗುರುತುಮಾಡಿಕೊಡುತ್ತವೆ.

ಇದಕ್ಕಿಂತ ಮುಖ್ಯವಾದದ್ದು ಅವನ ಅಂತರಂಗದ ನಿರೂಪಣೆ. ಆತನು ತುಂಬ ಪ್ರೀತಿಯಿಂದ ನೋಡುತ್ತಿದ್ದುದು ಎಂಥವರನ್ನ, ಅವನ ಆಪ್ತಮಿತ್ರರು ಯಾರ್ಯಾರು, ಅವನ ಸಂಭಾಷಣ ವಿಷಯಗಳೇನು, ಅವನಿಗೆ ಅತ್ಯಂತ ಪ್ರಿಯವಾದ ಕಾಲಕ್ಷೇಪದ ಮಾರ್ಗ ಯಾವುದು—ಸಂಗೀತವೇ, ಸಾಹಿತ್ಯವೇ, ತತ್ತ್ವವಿಚಾರಗಳೇ, ಗಣಿತವಿಜ್ಞಾನಾದಿಶಾಸ್ತ್ರಗಳೇ, ಕಾಡುಹರಟೆಯೇ? ಅವನಿಗೆ ಅತ್ಯಂತ ಪ್ರಿಯವಾಗಿದ್ದ ಗ್ರಂಥ ಯಾವುದು? ಆಚಾರ ಸಂಪ್ರದಾಯಗಳಲ್ಲಿ ಅವನು ತನ್ನ ನಿತ್ಯಜೀವನದಲ್ಲಿ ಅನುಸರಿಸುತ್ತಿದ್ದ ಮಾರ್ಗ ಯಾವುದು, ಸಾರ್ವಜನಿಕ ವಿಷಯಗಳಲ್ಲಿ ಅವನ ಪಂಥ ಯಾವುದು, ಅವನು ಬಹಿರಂಗವಾಗಿ ಸಾರುತ್ತಿದ್ದ ಅಭಿಪ್ರಾಯಗಳಿಗೂ, ಅಂತರಂಗವಾಗಿ ನಡೆಯುತ್ತಿದ್ದ ನಡವಳಿಕೆಗಳಿಗೂ ಹೊಂದಿಕೆ ಎಷ್ಟು ಮಾತ್ರ ಇತ್ತು—ಜೀವನಚರಿತ್ರೆಯಿಂದ ನಮಗೆ ತಿಳಿದುಬರಬೇಕಾದ ಅಂಶಗಳು ಈ ಅಂತರಂಗದ ಜಾತಿಯವು.

ದೇಶಜೀವನದ ಮುಖ್ಯ ಲಕ್ಷಣಗಳಿಗೂ, ಮುಖ್ಯ ಸಮಾರಂಭಗಳಿಗೂ ಮೂಲಕಾರಣರಾದವರು ಜೀವನಚರಿತ್ರೆಗೆ ಅರ್ಹರಾದ ಗಣ್ಯಪುರುಷರೆಂದು

ಮೇಲೆ ವಿಜ್ಞಾಪಿಸಿದೆ. ಯಾರು ತಮ್ಮ ಆಲೋಚನೆ–ಅಭಿಪ್ರಾಯಗಳ ಪ್ರಭಾವದಿಂದಾಗಲೀ ತಮ್ಮ ಸೌಶೀಲ್ಯ–ಸೌಜನ್ಯಗಳ ಪ್ರಭಾವದಿಂದಲಾಗಲೀ ಜನತೆಯ ಮೇಲೆ ಅಷ್ಟಿಷ್ಟು ಪರಿಣಾಮವನ್ನು ಉಂಟುಮಾಡಿರುತ್ತಾರೋ ಅಂಥವರು ಜೀವನ ಚರಿತ್ರೆಗೆ ತಕ್ಕ ವಿಷಯವಾಗುತ್ತಾರೆ—ಎಂದು ಹೇಳಿದ ಮೇಲೆ ಅಂಥ ಜನರ ಅಂತರಂಗಸಂಪತ್ತು ದೇಶದ ಅಭ್ಯುದಯ–ಅಭಿವೃದ್ಧಿಗಳಿಗೆ ಕಾರಣವಾಯಿತು ಎಂದು ಸ್ಪಷ್ಟವಾಯಿತು. ಹೀಗೆ, ಒಬ್ಬ ಜನನಾಯಕನ, ಒಬ್ಬ ರಾಜ್ಯಕುಶಲನ ಅಥವಾ ಒಬ್ಬ ನವಸಂಪ್ರದಾಯ ಸ್ಥಾಪಕನ ವೃತ್ತಾಂತವು ದೇಶಚರಿತ್ರೆಯ ಒಳಭಾಗವಾಗಿರುತ್ತದೆ. ಈ ಮಹಾನಾಯಕರ ಅಂತರಂಗವನ್ನು ನಾವು ಕಂಡುಕೊಂಡದ್ದಾದರೆ ಜನಜೀವನದ ಬಹಿರಂಗದ ಅನೇಕ ಸಂದರ್ಭಗಳ ಒಳಮರ್ಮಗಳು ನಮಗೆ ತಿಳಿದುಬರುತ್ತವೆ.

ಹೀಗೆ ದೇಶದ ಬಾಹ್ಯಸಂದರ್ಭಗಳ ಒಳಮರ್ಮಗಳು ನಮಗೆ ತಿಳಿದು ಬಂದಮೇಲೆ ಜನತೆಯ ಸದ್ಯದ ಪರಿಸ್ಥಿತಿಯಲ್ಲಿ ಇರುವ ಗುಣಾವಗುಣಗಳನ್ನೂ ಬಲಾಬಲಗಳನ್ನೂ ಕಂಡುಕೊಳ್ಳಲು ನಾವು ಸಮರ್ಥರಾಗುತ್ತೇವೆ. ಆ ತಿಳಿವಳಿಕೆಯಿಂದ ನಮಗೆ ಆಗಬೇಕಾಗಿರುವ ಪರಿಷ್ಕಾರದ ಸ್ವರೂಪವು ನಿಶ್ಚಿತವಾಗುತ್ತದೆ. ಹೀಗೆ, ಜೀವನಚರಿತ್ರೆಯು ದೇಶಚರಿತ್ರೆಯ ಒಂದು ಅಂಗ. ಆದರಿಂದ ಜನತೆಯ ಜೀವನದ ಸುಧಾರಣೆಗೆ ಮೊದಲು ಆಗಬೇಕಾದ ಮನಸ್ಸಿದ್ಧತೆ.

ಚರಿತ್ರೆ ಎಂದರೆ ಹಿಂದಿನ ಅನುಭವದ ವೃತ್ತಾಂತ. ದೇಶಚರಿತ್ರೆ ಎಂದರೆ ದೇಶದ ಜನದ ಒಟ್ಟಿಗೆ ಆದ ಅನುಭವಗಳು. ಜೀವನ ಚರಿತ್ರೆಯೆಂದರೆ ಒಬ್ಬಾಬ್ಬನೊಬ್ಬ ವ್ಯಕ್ತಿಮನುಷ್ಯನಿಗೆ ಆದ ಅನುಭವ.

ಚರಿತ್ರೆ, ಚರಿತೆ, ಚಾರಿತ್ರ್ಯ, ಚರ್ಯೆ, ಆಚರಣೆ, ಆಚಾರ—ಇವೆಲ್ಲ ಒಂದೇ ಬುಡಕಟ್ಟಿನಿಂದ ಬಂದಿರುವ ಪದಗಳು. ಅವುಗಳ ಸಾಮಾನ್ಯವಾದ ಅರ್ಥ "ನಡವಳಿಕೆ" ಎಂದು.

ಒಂದಾನೊಂದು ನಡವಳಿಕೆಯು ಕೆಲವು ಕಾರಣಗಳಿಂದ ಉಂಟಾಗುತ್ತದೆ ಮತ್ತು ಅದು ಕೆಲವು ಫಲಿತಾಂಶಗಳನ್ನು ಸಂಪಾದಿಸುತ್ತದೆ. ಆ ಕಾರಣಗಳೂ, ಆ ನಡವಳಿಕೆಗಳೂ, ಆ ಫಲ ಪರಿಣಾಮಗಳೂ ಎಲ್ಲವೂ ಒಟ್ಟಿಗೆ ಅನುಭವ ಎಂಬ ಮಾತಿನಲ್ಲಿ ಅಡಕವಾಗಿರುತ್ತವೆ. ಇಂಥ ಅನುಭವಗಳ ನಿರೂಪಣೆಯೇ ಪಾರಿಭಾಷಿಕವಾಗಿ (Technically) ಚರಿತ್ರೆ.

## ಚರಿತ್ರೆಯು ಅನುಭವ ಪರೀಕ್ಷೆ

ಚರಿತ್ರೆಯ ವ್ಯಾಸಂಗವು ಲೋಕನಿರ್ವಾಹಕ್ಕೆ ಅವಶ್ಯವಾದ ಒಂದು ಜ್ಞಾನಸಿದ್ಧತೆ. ಈ ವಿಷಯದಲ್ಲಿ ನಮ್ಮ ಜನದ ತಿಳಿವಳಿಕೆ ವಿಶದಪಟ್ಟು ಸ್ಥಿರಪಡಬೇಕಾಗಿದೆ. ಏಕೆಂದರೆ, ಚರಿತ್ರೆಯೆಂದರೆ ಏನೋ ಪುರಾಣ, ಏನೋ ಆಕಾಶರಗಳೆ, ಏನೋ ಕಟ್ಟುಕಥೆ, ಯಾವುದೋ "ರಾಯ ಕೇಳಿಂದ", ಯಾವುದೋ "ಭೂಪ ಕೇಳಿಂದ", ಏನೋ ಬ್ರಹ್ಮಾಂಡ ಪುರಾಣ—ಎಂದು ಭಾವನೆ ಇಟ್ಟುಕೊಂಡಿರುವ ಜನ ನಮ್ಮಲ್ಲಿ ಬಹು ಮಂದಿ ಇದ್ದಾರೆ. ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗೂ ಕೂಡ ಇಂಥ ಅಸಂಗತವಾದ ಅಭಿಪ್ರಾಯ ಸಾಮಾನ್ಯವಾಗಿದೆ. ಚರಿತ್ರೆಯ ಓದು ಎಂದರೆ ಕೆಲವು ತಾರೀಖುಗಳನ್ನು ಉರು ಹೊಡೆಯುವುದು, ಕೆಲವು ಹೆಸರು ಪಟ್ಟಿಗಳನ್ನು ಬಾಯಿಪಾಠ ಮಾಡುವುದು—ಇದಿಷ್ಟೇ ಎಂದು ಅವರ ತಿಳಿವಳಿಕೆ. ಚರಿತ್ರೆಯ ಪಾಠದಲ್ಲಿ ಸ್ವತಂತ್ರವಾದ ಬುದ್ಧಿಕಾರ್ಯವೇನೂ ಇಲ್ಲ, ಅದು ನಡೆದುಹೋದದ್ದರ ಕಂತೆ ಎಂದು ಅವರ ತಿಳಿವಳಿಕೆ.

ಈ ಅಭಿಪ್ರಾಯ ಎಷ್ಟು ಮಾತ್ರವೂ ಸಾಧುವಲ್ಲ. ತಾರೀಖುಗಳೂ, ಹೆಸರುಗಳೂ ಚರಿತ್ರೆಯಲ್ಲ. ಬಾಗಿಲಿಗೆ ಹಾಕಿದ ಕೈ ಹಿಡಿಕೆ ಬಾಗಿಲಲ್ಲ. ಕೈ ಹಿಡಿಕೆ ಬಾಗಿಲನ್ನು ಉಪಯೋಗಿಸಲು ಒಂದು ಸಣ್ಣ ಸೌಕರ್ಯ. ಹಾಗೆಯೇ ತಾರೀಖು. ಹೆಸರು, ಒಂದು ಮಹಾ ಸಂಗತಿಯನ್ನು ಜ್ಞಾಪಕಕ್ಕೆ ತರುವ ಹೆಗ್ಗುರುತು. ಹೆಗ್ಗುರುತೇ ವಸ್ತುವಲ್ಲ. ವಸ್ತು ಗುರುತಿಗಿಂತ ಬಹು ದೊಡ್ಡದು.

ನಮ್ಮ ದೇಶದಲ್ಲಿ ಸಾರ್ವಜನಿಕ ವಿಚಾರಗಳಲ್ಲಿ ನಡೆಯುತ್ತಿರುವ ಪ್ರಮಾದಗಳಿಗೆ ಚರಿತ್ರೆಯ ಅಪರಿಚಯವೇ ಮುಖ್ಯ ಕಾರಣವೆಂದು ಹೇಳಬಹುದು. ಚರಿತ್ರೆಯೆಂದರೆ ಒಂದು ಪ್ರಶ್ನೆಯ ಹಿನ್ನೆಲೆ. ಆ ಪ್ರಶ್ನೆ ಹೇಗೆ ಹುಟ್ಟಿತು, ಹಿಂದಿನವರು ಆ ಪ್ರಶ್ನೆಯನ್ನು ಹೇಗೆ ಎದುರಿಸಿದರು, ಅವರ ನಡವಳಿಕೆಯಲ್ಲಿ ಇದ್ದ ಮನೋಗತವೇನು, ಆ ನಡವಳಿಕೆ ವ್ಯರ್ಥವಾದದ್ದಕ್ಕೆ ಕಾರಣಗಳೇನು–ಇಂಥ ಅನುಭವ ಪರೀಕ್ಷೆಯೇ ಚರಿತ್ರೆ. ಚರಿತ್ರೆಯನ್ನು ಒಳಹೊಕ್ಕು ವಿಮರ್ಶಿಸಿದರೆ ಹಿಂದೆ ಮಾಡಿದ ತಪ್ಪೇನು ಎಂದು ನಮಗೆ ಎಚ್ಚರಿಕೆ ದೊರೆಯುತ್ತದೆ. ಈಗ ನಾವು ಅಂಥ ತಪ್ಪನ್ನು ಮಾಡದಿರಲು ಯಾವ ಎಚ್ಚರಿಕೆ ಅವಶ್ಯ, ನಾವು ಯಾವ ಹೊಸ ನೀತಿಯನ್ನು ಅವಲಂಬಿಸಿದರೆ ಹಳೆಯ ಅಪಾಯ ನಮಗೆ ತಪ್ಪೀತು?—ಈ ವಿಧವಾದ ಜಾಗ್ರತೆ ಮತ್ತು ಬೋಧನೆ ನಮಗೆ ಚರಿತ್ರೆಯ ವಿಮರ್ಶನೆಯಿಂದ ಆಗಬಹುದಾದ ಉಪಕಾರ.

ಉದಾಹರಣೆಗಳು : ಈಗ್ಗೆ ಎರಡು ಸಾವಿರದ ಐನೂರು ವರ್ಷಗಳ ಹಿಂದೆ ಗ್ರೀಸ್ ದೇಶವು ವಿದ್ಯೆ ವೈದುಷ್ಯಗಳಲ್ಲಿ ಯೂರೋಪಿನ ಜನಾಂಗಗಳಿಗೆ ಆದರ್ಶವಾಗಿತ್ತು. ಯೂರೋಪಿನ ಸಾಹಿತ್ಯ ಕಲೆ ಸಂಸ್ಕೃತಿಗಳಿಗೆ ಗ್ರೀಸ್ ದೇಶವು ಮಾತೃಸ್ಥಾನವೆಂದು ಎಲ್ಲರೂ ಅಂಗೀಕರಿಸಿದ್ದಾರೆ. ಅದು ಪಟ್ಟಣ-ರಾಜ್ಯಗಳಿದ್ದ (City-States) ದೇಶ. ಅಲ್ಲಿಯ ಅಥೆನ್ಸ್ (Athens) ಪಟ್ಟಣ-ರಾಜ್ಯವು ಪ್ರಜಾಪ್ರಭುತ್ವಕ್ಕೆ (Democracy) ಉದಾಹರಣೆಯಾಗಿತ್ತು. ಅಲ್ಲಿಯ ಸ್ಪಾರ್ಟಾ (Sparta) ಪಟ್ಟಣ-ರಾಜ್ಯವು ಶಿಸ್ತಿಗೂ ನಿಯಮಪಾಲನೆಗೂ (Discipline) ಹೆಸರಾಗಿತ್ತು. ಈ ಪಟ್ಟಣ-ರಾಜ್ಯಗಳು ಅಷ್ಟು ಉನ್ನತಿಗೆ ಏರಿದ್ದು ಹೇಗೆ, ಕಾಲಕ್ರಮದಲ್ಲಿ ಅವನತಿಗೆ ಇಳಿದದ್ದು ಹೇಗೆ, ಗ್ರೀಸಿನ ಆ ಪಟ್ಟಣ-ರಾಜ್ಯಗಳಲ್ಲಿ ಪರಸ್ಪರ ಸ್ಪರ್ಧೆ ಅತಿಯಾದಾಗ, ಪರ್ಷಿಯ ಮೊದಲಾದ ಇತರ ರಾಜ್ಯಗಳಿಂದ ಭಯ ಬಂದಾಗ, ಅದನ್ನು ನಿವಾರಿಸಿಕೊಳ್ಳಲು ಆ ಪಟ್ಟಣ-ರಾಜ್ಯಗಳು ಒಂದು ಸಂಯುಕ್ತ ವ್ಯವಸ್ಥೆಯ (Federation) ಒಡಂಬಡಿಕೆಯನ್ನು ಮಾಡಿಕೊಂಡದ್ದು ಹೇಗೆ, ಅದು ಕುಸಿದುಹೋದದ್ದು ಹೇಗೆ—ಈ ಪ್ರಶ್ನೆಗಳು ಪುರಾತನಕ್ಕೆ ಮಾತ್ರ ಸೇರಿದವಲ್ಲ. ಈಗ ಮುಗಿದುಹೋದವೂ ಅಲ್ಲ. ಅವು ನಮ್ಮ ಕಾಲದಲ್ಲೂ ರೂಪರೂಪಾಂತರಗಳಲ್ಲಿ ಅವತಾರ ಮಾಡುತ್ತಿರುವ ಪ್ರಶ್ನೆಗಳು.

ಗ್ರೀಸ್ ಆದಮೇಲೆ ರೋಮ್ ಚಕ್ರಾಧಿಪತ್ಯ ಬೆಳೆದು ಪ್ರಖ್ಯಾತವಾಯಿತು. ಅದು ಯೂರೋಪ್ ಖಂಡದ ಬಹುಭಾಗಗಳಲ್ಲಿ ತನ್ನ ದರ್ಪವನ್ನು ಹರಡಿತ್ತು. ಯೂರೋಪಿನ ಬಹುಜನಾಂಗಗಳ ವ್ಯವಹಾರ ನ್ಯಾಯಪದ್ಧತಿಗಳು (Juris prudence) ರೋಮ್ ಚಕ್ರಾಧಿಪತ್ಯದಿಂದ ಪ್ರಚಾರಗೊಂಡವೆಂದು ಹೇಳುತ್ತಾರೆ. ಅಷ್ಟು ಬಲಿಷ್ಠವಾಗಿ ಪುಷ್ಟವಾಗಿದ್ದ ಚಕ್ರಾಧಿಪತ್ಯ ಏಕೆ ಸಡಿಲಿತು? ಅದಕ್ಕೆ ಕಾರಣರು ಯಾರು? ಪ್ರಜೆಗಳೇ ಪ್ರಭುಗಳೇ? ಪ್ರಜೆಯಲ್ಲಿ ದುರ್ಬಲತೆ ಉಂಟಾಯಿತೆಂಬುದಾದರೆ ಆ ದುರ್ಬಲತೆ ಕಾರಣಗಳೇನೇನು?

ಇಂಥ ಪ್ರಶ್ನೆಗಳಿಗೆ ಜರ್ಮನಿ ದೇಶದ ಚರಿತ್ರೆಯಲ್ಲಿಯೂ ಅವಕಾಶವಿದೆ. ಅದು ಇನ್ನೂರು ವರ್ಷಗಳ ಹಿಂದೆ ಒಂದು ಸಾಮಾನ್ಯವಾದ ಸಣ್ಣ ರಾಜ್ಯವಾಗಿತ್ತು. ಅಲ್ಲಿಂದ ಅದು ಪ್ರಬಲಿಸಿ ನಾಲ್ಕನೆಯ ಕೈಸರನ ಕಾಲದಲ್ಲಿ ಮಹಾರಾಜ್ಯವಾಯಿತು. ಅದು ಹೇಗೆ? ಮಹಾ ಪ್ರಸಿದ್ಧಿಗೆ ಬಂದು ಕೆಲವು ಕಾಲ ಕಾರುಬಾರು ನಡಸಿ, ಆಮೇಲೆ ದುರ್ಬಲವಾಯಿತು. ಈಚೆಗೆ ಕ್ಷೀಣಿಸಿ ಇಬ್ಭಾಗವಾಗಿ ಈಗ ಮತ್ತೆ ತಲೆಯೆತ್ತಲು ಏನೇನು ಸಾಹಸ ಮಾಡಿದರೂ ಮುಂದಕ್ಕೆ

ಸಾಗಲಾರದೆ ಇದೆ. ಜರ್ಮನಿಗೆ ವಿಜ್ಞಾನಶಾಸ್ತ್ರದಲ್ಲಿ ಅಗ್ರಸ್ಥಾನವೆಂದು ಕೆಲವು ಕಾಲ ಪ್ರಸಿದ್ಧಿಯಿತ್ತು. ಅವರು ಮೇಧಾವಿಗಳು, ಮಹಾ ಪ್ರಯತ್ನಶೀಲರು. ಹಾಗಿದ್ದರೂ ಅವರನ್ನು ದುರದೃಷ್ಟ ಹೇಗೆ ಹಿಂಬಾಲಿಸುತ್ತಿದೆ?

ಇಂಗ್ಲೆಂಡನ್ನೇ ನೋಡೋಣ. ನಾನೂರು ವರ್ಷಗಳ ಹಿಂದೆ ಅದು ಒಂದು ಸಾಮಾನ್ಯವಾದ ಸಣ್ಣ ದ್ವೀಪ. ಅದು ಕ್ರಮೇಣ ಜಗದ್ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿತು. 'ಸೂರ್ಯಾಸ್ತಮಾನವಿಲ್ಲದ ಚಕ್ರಾಧಿಪತ್ಯ' ಎಂದು ಹೆಸರಾಯಿತು. ಹತ್ತಾರುವರ್ಷ ಹಾಗೆ ಅಭ್ಯುದಯದಲ್ಲಿದ್ದು ಈಗ ಮತ್ತೆ ಸಾಮಾನ್ಯ ದಶೆಗೆ ಹಿಂದಿರುಗುತ್ತಿದೆ. ಇದರ ಗುಟ್ಟೇನು?

ಹೀಗೆ ಜನತೆಯ ಹಾನಿವೃದ್ಧಿಗಳೂ, ಬಲಾಬಲಗಳೂ, ಉನ್ನತಿ ಅವನತಿಗಳೂ, ಅವರ ಸೌಜನ್ಯ, ಪಾರಿಶುದ್ಧ್ಯ, ಉದಾತ್ತತೆ, ನೀಚದೃಷ್ಟಿ, ಭೋಗಾಸಕ್ತಿ, ಅಹಂಕಾರ, ದರ್ಪ, ಮದ ಮಾತ್ಸರ್ಯಗಳು–ಇಂಥ ದೇಹಗುಣ ಮನೋಗುಣಬುದ್ಧಿಗುಣಗಳು ಅವರ ಏಳಿಗೆಗೂ ಬೀಳಿಗೂ ಹೇಗೆ ಹೇಗೆ ಕಾರಣವಾದವೆಂಬುದರ ವಿವೇಕವೇ ಚರಿತ್ರೆಯ ವ್ಯಾಸಂಗದಿಂದ ನಮಗೆ ಉಂಟಾಗುವ ಲಾಭ. ಅನುಭವಪರೀಕ್ಷೆಯ ಮೂಲಕ ಉತ್ಪನ್ನವಾದ ಯುಕ್ತಾಯುಕ್ತ ವಿವೇಕವು ನಮ್ಮ ಮುಂದಿನ ಪ್ರಯಾಣಕ್ಕೆ ಕೈದೀವಿಗೆಯಂತಾಗುತ್ತದೆ.

## ವ್ಯಕ್ತಿ ಚರಿತ್ರೆಗೆ ಅರ್ಹರಾದವರು

ದೇಶಚರಿತ್ರೆ (History) ಜನತೆಯ ಬಹಿರಂಗ ವ್ಯಾಪಾರವಾದರೆ ಜೀವನ ಚರಿತ್ರೆಯು (Biography) ಅವರ ಅಂತರಂಗ ಚಲಿತ.

ಜನದ ಮನಸ್ಸನ್ನು ಕೆರಳಿಸುವವರೂ, ಅವರ ಬುದ್ಧಿಯನ್ನು ಕೆಣಕುವವರೂ, ಅವರ ಆಶೆ ಅಭಿಲಾಷೆಗಳಿಗೆ ರೂಪಕೊಡುವವರೂ, ಅವರಲ್ಲಿ ಭಾವೋದ್ರೇಕ ಮಾಡಿಸುವವರೂ, ಹೊಸ ಹೊಸ ಅಭಿಪ್ರಾಯಗಳನ್ನು ಉತ್ಪಾದನೆ ಮಾಡಿಸುವವರೂ, ಚಳವಳಿಯೆಬ್ಬಿಸಿ ಆಂದೋಳನ ಮಾಡಿಸುವವರೂ, ಅವರ ಶೀಲಸ್ವಭಾವಗಳನ್ನು ತಿದ್ದಿ ಮಾರ್ಪಡಿಸುವವರೂ ದೇಶದ ನಾಯಕರು ತಾನೆ? ಈ ಪ್ರಸಿದ್ಧ ಪುರುಷರೇ ಜನದ ಅಂತರಂಗಕ್ಕೆ ಅಧಿಕಾರಿಗಳು. ನಾಯಕರಂತೆ ಜನತೆ. ದೇಶದ ಸಮಾರಂಭಗಳ ಮರ್ಮವನ್ನೂ ಸಂದರ್ಭ ಸನ್ನಿವೇಶಗಳ ಒಳರೂಪವನ್ನೂ ನಾವು ತಿಳಿದುಕೊಳ್ಳಬೇಕೆಂದರೆ ಆ ನಾಯಕರ ಅಂತರಂಗವನ್ನು ಕಂಡುಕೊಳ್ಳಬೇಕು. ಹೀಗೆ ಬರುತ್ತದೆ ಬೆಲೆ ಜೀವನಚರಿತ್ರೆಯೆಂಬ ಸಾಹಿತ್ಯ ಜಾತಿಗೆ.

ದೇಶಚರಿತ್ರೆಯಲ್ಲಿರುವಂತೆ ವ್ಯಕ್ತಿಚರಿತ್ರೆಯಲ್ಲಿಯೂ ಮುಖ್ಯ ಭಾಗಗಳು ಎರಡು :—(೧) ಬಹಿರಂಗದ್ದು, (೨) ಅಂತರಂಗದ್ದು. ಒಬ್ಬ ಮನುಷ್ಯನ ಶೀಲ ಸ್ವಭಾವ ಲಕ್ಷಣಗಳು ಅವನನ್ನು ಹತ್ತಿರದಿಂದ ನೋಡಿರುವವರಿಗೆ ಚೆನ್ನಾಗಿ ತಿಳಿದಿರುತ್ತವೆ. ವ್ಯಕ್ತಿಚರಿತ್ರೆಯು ಯಾರನ್ನು ಕುರಿತದ್ದಾಗಿರುತ್ತದೆಯೊ ಆತನಿಗೂ ಯಾರು ಬರೆಯುತ್ತಾನೋ ಆತನಿಗೂ ಪರಸ್ಪರಆಪ್ತತೆಯೂ ಸ್ನೇಹವೂ ಎಷ್ಟು ಹೆಚ್ಚಾಗಿದ್ದರೆ ಆ ವ್ಯಕ್ತಿಚರಿತ್ರೆ ಅಷ್ಟು ಪ್ರಾಮಾಣಿಕವಾಗಿ ಅಷ್ಟು ಸ್ವಾರಸ್ಯಕರವಾಗಿರುತ್ತದೆ. ಇಂಗ್ಲಿಷಿನಲ್ಲಿ ಬಾಸ್‌ವೆಲ್ (Boswell) ಬರೆದ ಜಾನ್‌ಸನ್ ಪಂಡಿತನ (Dr. Johnson) ಜೀವನಚರಿತ್ರೆ, ಕಾರ್‌ಲೈಲ್ (Carlyle) ಬರೆದ ಕ್ರಾಮ್‌ವೆಲ್ (Cromwell), ಫ್ರೆಡರಿಕ್ (Frederick the Great) ಮೊದಲಾದವರ ಜೀವನಚರಿತ್ರೆಗಳು, ಲಾಕ್‌ಹಾರ್ಟ್ (Lockhart) ಎಂಬವನು ಬರೆದ ಸ್ಕಾಟ್ (Scott) ಕವಿತಾ ಕಾದಂಬರಿಕಾರನ ಚರಿತ್ರೆ, ಮಾರ್ಲೀ (Lord Morley) ಬರೆದ ಗ್ಲಾಡ್‌ಸ್ಟನ್ (Gladstone) ರಾಜ್ಯನಿಪುಣನ ಜೀವನಚರಿತ್ರೆ—ಇವು ವ್ಯಕ್ತಿಚರಿತ್ರೆಗಳಲ್ಲಿ ಬಹು ಪ್ರಸಿದ್ಧವಾದವು.

ನಾನು ೧೯೧೦ರಲ್ಲಿ ದಿವಾನ್ ರಂಗಾಚಾರ್ಲು ಅವರನ್ನು ಕುರಿತ ವ್ಯಕ್ತಿಚರಿತ್ರೆಯನ್ನು ನನಗೆ ಸಾಧ್ಯವಿದ್ದಷ್ಟು ಮಟ್ಟಿಗಾದರೂ ಸಮಗ್ರ ಮಾಡಬೇಕೆಂದು ಆಗಿನ ದಿವಾನರಾಗಿದ್ದ ಪ್ರಧಾನಶಿರೋಮಣಿ ಟಿ. ಆನಂದರಾಯರವರನ್ನು ಕಂಡೆ. ಅವರು ರಂಗಾಚಾರ್ಲು ಅವರನ್ನು ಬಲ್ಲವರೆಂದೂ, ಆನಂದರಾಯರ ತಂದೆ ರಾಜಾ ಸರ್ ಟಿ. ಮಾಧವರಾಯರೂ ರಂಗಾಚಾರ್ಲು ಅವರೂ ಗಾಢ ಸ್ನೇಹಿತರಾಗಿದ್ದರೆಂದೂ ಕೇಳಿದ್ದೆ. ಆ ಕಾರಣದಿಂದ ಆನಂದರಾಯರಿಂದ ನನಗೆ ಹೆಚ್ಚು ವಿಷಯ ತಿಳಿದೀತೆಂದು ನಿರೀಕ್ಷಿಸಿಕೊಂಡಿದ್ದೆ.

ಆನಂದರಾಯರು ನನ್ನ ಉದ್ದೇಶವನ್ನು ನಾನು ತಿಳಿಸಿದ ಕೂಡಲೆ— "ನೀವು ರಂಗಾಚಾರ್ಯರನ್ನು ನೋಡಿದ್ದೀರೋ ?" ಎಂದರು.

"ಇಲ್ಲ; ನಾನು ಹುಟ್ಟುವಾಗ್ಗೆ ಅವರು ಸತ್ತು ೬–೭ ವರ್ಷವಾಗಿತ್ತು".

"ಹಾಗಾದರೆ ರಂಗಾಚಾರ್ಯರ ಮಾತುಕಥೆ ಮರ್ಯಾದೆ ಕಾರ್ಯಧೋರಣೆ —ಇಂಥಾ ವ್ಯಕ್ತಿ ವಿಶೇಷ ಕಥೆಗಳನ್ನು (Anecdotes, Table-talk) ಹೇಳಿಲ್ಲವೆ ?"

"ಅದನ್ನು ಕುರಿತು ಹೆಚ್ಚಾಗಿ ಹೇಳಿಲ್ಲ. ನಾನು ಕೇಳಿರುವಷ್ಟು ಮಾತ್ರ ಹೇಳಿದ್ದೇನೆ."

"ಒಳ್ಳೆಯದು ; ನೀವು ಮೈಸೂರಿಗೆ ಹೋಗಿ ಅಲ್ಲಿ ಅಂಬಿಲ್ ನರಸಿಂಹ ಯ್ಯಂಗಾರ್ಯರು, ವೆಂಕಟಕೃಷ್ಣಯ್ಯನವರು, ಇನಾಂದಾರ್ ರಾಘವಾ ಚಾರ್ಯರು–ಇವರನ್ನು ಕಂಡು ಪ್ರಶ್ನೆ ಮಾಡಿ ಅವರು ಹೇಳುವುದನ್ನು ಗುರುತು ಮಾಡಿಕೊಂಡು ಬಂದು ಅದನ್ನು ನಿಮ್ಮ ಪುಸ್ತಕಕ್ಕೆ ಅನುಬಂಧವಾಗಿ ಸೇರಿಸಿರಿ. ಆಗ ಈ ಪುಸ್ತಕ ಇನ್ನೂ ಸ್ವಾರಸ್ಯಪಡಬಹುದು."

ಹೀಗೆ ಶ್ರೀ ಆನಂದರಾಯರ ಸಲಹೆ. ನಾನು ಅದನ್ನಂಗೀಕರಿಸಿ ಅದನ್ನು ನಡಸಲು ಪ್ರಯತ್ನ ಮಾಡಿದೆ. ಅದಕ್ಕಾಗಿ ಮೈಸೂರಿನಲ್ಲಿ ೨೦–೨೫ ದಿನವಿದ್ದೆ. ಆದರೆ ನಿರೀಕ್ಷೆ ಮಾಡಿದಷ್ಟು ಲಾಭ ದೊರೆಯಲಿಲ್ಲ. ಶ್ರೀ ಅಂಬಿಲ್ ನರಸಿಂಹ ಯ್ಯಂಗಾರ್ಯರು ಕಾಯಿಲೆಯಲ್ಲಿದ್ದದ್ದರಿಂದ ನಾಲ್ಕು ವಾಕ್ಯಗಳನ್ನು ಪೀಠಿಕೆ ಯಾಗಿ ಕೊಟ್ಟಿದ್ದಾರೆ. ವೆಂಕಟಕೃಷ್ಣಯ್ಯನವರು ಅವರು ಬರೆದ ಪೀಠಿಕೆಯಲ್ಲಿ ವೈಯಕ್ತಿಕ ಸಂಗತಿಗಳನ್ನು ಏನನ್ನೂ ಹೇಳಿಲ್ಲ.

ನಮ್ಮ ಜನ ವ್ಯಕ್ತಿಚರಿತ್ರೆಗೆ ಉಪಯುಕ್ತವಾಗುವ ಅಂಶಗಳೇನೆಂಬುದನ್ನು ಗಮನವಿರಿಸಿ ತಿಳಿದುಕೊಳ್ಳಬೇಕು. ಆತ "ಮಹಾ ದೊಡ್ಡ ಮನುಷ್ಯ", "ಆಜಾನುಬಾಹು", "ಉದಾತ್ತಸಂಕಲ್ಪ", "ಪ್ರತಿಭಾವಂತ", "ನಿರಂತರೋ ದ್ಯೋಗಿ"–ಇಂಥ ಸಾಮಾನ್ಯವಾದ ವರ್ಣನೆಯ ಪದಗಳಿಂದ ಉದ್ದಿಷ್ಟ ವ್ಯಕ್ತಿಯ ಸ್ವರೂಪವು ನಮ್ಮ ಮನಃಫಲಕದ ಮೇಲೆ ಆಳವಾಗಿ ಮುದ್ರಿತ ವಾಗುವುದಿಲ್ಲ.

ಕೆಲವರು, ರಂಗಾಚಾರ್ಯರ ವಿಷಯ ಹೇಳಿ ಎಂದು ಕೇಳಿದರೆ ಅದನ್ನು ನೆವಮಾಡಿಕೊಂಡು ತಮ್ಮ ವಿಷಯವನ್ನೇ ಹೇಳಿಕೊಳ್ಳುತ್ತಾರೆ. ರಂಗಾಚಾರ್ಯ ರಿಗೆ ಬಂದ ಯಾವುದೋ ಒಂದು ಕಷ್ಟ, ಆ ಸಂದರ್ಭದಲ್ಲಿ ಅವರು ಈ ತಿಮ್ಮಣ್ಣಯ್ಯನನ್ನು ಕೇಳಿಕೊಂಡ ರೀತಿ, ಈ ತಿಮ್ಮಣ್ಣಯ್ಯನು ಮಾಡಿದ ಸಾಹಸ, ಈ ತಿಮ್ಮಣ್ಣಯ್ಯನ ಬುದ್ಧಿವಂತಿಕೆಯಿಂದ ಆ ಕಷ್ಟ ನಿವಾರಣೆ ಯಾದದ್ದು, ಈ ತಿಮ್ಮಣ್ಣಯ್ಯನ ವಿಷಯದಲ್ಲಿ ರಂಗಾಚಾರ್ಯರು ಇಟ್ಟು ಕೊಂಡಿದ್ದ ಕೃತಜ್ಞತೆ ಗೌರವಗಳು, ಈ ತಿಮ್ಮಣ್ಣಯ್ಯನ ಪ್ರತಾಪ ಮಹಿಮೆ ಗಳು—ಇಂಥವೇ ಆ ಪುಣ್ಯಾತ್ಮನ ಬಾಯಿಂದ ಹರಿದು ಬಂದು ರಂಗಾಚಾರ್ಯ ರನ್ನು ಅಮುಖ್ಯರನ್ನಾಗಿ ಮಾಡುತ್ತವೆ.

## ಶೀಲನಿದರ್ಶನ

ವ್ಯಕ್ತಿಚರಿತ್ರೆಗೆ ಬೇಕಾದದ್ದು ಶೀಲನಿದರ್ಶಕವಾದ ಘಟನೆಗಳು (Character-revealing incidents).

**ಒಂದು ಉದಾಹರಣೆ:** ದಿವಾನ್ ರಂಗಾಚಾರ್ಲು ಅವರ ವ್ಯಕ್ತಿಚರಿತ್ರೆಯನ್ನು ಕುರಿತು ನಾನು ದಿವಾನ್ ಟಿ. ಆನಂದರಾಯರನ್ನು ಕಾಣಲು ಹೋಗಿದ್ದ ಸಂಗತಿಯನ್ನು ಮೇಲೆ ಪ್ರಸ್ತಾಪಿಸಿದೆಯಷ್ಟೆ. ಆಗ ನಾನು ಸುಮಾರು ಇಪ್ಪತ್ತರಲ್ಲಿದ್ದವನು; ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಮಣ್ಣು ತಿಂದಿದ್ದೆ. ಆನಂದರಾಯರವರಾದರೋ ಅರುವತ್ತರ ಹತ್ತಿರಕ್ಕೆ ಬಂದಿದ್ದವರು. ನಡೆನುಡಿಗಳೆರಡರಲ್ಲೂ ಕರಾರುವಾಕ್ ಮನುಷ್ಯರೆಂದು ಹೆಸರಾಗಿದ್ದವರು. ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಪರಿಣತರಾಗಿದ್ದವರು. ಇಂಥಾ ದೊಡ್ಡ ಮನುಷ್ಯರಲ್ಲಿ ನನ್ನಂಥವನು ಹೇಗೆ ನಡೆದುಕೊಳ್ಳುವುದು ಯುಕ್ತವೆಂದು ನಾನು ಚಿಂತೆ ಮಾಡಿದ್ದೆ. ಅವರು ಗೊತ್ತುಮಾಡಿದ್ದ ದಿವಸ, ಗೊತ್ತು ಮಾಡಿದ್ದ ವೇಳೆಗೆ, ಗೊತ್ತುಮಾಡಿದ್ದ ಸ್ಥಳಕ್ಕೆ ಹೋದೆ. ಸ್ಥಳ ಅವರ ಮನೆ, ಹೊತ್ತು ಮಧ್ಯಾಹ್ನ ಮೂರು ಗಂಟೆ.

ನಾನು ಮನೆಯ ಆವರಣವನ್ನು ಪ್ರವೇಶಿಸಿ, ಮೊಗಸಾಲೆಯ ಮೆಟ್ಟಿಲನ್ನು ಹತ್ತುತ್ತಿದ್ದಂತೆ ಒಬ್ಬ ಕಾರಕೂನರು ಒಳಗಿನಿಂದ ಬಂದು ನನ್ನ ಹೆಸರು ಹೇಳಿ, ಇಂಗ್ಲಿಷಿನಲ್ಲಿ "ನೀವು ಇಂಥವರೇ?" ಎಂದು ಕೇಳಿದರು. ನಾನು "ಹೌದು" ಎನ್ನುತ್ತಲೇ ಅವರು "ಒಳಕ್ಕೆ ಹೋಗಿ" ಎಂದರು. ಅದರಂತೆ ನಾನು ಅವರು ತೋರಿಸಿದ ಕೊಠಡಿಯೊಳಕ್ಕೆ ಕಾಲಿಟ್ಟೆ. ಆನಂದರಾಯರವರು ಅಲ್ಲಿ ನಿಂತಿದ್ದರು. ನಾನು "ನಮಸ್ಕಾರ" ಎಂದು ಹೇಳಿ ಕೈಮುಗಿದೆ. ಅವರು ಪ್ರತಿ ನಮಸ್ಕಾರ ಮಾಡಿ ಕೈಕುಲುಕಿ(ಷೇಕ್ ಹ್ಯಾಂಡ್)ಗಾಗಿ ತಮ್ಮ ಕೈಯನ್ನು ಚಾಚಿದರು. ಅದಾದ ಮೇಲೆ ಒಂದು ಕುರ್ಚಿಯನ್ನು ತೋರಿಸಿ (ಇಂಗ್ಲಿಷಿನಲ್ಲಿ) "ದಯವಿಟ್ಟು ಕೂಡಿ" ಎಂದರು. ನಾನು ಕುಳಿತುಕೊಳ್ಳದೆ ನನ್ನ ಪ್ರವರವನ್ನು ಹೇಗೆ ಮೊದಲು ಮಾಡಬೇಕೆಂದು ಯೋಚಿಸುತ್ತಿದ್ದೆ. ಅವರು ಎರಡನೆಯಸಾರಿ, "ದಯವಿಟ್ಟು ಕೂಡಿರಿ" ಎಂದರು. ನಾನು "ಪರವಾಗಿಲ್ಲ" ಎಂದು ಹೇಳಿ ಮುಂಬರಿಯುವ ಪ್ರಯತ್ನದಲ್ಲಿದ್ದೆ. ಆನಂದರಾಯರು ಮೂರನೆಯ ಸಾರಿ "ದಯವಿಟ್ಟು ಕೂಡಿರಿ. ನೀವು ಕೂತುಕೊಳ್ಳುವುದಕ್ಕೆ ಮುಂಚೆ ನಾನು ಕೂಡುವುದಿಲ್ಲ. ಇಬ್ಬರೂ ಕೂಡದಿದ್ದರೆ ಮಾತುಕಥೆಯಿಲ್ಲ" ಎಂದು ಖಂಡಿತವಾದ ಧ್ವನಿಯಿಂದ ಹೇಳಿದರು, ಬಳಿಕ ನಾನು ಕುಳಿತು ಮಾತುಕಥೆಯಾಡಿದೆ. ಎಲ್ಲ ಸುಮುಖವಾಯಿತು. ಆನಂದರಾಯರವರು ಎಂಥ ವಿನಯ ಮರ್ಯಾದೆಗಳುಳ್ಳವರು ಎಂಬುದಕ್ಕೆ ಇದು ನಿದರ್ಶನ.

ಆನಂದರಾಯರು ಸೆನ್ಸಸ್ ಕಮಿಷನರಾಗಿದ್ದರು. ಆಗ ಅವರ ಕಛೇರಿಯ

ಮ್ಯಾನೇಜರಾಗಿದ್ದವರು ರಾಮಯ್ಯ ಎಂಬವರು. ಆನಂದರಾಯರು ಕಛೇರಿಗೆ ಹನ್ನೊಂದು ಘಂಟೆಗೆ ಸರಿಯಾಗಿ ಬರುವರು. ಒಂದು ನಿಮಿಷ ಮುಂದೆ ಅಲ್ಲ; ಒಂದು ನಿಮಿಷ ಹಿಂದೆ ಅಲ್ಲ. ಗಡಿಯಾರ ಟಣ್ ಟಣ್ ಎನ್ನಲು ಮೊದಲಾದಾಗ ಅವರು ಹೊಸಲಿನಿಂದ ಒಳಗೆ ಹೆಜ್ಜೆಯಿಡುವರು. ಹಾಗೆ ಬಂದು ತಮ್ಮ ಕುರ್ಚಿಯ ಮೇಲೆ ಕುಳಿತ ಮರುಕ್ಷಣದಲ್ಲಿಯೇ "ರಾಮಯ್ಯ, ಎಲ್ಲರೂ ಬಂದಿದ್ದಾರೆಯೇ ?" ಎಂದು ಕೇಳುವರು. ಆನಂದರಾಯರಿಗೆ ದೃಷ್ಟಿಪಾಟವ ಕೊಂಚ ಕಡಮೆ. ಅವರಿಗೆ ತುಂಬ ಸಮೀಪವಾಗಿದ್ದ ವಸ್ತುವನ್ನು ಮಾತ್ರ ಗುರುತಿಸಲಾಗುತ್ತಿತ್ತು. ಓದುವುದೂ ಬರೆಯುವುದೂ ಅವರಿಗೆ ಪ್ರಯಾಸವಾಗಿತ್ತು. ರಾಮಯ್ಯನವರು "ಎಲ್ಲರೂ ಬಂದಿದ್ದಾರೆ" ಎಂದು ಹೇಳಿದ ಕೂಡಲೆ "ಸಿಬ್ಬಂದಿಯೆಲ್ಲ ಬಂದಿದೆಯೆ ?" ಎಂದು ಕೇಳುವರು. "ಎಲ್ಲ ಬಂದಿದೆ ಸರ್" ಎಂದು ಜವಾಬು ದೊರೆತ ಕೂಡಲೆ "ಹಾಗಾದರೆ ಎಲ್ಲರಿಗೂ ಕಾಫಿ ಬಡಿಸಿದ್ದಾಗಲಿ" ಎನ್ನುವರು. ಹೀಗೆಯೇ ಮಧ್ಯಾಹ್ನ ಎರಡು ಘಂಟೆಯ ಸುಮಾರಿನಲ್ಲಿಯೂ ಆಗುವುದು. ದೊಡ್ಡ ಲೋಟದಲ್ಲಿ ಕಾಫಿ, ದೊಡ್ಡ ತಟ್ಟೆಯಲ್ಲಿ ಉಪಾಹಾರ. ಈ ಕಾಫಿ ಉಪಾಹಾರಗಳು ಆನಂದರಾಯರು ಸ್ವಂತವಾಗಿ ಸಹೋದ್ಯೋಗಿಗಳಿಗೆ ದಿನದಿನವೂ ಮಾಡಿಸುತ್ತಿದ್ದ ಔತಣ.

ಆನಂದರಾಯರು ಆಗರ್ಭ ಶ್ರೀಮಂತರು. ಆ ಶ್ರೀಮಂತಿಕೆಯ ಜೊತೆಗೆ ಔದಾರ್ಯವೂ ವಿನಯವೂ ಸ್ವಾಭಾವಿಕವಾಗಿ ಬಂದಿದ್ದ ಗುಣಗಳೆಂಬುದನ್ನು ನೆನೆಸಿಕೊಂಡರೆ ಹರ್ಷ ಉಂಟಾಗುತ್ತದೆ. ಇದು ವ್ಯಕ್ತಿವಿಶೇಷಕ್ಕೆ ನಿದರ್ಶನ.

ಮೇಲಣ ಎರಡು ಸಂಗತಿಗಳಿಂದ ಆನಂದರಾಯರ ಸ್ವರೂಪವನ್ನು ಸಂಪೂರ್ಣವಾಗಿ ಚಿತ್ರಿಸಿದಂತಾಯಿತೆಂದು ಯಾರೂ ಭಾವಿಸಲಾರರು. ಆ ಸಂಗತಿಗಳು ಅವರ ಅಧಿಕಾರ ನಿರ್ವಾಹ ದಕ್ಷತೆಯನ್ನು ತೋರಿಸುತ್ತವೆಯೆಂದೂ ಯಾರೂ ತಿಳಿಯರು. ಅವರ ಅಧಿಕಾರ ನಿರ್ವಾಹದ ರೀತಿನೀತಿಗಳ ವಿಚಾರದಲ್ಲಿ ಅಭಿಪ್ರಾಯಭೇದವಿರುವುದು ಸ್ವಾಭಾವಿಕ. ರಾಜಕೀಯವಾದರೋ ಸಾರ್ವಜನಿಕ ವಿಚಾರ. ಮರ್ಯಾದೆ ಸ್ನೇಹಗಳಾದರೋ ಅವರ ವೈಯಕ್ತಿಕ ವಿಶೇಷ.

ವ್ಯಕ್ತಿಯ ಸ್ವಭಾವಕ್ಕೂ ಸಾರ್ವಜನಿಕ ವರ್ತನೆಗೂ ಸಂಬಂಧವುಂಟೇ ಉಂಟು. ಆ ಸಂಬಂಧ ಆನಂದರಾಯರಲ್ಲಿ ಎಂಥಾದ್ದಾಗಿತ್ತು, ಎಷ್ಟು ಮಾತ್ರವಿತ್ತು ಎಂಬುದನ್ನು ಚರಿತ್ರಕಾರನು ಪರಾಮರ್ಶಿಸಿಯಾನು. ಆದರೆ ಅವನಿಗೆ ಬೇಕಾದ ಸಾಮಗ್ರಿ ಮೇಲಿನಂಥ ಸಂಗತಿಗಳಲ್ಲಿ ಅಡಗಿರುತ್ತದೆ.

## ಚಾರಿತ್ರಿಕ ಸಾಮುಗ್ರಿ

ನಮ್ಮ ಜನ ನಮ್ಮ ಪ್ರಸಿದ್ಧ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ ಅವರ ಸಂಭಾಷಣ ರೀತಿ, ಮಿತ್ರ ಬಂಧು ಜನ ಪ್ರತಿವರ್ತನೆಗಳು, ಅವರ ಸಂಗೀತ ಸಾಹಿತ್ಯಾದಿ ಕಲಾಭಿರುಚಿ, ಅವರ ವೈಯಕ್ತಿಕ ಧ್ಯೇಯಗಳು, ಅವರ ಆಚಾರ ವ್ಯವಹಾರಗಳ ರೀತಿ, ಉಡುಗೆ ತೊಡುಗೆಗಳಲ್ಲಿ ಅವರ ಅಭ್ಯಾಸ, ಅವರ ಶ್ರಮ ಸಹಿಷ್ಣುತೆ, ಇತ್ಯಾದಿ ವೈಯಕ್ತಿಕ ಗುಣವಿಶೇಷಗಳನ್ನು ತೋರ್ಪಡಿಸುವಂಥ ಸಂದರ್ಭಗಳನ್ನು ಗುರುತಿಸಿ ಬರೆದಿಟ್ಟರೆ ಅದು ಚರಿತ್ರಕಾರನಿಗೆ ಅಮೂಲ್ಯ ವಾದ ಸಾಮುಗ್ರಿಯಾಗುತ್ತದೆ.

ನಮ್ಮಲ್ಲಿ ಚಾರಿತ್ರಿಕ ಸಾಮುಗ್ರಿಯನ್ನು ಕಾಪಾಡಿಡುವ ಪದ್ಧತಿ ವಿರಳ ವಾಗಿದೆ. ಬಹು ಪ್ರಖ್ಯಾತರಾಗಿ ಲೋಕಮಾನ್ಯರಾಗಿರುವ ಅನೇಕ ಮಂದಿ ಮಹನೀಯರ ಜೀವನಕ್ಕೆ ಸಂಬಂಧಪಟ್ಟ ಜ್ಞಾಪಕಗಳನ್ನೂ ದಾಖಲೆಗಳನ್ನೂ ಆ ಮಹನೀಯರು ಸಂಗ್ರಹಿಸಿಡುವ ಗೋಜಿಗೆ ಹೋಗುವುದಿಲ್ಲ. ಒಬ್ಬ ಮಹ ನೀಯನ ಬಳಿಗೆ ಹೋಗಿ—ನಿಮ್ಮ ತಂದೆ ಮಹಾನುಭಾವರು. ಅವರನ್ನು ಕುರಿತು ನಾನು ಬರೆಯಬೇಕೆಂದಿದ್ದೇನೆ. ಅದಕ್ಕೆ ಬೇಕಾದ ಕಾಗದ ಪತ್ರಗಳು ಟೀಕು ಟಿಪ್ಪಣಿಗಳು ಏನಾದರೂ ಇದ್ದರೆ ದಯಮಾಡಿ ಕೊಡಬೇಕು—ಎಂದು ಬೇಡಿ ದರೆ ಹಾಗೆ ಬೇಡಲ್ಪಟ್ಟವರು ಬೆರಗ್ಗೆ ತೋರಿಸುವುದು, ತಮ್ಮಲ್ಲಿ ಯಾವ ಸಾಮುಗ್ರಿಯೂ ಇಲ್ಲವೆನ್ನುವುದು ನನಗೆ ಅನುಭವಕ್ಕೆ ಬಂದಿರುವ ಸಂಗತಿ. ನಾಲ್ಕಾರು ಕಡೆ ನಾನು ಹೀಗೆ ನಿರಾಶನಾಗಿದ್ದೇನೆ. ಮಹಾ ಪ್ರಸಿದ್ಧರಾದ ಸರ್ ಟಿ. ಮುತ್ತುಸ್ವಾಮಿ ಐಯ್ಯರ್, ಅಥವಾ ಸರ್ ಕೆ. ಶೇಷಾದ್ರಿ ಐಯ್ಯರ್ ಇಂಥವರನ್ನು ಕುರಿತೇ ನಮಗೆ ಯಾವ ಗ್ರಂಥಸಾಮುಗ್ರಿಯೂ ಸಿಕ್ಕುತ್ತಿಲ್ಲ. ಅವರು ಸಂಪಾದಿಸಿದ ಸ್ವತ್ತನ್ನು ಅನುಭವಿಸುತ್ತಿರುವ ಅವರ ವಂಶಸ್ಥರೇ ಅವರ ವಿಷಯದಲ್ಲಿ ಹೆಮ್ಮೆ ಇಲ್ಲದವರಾಗಿರುತ್ತಾರೆ. ತಮ್ಮ ಪೂರ್ವಿಕರ ಖ್ಯಾತಿಯನ್ನು ಕಾಪಾಡಬೇಕೆಂಬ ಪಿತೃಭಕ್ತಿ ಸಹ ನಮ್ಮವರಲ್ಲಿ ಅಪರೂಪವಾಗಿದೆ.

ಈ ಪುಸ್ತಕದಲ್ಲಿರುವ ಪ್ರಕರಣಗಳು ನನ್ನ ಜ್ಞಾಪಕದಲ್ಲಿದ್ದು ರೂಪ ಗೊಂಡವು. ಅವಕ್ಕೆ ರುಜುವಾತು ದಾಖಲೆ ಮೊದಲಾದ ಲಿಖಿತಪ್ರಮಾಣ ಗಳನ್ನು ಕೊಟ್ಟಿಲ್ಲ. ಆ ಕೆಲಸ ನನಗೆ ಈಗ ಸಾಧ್ಯವಿಲ್ಲ.

ಲ್ಯಾಟಿನ್ ಭಾಷೆಯಲ್ಲಿ Ex pede Herculem "ಹರ್‌ಕ್ಯುಲೀಸನ ಪಾದವನ್ನು ನೋಡಿ ಮಿಕ್ಕದ್ದನ್ನು ತಿಳಿದುಕೊ"—ಎಂಬ ನಾಡ ನುಡಿ

ಉಂಟಂತೆ. ಹರ್‌ಕ್ಯುಲೀಸನು (ನಮ್ಮ ಭೀಮಸೇನ ದೇವರಂತೆ) ದೈವಾಂಶ ಸಂಭೂತನಾದ ಮಹಾವೀರ. ಆ ವೀರನ ಸಾಹಸಕಾರ್ಯಗಳು ಪುರಾಣ ಪ್ರಸಿದ್ಧವಾಗಿವೆ. ಅವನ ವಿಗ್ರಹವನ್ನು ಕುರಿತದ್ದು ಮೇಲಿನ ನಾಡನುಡಿ. ಹರ್‌ಕ್ಯುಲೀಸನ ಆಕಾರ ಮಹಿಮೆಯನ್ನು ತಿಳಿದುಕೊಳ್ಳಬೇಕೆಂದರೆ ಅವನ ದೇಹವನ್ನು ತಲೆಯಿಂದ ಅಡಿಯವರೆಗೂ ನೋಡಬೇಕಾದದ್ದಿಲ್ಲ. ಅವನ ಹೆಬ್ಬೆಟ್ಟೊಂದನ್ನು ನೋಡಿದರೆ ಸಾಕು, ಮಿಕ್ಕ ಅಂಗಗಳೆಲ್ಲ ಅದರ ಪ್ರಮಾಣಕ್ಕೆ ಸರಿಯಾಗುವಂತೆ ಇರುತ್ತವೆ—ಎಂದು ತಾತ್ಪರ್ಯ.

ಈ ಪ್ರಬಂಧಗಳು ಚರಿತ್ರೆಯಲ್ಲ. ಇವು ಆಯಾ ಮಹನೀಯರ ಮುಖಗಳ ಪಾರ್ಶ್ವ ರೇಖೆಗಳು. ಇವು ಜೀವನಚರಿತ್ರಕಾರನಿಗೂ, ದೇಶಚರಿತ್ರಕಾರನಿಗೂ ಅಷ್ಟಿಷ್ಟು ಉಪಯುಕ್ತವಾಗಬಹುದಾದ ಕಚ್ಚಾ ಸಾಮಗ್ರಿ.

ನನ್ನ ಬುದ್ಧಿಗೆ ಅರ್ಹರೆಂದು ತೋರಿದ ಕೆಲಮಂದಿ ಮಹನೀಯರ ವಿಷಯದಲ್ಲಿ ನನ್ನ ಕಣ್ಣು ಕಂಡಷ್ಟನ್ನು, ನನ್ನ ಮನಸ್ಸು ಪಟ್ಟಷ್ಟನ್ನು, ನನ್ನ ನೆನಪು ಉಸಿರಿದಷ್ಟನ್ನು ಒಬ್ಬರಿಬ್ಬರು ಚಿರಂಜೀವಿ ಮಿತ್ರರಿಗೆ ಹೇಳಿ ಅವರ ಕೈಯಿಂದ ಬರೆಯಿಸಿದ್ದೇನೆ. ಇವು ಸಂಪೂರ್ಣಗಳಲ್ಲ. ನಾನು ಹೇಳಿರುವ ಅಭಿಪ್ರಾಯಗಳು ಸರ್ವಸಮ್ಮತವಾದವೆಂದೂ ನನ್ನ ಮನಸ್ಸಿನಲ್ಲಿಲ್ಲ. ನಾನು ಹೇಳಿರುವ ಎಷ್ಟೋ ಅಭಿಪ್ರಾಯಗಳಿಂದ ಬೇರೆಯಾದ ಭಾವನೆಗಳು ಇತರರ ಮನಸ್ಸಿನಲ್ಲಿರಬಹುದು. ನನ್ನ ನೆನಪಿನಲ್ಲಿಯೂ ಲೋಪಗಳಿರಬಹುದು. ಅಭಿಪ್ರಾಯ ವಿಷಯದಲ್ಲಿ ಭೇದವಿರುವುದು ಅಷ್ಟು ಮುಖ್ಯವಲ್ಲ; ವಸ್ತು ಸಂಗತಿಗಳಲ್ಲಿ ಭೇದವಿದ್ದರೆ ಅದನ್ನು ದಾಖಲೆ ನೋಡಿ ತಿದ್ದಿಕೊಳ್ಳಬೇಕಾಗುತ್ತದೆ. ನಾನು ಹೇಳಿರುವ ವಸ್ತು ಸಂಗತಿಗಳಲ್ಲಿ ಏನಾದರೂ ಹೆಚ್ಚು ಕಡಮೆ ವಾಚಕರಿಗೆ ಕಂಡುಬಂದಲ್ಲಿ ಅವರು ದಯಮಾಡಿ ನನಗೆ ತಿಳಿಸಿಕೊಡಬೇಕೆಂದು ಬೇಡುತ್ತೇನೆ.

ಸಂತಃ ಸದಾಭಿಗಂತವ್ಯಾ
ಯದಿ ನೋಪದಿಶಂತ್ಯಪಿ ।
ಯಾಸ್ತು ಸ್ವೈರಕಥಾಸ್ತೇಷಾಂ
ಉಪದೇಶಾ ಭವಂತಿ ತಾಃ ॥

[ಸತ್ಪುರುಷರಲ್ಲಿಗೆ ಯಾವಾಗಲೂ ಹೋಗುತ್ತಿರಬೇಕಾದದ್ದು. ಅವರು (ಉಪದೇಶವೆಂದು ಹೇಳಿ) ಉಪದೇಶ ಮಾಡದೆ ಇದ್ದರೂ ಪರವೆಯಿಲ್ಲ. ಅವರು ತಮ್ಮ ಮನಸ್ಸು ಬಂದಂತೆ ಏನು ಮಾತುಕಥೆ ನಡಸಿದರೂ ಅದೇ ನಮಗೆ ಉಪದೇಶವಾಗುತ್ತದೆ.]

# ೨

## ಗಾಯಕ ಕೆಂಪೇಗೌಡರು

ಇವರ ಪರಿಚಯ ನನಗಿದ್ದದ್ದು ಬಹು ಕೊಂಚ—ಸುಮಾರು ಎರಡು ಮೂರು ಘಂಟೆಗಳ ಕಾಲದ್ದು.

ಕೆಂಪೇಗೌಡರು ಕೊಯಮುತ್ತೂರು ಪ್ರಾಂತದವರು.* ಅವರಿಗೆ ಸಂಗೀತದ ಹುಚ್ಚು ಹೇಗೆ ಬಂತೋ ಹೇಳುವವರಿಲ್ಲ. ಅವರು ಬಾಲ್ಯ ಕಳೆದ ಮೇಲೆ ತಂಜಾವೂರು ಜಿಲ್ಲೆಯ ತಿರುವಾಯೂರಿನಲ್ಲಿ ಪ್ರಸಿದ್ಧರಾಗಿದ್ದ ಪಟ್ಣಂ ಸುಬ್ರಹ್ಮಣ್ಯಯ್ಯರ್‌ರವರಲ್ಲಿ ಶಿಷ್ಯರಾಗಿದ್ದರು. ಅಲ್ಲಿ ಮೈಸೂರಿನ ವಿದ್ವಾನ್ ವಾಸುದೇವಾಚಾರ್ಯರ ಸಹಪಾಠಿಗಳಾಗಿದ್ದರು. ಅವರ ಕಡೆಕಡೆಯ ದಿನಗಳಲ್ಲಿ ಬೆಂಗಳೂರು-ಬನ್ನೇರುಘಟ್ಟ ದಾರಿಯಲ್ಲಿರುವ ಜಿಗಣಿ ಎಂಬ ಗ್ರಾಮದಲ್ಲಿ ರಾಮೇಗೌಡರೆಂಬವರ ಮನೆಯಲ್ಲಿ ಇದ್ದರೆಂದು ಕೇಳಿದ್ದೇನೆ.

ಈಗ್ಗೆ ಅರುವತ್ತು ವರ್ಷಗಳ ಹಿಂದೆ ನನ್ನ ಹಿರಿಯ ಬಂಧುಗಳೊಬ್ಬರು ಎಂ. ವೆಂಕಪ್ಪಯ್ಯ ಎಂಬವರು ಬೆಂಗಳೂರಿನಲ್ಲಿದ್ದರು. ಅವರು ದಂಡಿನ ರಾವ್ ಬಹದ್ದೂರ್ ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್‌ರವರ ಹೈಸ್ಕೂಲಿನಲ್ಲಿ ಇಂಗ್ಲಿಷ್ ಮೇಷ್ಟರಾಗಿದ್ದರು. ಅವರಿಗೆ ಸಂಗೀತ ಸಾಹಿತ್ಯಗಳಲ್ಲಿ ಸ್ವಾಭಾವಿಕವಾದ ಕುತೂಹಲ. ಇಂಗ್ಲಿಷಿನಲ್ಲಿ ಗೋಲ್ಡ್‌ಸ್ಮಿತ್, ಆಡಿಸನ್—ಇವರ ಪ್ರಬಂಧಗಳು ಅವರಿಗೆ ಅತ್ಯಂತ ಪ್ರಿಯವಾಗಿದ್ದವು. ಅವರ ಗ್ರಂಥಗಳ ಅನೇಕ ಭಾಗಗಳನ್ನು ನೆನಪಿನಿಂದ ಹೇಳುತ್ತಿದ್ದರು. ಹಾಗೆಯೇ ಅವರ ಷೇಕ್ಸ್‌ಪಿಯರ್ ಉತ್ಸಾಹ. ಆ ಮಹಾಕವಿಯ ನಾಟಕಗಳನ್ನು ನಾಲ್ಕಾರು ಸಲ ಓದಿದ್ದರು. ಇದಕ್ಕೆ ಸರಿತೂಗುವಷ್ಟು ಉತ್ಸಾಹ

---

* ಇದು ಸರಿಯಾದ ಹೇಳಿಕೆಯಲ್ಲವೆಂದು ಶ್ರೀ ಎಚ್. ಕೆ. ವೀರಣ್ಣಗೌಡರು ತೋರಿಸಿಕೊಟ್ಟಿದ್ದನ್ನು ಡಿ. ವಿ. ಜಿ. ಅವರು ಒಪ್ಪಿಕೊಂಡಿದ್ದರು. ಗೌಡರು ಸೂಚಿಸಿದ ತಿದ್ದುಪಡಿಯನ್ನು ಅನುಬಂಧವಾಗಿಯೂ ಅಚ್ಚಿಸಿದ್ದರು. ಆ ಭಾಗ ಹೀಗಿದೆ: "...ಶ್ರೀ ಕೆಂಪೇಗೌಡರು ಕೊಯಮುತ್ತೂರು ಕಡೆಯವರಲ್ಲ; ಚನ್ನಪಟ್ಟಣ ತಾಲ್ಲೂಕು ನಾಗವಾರ ಗ್ರಾಮದವರು...ಆದರೂ ಕೊಯಮುತ್ತೂರು ಕಡೆ ಬಹಳ ಕಾಲ ಇದ್ದು ಸಂಗೀತ ವಿದ್ಯಾಪಾರಂಗತರಾದರೆಂದು ಕೇಳಿದ್ದೇನೆ." ('ಕಲೋಪಾಸಕರು', ಪು. ೧೨೬)

ಅವರಿಗಿದ್ದದ್ದು ಸಂಗೀತದ ವಿಷಯದಲ್ಲಿ. ಎಲ್ಲಿ ಒಳ್ಳೆಯ ಸಂಗೀತವೆಂದರೂ ಹೋಗುವರು—ನನ್ನನ್ನೂ ಜೊತೆಗೆ ಕರೆದುಕೊಂಡು ಹೋಗುವರು. ಅಷ್ಟೇ ಅಲ್ಲದೆ ಅವರಿಗೆ ದಕ್ಷಿಣಾಮೂರ್ತಿಶಾಸ್ತ್ರಿಗಳವರಲ್ಲಿ ಕ್ರಮವಾಗಿ ಸಂಗೀತ ಪಾಠವಾಗಿತ್ತು. ಒಳ್ಳೆಯ ಕಂಠಶುದ್ಧಿ ಇದ್ದದ್ದರಿಂದ ಅವರ ಹಾಡಿಕೆ ಶ್ರಾವ್ಯ ವಾಗಿತ್ತು. ಅವರು ಸಭೆಗಳಲ್ಲಿ ಹಾಡುತ್ತಿದ್ದವರಲ್ಲ. ಆತ್ಮಸಂತೋಷಕ್ಕಾಗಿ, ಆತ್ಮೀಯರ ಸಂತೋಷಕ್ಕಾಗಿ ಸಣ್ಣ ಕೊಠಡಿಗಳಲ್ಲಿ ತಮ್ಮಷ್ಟಕ್ಕೆ ತಾವೇ, ಪಕ್ಕವಾದ್ಯಗಳೊಂದೂ ಇಲ್ಲದೆ, ಹಾಡುತ್ತಿದ್ದರು. ಅವರು ವಾಸವಿದ್ದದ್ದು ಚಿಕ್ಕಪೇಟೆಯ ಬೇತಿಂಗ್‌ಘಾಟ್ ಗಲ್ಲಿಯಲ್ಲಿ—ವಾಜಪೇಯಂ ಮನೆತನಕ್ಕೆ ಸೇರಿದ್ದ ಒಂದಾನೊಂದು ಕಟ್ಟಡದಲ್ಲಿ. ಆ ಕಟ್ಟಡದಲ್ಲಿ ಐದಾರು ಕುಟುಂಬ ಗಳು ವಾಸವಿದ್ದಂತೆ ನನ್ನ ಜ್ಞಾಪಕ. ಅವರ ಪೈಕಿ ವೆಂಕಪ್ಪಯ್ಯನವರದೂ ಒಂದು.

ವೆಂಕಪ್ಪಯ್ಯನವರಿಗೆ ಮಕ್ಕಳಿರಲಿಲ್ಲ. ಎರಡುಮೂರು ಆಗಿಹೋಗಿದ್ದವು. ನನ್ನ ಹೆಂಡತಿ ಅವರ ಸೋದರ ಸೊಸೆಯಾದದ್ದರಿಂದ ಅವರಿಗೆ ನನ್ನಲ್ಲಿ ಅತಿ ಶಯವಾದ ಮಮತೆ. ಬೇಸಗೆಯಲ್ಲಿ, ಆಗಾಗ ನಾನು ಅವರ ಜೊತೆಯಲ್ಲಿ ಊಟ ಮಾಡಬೇಕು, ಅವರೊಡನೆ ಕಾಲ ಕಳೆಯಬೇಕು. ಒಂದಾನೊಂದು ದಿನ ಹಾಗೆ ನಾನು ಅವರೊಡನೆ ಇದ್ದೇನೆ. ರಾತ್ರಿ ಮಾಳಿಗೆಯ ಮೇಲೆ ಹಾಸಿಗೆ ಹಾಸಿಕೊಂಡು ಸೆಕೆಯಾಗಿದ್ದದ್ದರಿಂದ ಏನೋ ಹರಟುತ್ತ ಕುಳಿತಿದ್ದೇವೆ. ಮನೆಯ ತಲೆಬಾಗಿಲ ಹೊರಗಡೆಯಿಂದ ಯಾರೋ ಬಾಗಿಲು ತಟ್ಟಿದಂತೆ ಸದ್ದಾಯಿತು. ವೆಂಕಪ್ಪಯ್ಯನವರು "ಯಾರದು?" ಎಂದರು. ಪುನಃ ಬಾಗಿಲು ತಟ್ಟಿದರು. "ಯಾರಯ್ಯಾ ಅದು?" ಮತ್ತೆ ಬಾಗಿಲು ತಟ್ಟಿದರು. ವೆಂಕ ಪ್ಪಯ್ಯ ಕೆಳಗಿಳಿದು ತಲೆಬಾಗಿಲು ತೆಗೆದರು. ಅಲ್ಲಿದ್ದವರು ಕೆಂಪೇಗೌಡರು. ಈತನನ್ನು ನೋಡುತ್ತಲೇ (ತಮಿಳಿನಲ್ಲಿ) "ವೆಂಕಪ್ಪಾ, ಕುಡು ಎಟ್ಟಣಾ" (ಎಂಟಾಣೆ ಕೊಡು) ಎಂದರು. ವೆಂಕಪ್ಪಯ್ಯ ತಮಿಳಿನಲ್ಲಿಯೇ ಕೇಳಿದರು:

ವೆಂಕಪ್ಪಯ್ಯ: "ಯಾಕೆ ಎಂಟಾಣೆ?"

ಕೆಂ: "ತಿಳಿಯದೋ ನಿನಗೆ? ನನ್ನನ್ನು ಹೊಸದಾಗಿ ನೋಡುತ್ತಿ ದ್ದೀಯೋ ಈಹೊತ್ತು?"

ವೆಂ: (ನಕ್ಕು) "ಸಂಗೀತ ಯಾವಾಗಲಯ್ಯಾ ಕೇಳುವುದು?"

ಕೆಂ: "ಸಂಗೀತಕ್ಕೇನು ಕಷ್ಟ? ಎಂಟಾಣೆ ಕೊಡು ಹೋಗಿ ಮತ್ತೆ ಬರುತ್ತೇನೆ."

ವೆಂ : "ಎಂಟಾಣೆಗೇನು ಕಷ್ಟ, ತೆಗೆದುಕೋ. ಹಾಡಿದ ಮೇಲೆ ಇನ್ನೂ ಬೇಕಾದ್ದು ಕೊಟ್ಟೇನು."

ಹಾಗೆ ಹೇಳಿ ತಮ್ಮ ನಶ್ಯದ ಡಬ್ಬಿಯಿಂದ ಎರಡು ಪಾವಲಿ ತೆಗೆದು ಆತನ ಕೈಯಲ್ಲಿಟ್ಟರು.

ಆಮೇಲೆ ನಾವಿಬ್ಬರೂ ನಮ್ಮ ಹಾಸಿಗೆಗಳ ಮೇಲೆ ಅರ್ಧಮರ್ಧ ನಿರೀಕ್ಷಿಸಿ ಕೊಂಡು ಕುಳಿತೆವು. ಅರ್ಧಘಂಟೆಯಾದ ಮೇಲೆ ಕೆಂಪೇಗೌಡರು ಬಂದರು. ನಮ್ಮಿಬ್ಬರ ನಡುವೆ ಕುಳಿತು ಒಂದೆರಡು ನಿಮಿಷ ಆ ಮಾತು ಈ ಮಾತು ಆಡಿ "ಯಾವ ರಾಗ ಬೇಕು?" ಎಂದರು. ವೆಂಕಪ್ಪಯ್ಯ "ನಿನ್ನ ಖುಷಿ" ಎಂದರು. ಕೆಂಪೇಗೌಡರು ಒಂದು ಕ್ಷಣ ಯೋಚಿಸಿ ಆನಂದಭೈರವಿ ಆಲಾಪ ನೆಗೆ ಪ್ರಾರಂಭ ಮಾಡಿದರು. ಆಗ ಘಂಟೆ ರಾತ್ರಿ ಸುಮಾರು ಒಂಭತ್ತೂವರೆ. ಸೊಗಸಾದ ಬೆಳದಿಂಗಳು. ಆತ ರಾಗಾಲಾಪನೆ ಮಾಡಿ "ಹಿಮಾಚಲ ತನಯ ಬ್ರೋಚುಟಕಿದಿ ಸಮಯಮು" ಎಂಬ ಕೃತಿಯನ್ನು ಹಾಡಿ ಮುಗಿಸಿದ. ಅಲ್ಲಿಯವರೆಗೂ ವೆಂಕಪ್ಪಯ್ಯ, ನಾನು ಈ ಲೋಕದಲ್ಲಿದ್ದಂತಿರಲಿಲ್ಲ. ಹೊತ್ತಿನ ಯೋಚನೆ ನಮಗೆ ಬರಲಿಲ್ಲ. ಮುಗಿದಾಗ ಗಡಿಯಾರ ನೋಡಿದರೆ ಹನ್ನೆರಡು ಕಳೆದುಹೋಗಿತ್ತು. ಆ ಆನಂದಭೈರವಿ ಕೇಳಿದ ಮೇಲೆ ಪುನಃ ಅಂಥದನ್ನು ನಾನು ಕೇಳಿಯೇನೆಂಬ ನಿರೀಕ್ಷೆಯೇ ಇಲ್ಲ. ಎಷ್ಟೋ ಆನಂದ ಭೈರವಿಗಳನ್ನು ಕೇಳಿದ್ದೇನೆ. ಬಹಳ ಒಳ್ಳೆಯವುಗಳನ್ನು ಕೇಳಿದ್ದೇನೆ. ಕೆಂಪೇಗೌಡರ ವಾಣಿಯೇ ಬೇರೆ.

ಎರಡು ಮೂರು ವರ್ಷಗಳಾದ ಮೇಲೆ ಒಂದು ದಿನ ಬೆಳಗ್ಗೆ ಸುಮಾರು ಹತ್ತು ಘಂಟೆಯಲ್ಲಿ ಯಾರೋ ಒಬ್ಬರು "ಸಿದ್ದಿಕಟ್ಟೆಯ ರಸ್ತೆಯಲ್ಲಿ ಕೆಂಪೇ ಗೌಡರು ಹಾಡುತ್ತಿದ್ದಾರೆ" ಎಂದು ಇನ್ನು ಯಾರಿಗೋ ಹೇಳಿದ್ದು ನನ್ನ ಕಿವಿಗೆ ಬಿತ್ತು. ನಾನು "ಎಲ್ಲಿ? ಯಾವಾಗ?" ಎಂದು ಕೇಳಿದೆ. "ಬೆಂಕಿ ನವಾಬರ ಬೀದಿಯಲ್ಲೆಲ್ಲೋ" ಎಂದು ಹೇಳಿ ಅವರು ಹೊರಟುಹೋದರು. ನಾನು ಬೆಂಕಿ ನವಾಬರ ಬೀದಿಗೆ ಹೋದೆ. ಅಷ್ಟು ಹೊತ್ತಿಗೆ ಗೌಡರು ಅಲ್ಲಿಂದ ಹೊರಟುಹೋಗಿದ್ದರು. ಅದರ ಕಥೆ ಹೀಗೆ : ಕೆಂಪೇಗೌಡರು ಅಂದು ಬೆಳಗ್ಗೆ ಒಂಭತ್ತು ಘಂಟೆ ಸುಮಾರಿನಲ್ಲಿ ಅಲ್ಲಿ ಒಂದು ಅಂಗಡಿಗೆ ಹೋಗಿ ಏನೋ ಕೇಳಿದರಂತೆ. ಅಂಗಡಿಯಾತ ಅವರ ಸ್ನೇಹಿತ. ಆತ ಹೇಳಿದನಂತೆ : "ಕೆಂಪೇ ಗೌಡರೆ, ನಿಮ್ಮ ಪ್ರಸಿದ್ಧಿ ಜೋರಾಗಿದೆ. ನಿಮ್ಮ ಹಾಡಿಕೆಯನ್ನು ಎಲ್ಲರೂ ಕೊಂಡಾಡುತ್ತಾರೆ. ಅದನ್ನು ಕೇಳುವ ಯೋಗ ನನ್ನ ಹಣೆಯಲ್ಲಿ ಬರೆದಿಲ್ಲ."

ಗೌಡರು : "ಅದು ಯಾಕೆ?"

ಅಂಗಡಿಯಾತ : "ನೋಡಿ—ಸಂಗೀತಸಭೆಗಳೆಲ್ಲ ಆಗುವುದು ಸಾಯಂ ಕಾಲ. ಅದೇ ನನ್ನ ಗಿರಾಕಿಗಳ ಹೊತ್ತು. ಆಗ ನಾನು ಇಲ್ಲಿ ಇಲ್ಲದೆಹೋದರೆ ನನ್ನ ಜೀವನ ಹೇಗೆ?"

ಗೌಡರು : "ನೀನು ಯಾಕಯ್ಯಾ ಅಲ್ಲಿಗೆ ಬರಬೇಕು? ನಾನೇ ಇಲ್ಲಿಗೆ ಬಂದಿದ್ದೇನಲ್ಲ, ಏನು ಬೇಕು ಕೇಳು."

ಅಂಗಡಿಯಾತ : "ನೀವು ಏನು ಹಾಡಿದರೂ ಅದು ನಮ್ಮ ಭಾಗ್ಯ."

ಗೌಡರು ಅಂಗಡಿಯಲ್ಲಿದ್ದ ಒಂದು ಧಾನ್ಯದ ಮೂಟೆಯ ಮೇಲೆ ಕುಳಿತು ಸಾವೇರಿ ರಾಗದಲ್ಲಿ ಹಾಡಿದರಂತೆ. ಬೀದಿಯಲ್ಲಿ ಜನ ಗುಂಪು ಸೇರಿದರು. ಈ ಕೊನೆಯಿಂದ ಆ ಕೊನೆಯವರೆಗೂ ಸ್ತಬ್ಧರಾಗಿ ನಿಂತು ಮೋಹಿತರಾದರು— ಸುಮಾರು ಒಂದೂವರೆ ಘಂಟೆಯ ಕಾಲ. ಆ ಹೊತ್ತು ನಾನು ದುರದೃಷ್ಟ ಶಾಲಿ ಎಂದುಕೊಂಡೆ. ಅವರ ಧ್ವನಿಯನ್ನು ಕೇಳುವ ಯೋಗ ಮತ್ತೆ ನನಗೆ ದೊರೆಯಲಿಲ್ಲ.

ಅವರ ಶಿಷ್ಯರೊಬ್ಬರು ರಾಮಸ್ವಾಮಿ ಪಿಳ್ಳೈ ಎಂಬವರು ನನಗೆ ಸ್ನೇಹಿತ ರಾದರು. ಅವರು ಪಿ. ಡಬ್ಲ್ಯು. ಇಲಾಖೆಯಲ್ಲಿ ಒಬ್ಬ ಸಣ್ಣ ಗುಮಾಸ್ತೆ ಯಾಗಿದ್ದರು. ಅವರ ಶಾರೀರ ಕೆಂಪೇಗೌಡರ ಶಾರೀರದಂತೆ ದೊಡ್ಡ ಮಟ್ಟ ದ್ದಲ್ಲ. ಸಣ್ಣ ಮಟ್ಟದಲ್ಲಿ ಅದು ಕೋಮಲವಾಗಿತ್ತು. ನಾನು ಲತಾಂಗಿ ರಾಗವನ್ನು ಮೊದಲು ಕೇಳಿದ್ದು ಆತನ ಬಾಯಿಂದ. ಹಂಸಧ್ವನಿಯನ್ನೂ ಆತ ಹಾಡಿ ನನ್ನ ಕೃತಜ್ಞತೆಯನ್ನು ಸಂಪಾದಿಸಿಕೊಂಡ.

## ಪಲ್ಲವಿ

ಒಂದಾನೊಂದು ದಿನ ಕೆಂಪೇಗೌಡರೊಡನೆ ಸ್ನೇಹಿತರು ಮಾತನಾಡು ತ್ತಿದ್ದಾಗ ಸಂಗೀತದಲ್ಲಿ ಪಲ್ಲವಿ ಹಾಡಿಕೆಯ ಪ್ರಸ್ತಾವ ಬಂತು. ದಕ್ಷಿಣ ದೇಶದ ಯಾರೋ ಒಬ್ಬ ವಿದ್ವಾಂಸರು ಪಲ್ಲವಿ ಹಾಡಿದ್ದನ್ನು ಕುರಿತು ಒಬ್ಬರು ಪ್ರಶಂಸೆ ಮಾಡಿದರು. ಆಗ ಕೆಂಪೇಗೌಡರು ಆ ವಿದ್ವಾಂಸರ ಪಾಂಡಿತ್ಯ-ಸಾಧನೆಗಳ ವಿಷಯದಲ್ಲಿ ಉದಾರತೆಯಿಂದ ಮಾತನಾಡಿದರು. ಮತ್ತು ಪಲ್ಲವಿಯ ಕ್ರಮವನ್ನು ಕೊಂಚ ವಿಸ್ತಾರವಾಗಿ ತಿಳಿಯಪಡಿಸಿದರು. ಪಲ್ಲವಿಯಲ್ಲಿ ಮುಖ್ಯವಾದದ್ದು ಸಾಹಿತ್ಯವಲ್ಲ. ಆ ಮಾತುಗಳಲ್ಲಿ ಮಹಾ ದೊಡ್ಡ ಭಾವ ವೇನೂ ಇರಬೇಕಾಗಿಲ್ಲ. ತಾಳಕ್ಕೆ ಅಕ್ಷರ ಹೊಂದಬೇಕು. ವಿದ್ವಾಂಸನು

ಅಕ್ಷರಗಳಿಗೆ ತಾಳವನ್ನು ಹೊಂದಿಸಿಕೊಳ್ಳುತ್ತಾನೆ. ಪಲ್ಲವಿಯ ವಿಷಯ ಏನು ಬೇಕಾದರೂ ಆಗಬಹುದು. ಉದಾಹರಣೆ :

(ತೋಡಿ ರಾಗ :)
ತ_ರೀ_ಕೆ_ರೇ
ಕೆ_ರೇ_ಏ_ರೀ
ಏ_ರೀ_ಮೇ_ಲೆ
ಕು_ರೀ_ಮ_ರೀ
ಬ_ರು_ತಿ_ದೆ

ಅಲ್ಲಿ ಕುಳಿತಿದ್ದಂತೆಯೇ ಆ ಕ್ಷಣವೇ ಇದನ್ನು ರಚನೆ ಮಾಡಿ ಸುಮಾರು ಒಂದು ಘಂಟೆ ಹಾಡಿದರು ಕೆಂಪೇಗೌಡರು.

ಕೆಂಪೇಗೌಡರ ವಿದ್ವತ್ತೂ ಗಾನಪ್ರತಿಭೆಯೂ ಪ್ರಶಂಸೆಗೆ ತಕ್ಕವು. ಅವೆರಡಕ್ಕಿಂತ ಮಿಗಿಲಾದದ್ದು ಅವರ ಶಾರೀರದ ಮಾಧುರ್ಯ. ಯಾವ ಸ್ಥಾಯಿಯಲ್ಲಿ ಹಾಡಲಿ, ಕೊಂಚವೂ ಪ್ರಯಾಸ ಕಾಣದೆ ಹರಿದುಬರುತ್ತಿತ್ತು ಅವರ ನಾದಧಾರೆ. ಚಿನ್ನದ ಉಂಡೆಯಿಂದ ಅಕ್ಕಸಾಲಿಗನು ತಂತಿ ಎಳೆದಾಗ ಹೇಗೆ ಬರುತ್ತದೋ ಹಾಗೆ ಕಾಂತಿಗೂಡಿ ಬರುತ್ತಿತ್ತು ಆತನ ಕಂಠದಿಂದ ಗಾನಧಾರೆ.

೩

# ಸಂ. ಗೋ. ಬಿಂದೂರಾಯರು

ಒಂದು ದಿನ ಮಧ್ಯಾಹ್ನ ಮೂರು ಘಂಟೆಯ ಸಮಯದಲ್ಲಿ ಬಿಂದೂರಾಯರು ನನ್ನ ಮನೆಗೆ ದಯಮಾಡಿಸಿದರು. ನಾನು ಕೇಳಿದೆ :

ನಾನು : "ಯಾವಾಗ ಬಂದಿರಿ ?"

ಬಿಂ : "ಬೆಳಗ್ಗೆ ಚಿತ್ರದುರ್ಗದಿಂದ ಹೊರಟು ಹನ್ನೊಂದು ಘಂಟೆಗೆ ಬಂದೆ. ತಮ್ಮನ ಮನೆಯಲ್ಲಿ ಸ್ನಾನ ಭೋಜನ ತೀರಿಸಿಕೊಂಡು ತಮ್ಮನ್ನು ನೋಡಲು ಬಂದೆ. ನನಗೆ ಈ ಹೊತ್ತು ತೊಂಭತ್ತೆರಡಾಯಿತು. ಆ ಮಾತು ತಮ್ಮಲ್ಲಿ ಹೇಳಬೇಕೆನಿಸಿತು."

ನಾನು : "ಹೇಗೆ ಬಂದಿರಿ ? ಗಾಡಿಯಲ್ಲೋ ?"

ಬಿಂ : (ಕಾಲುಗಳ ಕಡೆ ಕೈ ತೋರಿಸಿ) "ಇದು ಇರುವಾಗ ಗಾಡಿ ಏಕೆ ?"

ಕೊಂಚ ಹೊತ್ತು ಸ್ವಂತ ವಿಷಯಗಳನ್ನು ಕುರಿತು ಮಾತನಾಡಿದೆವು. ಬಳಿಕ ಹೊರಟರು. ನಾನು ಕೇಳಿದೆ :

ನಾನು : "ಈಗ ಎಲ್ಲಿಗೆ ?"

ಬಿಂ : "ಚಾಮರಾಜಪೇಟೆಯಲ್ಲಿ ಕೆಲಮಂದಿ ಹಳೆಯ ಸ್ನೇಹಿತರನ್ನು ನೋಡಬೇಕು."

ನಾನು : "ತುಂಬ ಬಿಸಿಲಾಗಿದೆಯಲ್ಲ—ಗಾಡಿ ತರಿಸಲೆ ?"

ಬಿಂ : "ಚಾಮರಾಜಪೇಟೆಗೆ ಗಾಡಿ ಏಕೆ ? ಹತ್ತಿರವೇ ಇದೆ."

ಅದೇ ನನಗಾದ ಕಡೆಯ ಸಾರಿಯ ದರ್ಶನ. ಆ ದಿವಸ ಅವರ ಮುಖದಲ್ಲಿ ಕಾಣುತ್ತಿದ್ದ ತೇಜಸ್ಸನ್ನೂ ಅವರ ದೇಹದಲ್ಲಿ ಕಾಣುತ್ತಿದ್ದ ದಾರ್ಢ್ಯವನ್ನೂ ನೋಡಿದವರಿಗೆ ಅವರ ಅವಸಾನ ಅಷ್ಟು ಸಮೀಪದಲ್ಲಿದೆಯೆಂದು ಅನ್ನಿಸುತ್ತಿರಲಿಲ್ಲ.

## ಚಿಟಕಿನಿ ಅಂಗಡಿಯ ಗೋಷ್ಠಿ

ಬಿಂದೂರಾಯರಿಗೆ ನನ್ನ ಪರಿಚಯ ಎಷ್ಟು ಹಳೆಯದೋ ನನಗೆ ಅವರ ಪರಿಚಯ ಅದಕ್ಕಿಂತ ಹಳೆಯದು. ಆಗ ನಾನು ಅವರನ್ನು ದೂರದಿಂದ ನೋಡಿ ಮನಸ್ಸಿನೊಳಗೆ ಅತಿಶಯವಾಗಿ ಮೆಚ್ಚಿಕೊಳ್ಳುತ್ತಿದ್ದೆ.

೧೯೧೦-೧೧ರ ಸುಮಾರು. ಬೆಂಗಳೂರು ಚಿಕ್ಕಪೇಟೆಯ ಅಹಮದ್ ಬಿಲ್ಡಿಂಗ್ಸ್ ಕಟ್ಟಡದ ಪಶ್ಚಿಮದಲ್ಲಿ ಒಂದು ಓಣಿ. ಆ ಓಣಿಯನ್ನು ಬಿಟ್ಟರೆ ಮೊದಲನೆಯ ಅಂಗಡಿ (ಷಾಪ್) ಸೀತಾರಾಮಯ್ಯನವರದು. ಅದರಲ್ಲಿ ಗಾಜಿನ ಸಾಮಾನು, ಸೋಪು, ಕ್ಷೌರದ ಸಾಮಗ್ರಿ, ಹೊಲಿಗೆಯ ದಾರ, ಕಸೂತಿಯ ದಾರ (Knitting), ಬಗೆಬಗೆಯ ಸೂಜಿಗಳು, ಚಿತ್ರಪಟಗಳಿಗೆ ಹಾಕುವ ಚೌಕಟ್ಟುಗಳು—ಇತ್ಯಾದಿ ಸಾಮಾನುಗಳ ವ್ಯಾಪಾರ ನಡೆಯುತ್ತಿತ್ತು. ಅಂಥ ಅಂಗಡಿಗಳನ್ನು ಚಿಟಕಿನಿ ಅಂಗಡಿಗಳು ಎಂದು ಕರೆಯುತ್ತಿದ್ದರು. ನಾನು ಹೇಳುತ್ತಿರುವ ಕಾಲದಲ್ಲಿ ಅಂಥ ಅಂಗಡಿಗಳು ಚಿಕ್ಕಪೇಟೆಯಲ್ಲಿಯೇ ಎಂಟು ಹತ್ತು ಇದ್ದವು.

ಸೀತಾರಾಮಯ್ಯನವರ ಅಂಗಡಿಯಲ್ಲಿ ಪ್ರತಿದಿನವೂ ಸಂಜೆ ಐದೂವರೆಯಿಂದ ಆರೂವರೆಯವರೆಗೆ ಒಂದು ಮಿತ್ರಗೋಷ್ಠಿ ಸೇರುತ್ತಿತ್ತು. ಅಲ್ಲಿ ಬರುತ್ತಿದ್ದವರೆಲ್ಲ ಸರಕಾರದ ಬೇರೆ ಬೇರೆ ಕಛೇರಿಗಳಲ್ಲಿ ಉದ್ಯೋಗಸ್ಥರಾಗಿದ್ದವರು. ಅವರಲ್ಲಿ ಕೆಲವರನ್ನು ಸ್ಮರಿಸಿಕೊಳ್ಳಬೇಕು: (೧) ಬಿ. ವೆಂಕಟಕೃಷ್ಣಪ್ಪ (೨) ಆರ್. ವೆಂಕಟರಾಮಯ್ಯ (೩) ಇನ್‌ಸ್ಪೆಕ್ಟರ್ ಚೌಡಯ್ಯ (೪) ಎಸ್. ಎನ್. ಹನುಮಂತರಾವ್ (೫) ಎಸ್. ಎನ್. ಶ್ರೀನಿವಾಸರಾವ್ (೬) ಎಚ್. ನಾಗೇಶರಾವ್ (೭) ಶಾಮಯ್ಯಂಗಾರ್ (೮) ಎಸ್. ಜಿ. ಬಿಂದೂರಾವ್.

ಇವರೆಲ್ಲರೂ ಸಂಗೀತ ಸಾಹಿತ್ಯಪ್ರೇಮಿಗಳು. ಅವರ ಪೈಕಿ ನನಗೆ ಹೆಚ್ಚು ಬಳಕೆಯಿದ್ದವರು ವೆಂಕಟಕೃಷ್ಣಪ್ಪನವರು. ಅವರ ವಿಷಯವೂ ಬರೆಯಲರ್ಹವಾದದ್ದು.

## ಬಿ. ವೆಂಕಟಕೃಷ್ಣಪ್ಪನವರು

ವೆಂಕಟಕೃಷ್ಣಪ್ಪನವರು ಎಕ್ಸೈಸ್ ಇಲಾಖೆಯಲ್ಲಿ ಅಸಿಸ್ಟೆಂಟ್ ಕಮಿಷನರಾಗಿದ್ದರು. ಮೈಸೂರಿನ ಮಹಾರಾಜ ಕಾಲೇಜಿನ ಹಾಸ್ಟಲಿನಲ್ಲಿ ಅವರಿಗೂ ನನಗೂ ಪ್ರಥಮ ಪರಿಚಯ. ಅವರು ಸೀನಿಯರ್ ಬಿ.ಎ. ಕ್ಲಾಸಿನಲ್ಲಿದ್ದರು. ನಾನು ಫೋರ್ತ್ ಫಾರ್ಮಿನಲ್ಲಿದ್ದೆ. ಅವರ ಕೊಠಡಿಯ ಸಂಗಾತಿ ಮಧ್ವಾಚಾರ್ಯರೆಂಬವರು, ಮದನಪಲ್ಲಿಯ ಕಡೆಯವರು. ನನ್ನ ಕೊಠಡಿಯ ಪಕ್ಕದಲ್ಲಿಯೇ ಅವರ ಕೊಠಡಿ. ಹೀಗೆ ಬಳಕೆ ಬೆಳೆಯಿತು.

ವೆಂಕಟಕೃಷ್ಣಪ್ಪನವರೂ ಮಧ್ವಾಚಾರ್ಯರೂ ಆಕಾರದಲ್ಲಿ ಗಿಡ್ಡ. ಮಧ್ವಾಚಾರ್ಯರು ದಪ್ಪವಾಗಿಯೂ ಇದ್ದರು. ನಾನು ತೆಲುಗು ಮಾತ

ನಾಡುತ್ತಿದ್ದದ್ದರಿಂದ ಅವರಿಗೆ ನನ್ನಲ್ಲಿ ಹೆಚ್ಚು ಅಭಿಮಾನ.

ಆ ಕಾಲದಲ್ಲಿ ಆ ಹಾಸ್ಟಲಿನಲ್ಲಿ ಒಂದು ವಿದ್ಯಾರ್ಥಿ ಸಂಘವಿತ್ತು. ನಾನು ಅದಕ್ಕೆ ಕಾರ್ಯದರ್ಶಿ. ಆಗಾಗ ವಿದ್ವಾಂಸರಿಂದ ಉಪನ್ಯಾಸಗಳನ್ನೇರ್ಪಡಿಸುತ್ತಿದ್ದದ್ದುಂಟು. ಒಂದು ಸಾರಿಯ ಉಪನ್ಯಾಸವನ್ನು ಸೀನಿಯರ್ ಎಫ್. ಎ. ಕ್ಲಾಸಿನಲ್ಲಿದ್ದ ಅಪ್ಪಾಜಿರಾಯರೆಂಬವರು ಮಾಡಿದರು. ಆ ದಿನದ ಅಧ್ಯಕ್ಷರು ವಾರ್ಡನರಾಗಿದ್ದ ಬಿ. ದಾಸಪ್ಪನವರು. ಉಪನ್ಯಾಸದ ವಿಷಯ ಸೆನೋಫನ್ (Xenophon) ಎಂಬಾತ ಬರೆದಿರುವ "ಸಾಕ್ರಟೀಸ್ ಗುರುವಿನ ಜ್ಞಾಪಕಗಳು" (Memorabilia) ಎಂಬ ಗ್ರಂಥ. ಉಪನ್ಯಾಸ ಮುಗಿದ ಮೇಲೆ ನಾನು ವಂದನಾರ್ಪಣೆಯ ಭಾಷಣ ಮಾಡಿದೆ. ಸಭಿಕರು ಇನ್ನೂ ಆ ಸಭಾಮಂದಿರದಲ್ಲಿದ್ದಾಗಲೇ ಮಧ್ವಾಚಾರ್ಯರು ಓಡಿಬಂದು ನನ್ನನ್ನು ಎರಡು ಕೈಗಳಿಂದಲೂ ಮೇಲಕ್ಕೆತ್ತಿ ಹಿಡಿದರು. ಆಗ ವೆಂಕಟಕೃಷ್ಣಪ್ಪನವರೂ ಅಲ್ಲಿದ್ದರು.

ಹೀಗೆ ಪ್ರಾರಂಭವಾಯಿತು ವೆಂಕಟಕೃಷ್ಣಪ್ಪನವರಿಗೆ ನನ್ನ ವಿಷಯದಲ್ಲಿ ಮಮತೆ.

ಪ್ರಸಕ್ತ ಕಾಲದಲ್ಲಿ ವೆಂಕಟಕೃಷ್ಣಪ್ಪನವರು ಬೆಂಗಳೂರಿನಲ್ಲಿ ಸೆಕ್ರೆಟೇರಿಯಟಿನಲ್ಲೋ ರೆವೆನ್ಯು ಕಮಿಷನರ ಆಫೀಸಿನಲ್ಲೋ ಒಂದು ಜವಾಬ್ದಾರಿಯ ಹುದ್ದೆಯಲ್ಲಿದ್ದರು. ಬಿಡುವುಮಾಡಿಕೊಂಡು ಸಂಗೀತಸಾಹಿತ್ಯ ವ್ಯಾಸಂಗವನ್ನು ನಡಸುತ್ತಿದ್ದರು. ಅವರು ಸಂಕೇತಿಗಳು. ಸಂಕೇತಿ ಜನಾಂಗಕ್ಕೆ ಸಂಗೀತವು ಕುಲವಿದ್ಯೆಯೆಂದು ಅವರು ಹೇಳಿಕೊಳ್ಳುವುದುಂಟು. ವೆಂಕಟಕೃಷ್ಣಪ್ಪನವರಿಗೆ ಸಂಗೀತಶಾಸ್ತ್ರದ ಪರಿಶ್ರಮ ಚೆನ್ನಾಗಿತ್ತು. ಅವರು 'ಹಾರ್ಮೋನಿಯಂ ಸ್ವಯಂಬೋಧಿನಿ' ಎಂಬ ಗ್ರಂಥವನ್ನೂ ಇನ್ನೂ ಒಂದೆರಡು ಗೀತಸಂಕಲನಗಳನ್ನೂ ಬರೆದು ಪ್ರಕಟಪಡಿಸಿದರು.

## ಹಾಸ್ಯಪ್ರಿಯತೆ

ಕನ್ನಡ ಸಾಹಿತ್ಯದಲ್ಲಿಯೂ ಅವರು ಕೆಲಸ ಮಾಡಿದ್ದಾರೆ. ಸರ್ ವಾಲ್ಟರ್ ಸ್ಕಾಟ್ ಕವಿಯ "Black Dwarf" ಎಂಬ ಕಾದಂಬರಿಯನ್ನು ಅವರು "ಶ್ಯಾಮ ಕುಬ್ಜ" ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ವೆಂಕಟಕೃಷ್ಣಪ್ಪನವರೂ ನಾನೂ ಒಂದು ವಾರದಲ್ಲಿ ಮೂರು ನಾಲ್ಕು ದಿವಸವಾದರೂ ಚಿಕ್ಕಪೇಟೆಯಲ್ಲಿ ಸೇರುತ್ತಿದ್ದೆವು. ಒಂದು ದಿನ ಸಂಜೆ

ಅವರೂ ನಾನೂ ಸೀತಾರಾಮಯ್ಯನವರ ಷಾಪಿನ ಕಡೆಗೆ ನಡೆದುಹೋಗುತ್ತಿದ್ದೆವು. ದಾರಿಯಲ್ಲಿ ನಮ್ಮ ಎಡಗಡೆಯ ಶ್ರೇಣಿಯಲ್ಲಿ ರಾವ್ ಬಹದ್ದೂರ್ ಬಿ. ಕೆ. ಗರುಡಾಚಾರ್ಯರ "ಸಿಟಿ ಮಾರ್ಟ್" ಅಂಗಡಿಯಿತ್ತು. ಆ ಅಂಗಡಿಯಲ್ಲಿ ಸರಕಾರಿ ಅಧಿಕಾರಸ್ಥರು, ಕೆಲಮಂದಿ ಲಾಯರುಗಳು, ಪಿಂಛನ್‌ದಾರರು ಸಂಜೆ ಹರಟೆಗಾಗಿ ಸೇರುವುದು ಪದ್ಧತಿ. ಆ ದಿನ ಆ ಗೋಷ್ಠಿಯೊಳಗಿನ ಯಾರೋ ಒಬ್ಬರು ನನ್ನ ಹೆಸರನ್ನು ಗಟ್ಟಿಯಾಗಿ ಹೇಳಿ "ಏನಪ್ಪೋ—ಇನ್ನೂ ಬರಲಿಲ್ಲ?" ಎಂದು ಕೂಗಿ ಎರಡು ಕೈಗಳನ್ನೂ ಮೇಲಕ್ಕೆತ್ತಿ ಅಲ್ಲಾಡಿಸಿದರು. ನನಗೆ ಅದರ ಅರ್ಥ ಹೊಳೆಯಲಿಲ್ಲ. ವೆಂಕಟಕೃಷ್ಣಪ್ಪನವರು ಆ ಕೂಡಲೆ ಅಲ್ಲಿ ನಿಂತು ತಾವೂ ಎರಡು ಕೈಗಳನ್ನೆತ್ತಿ ಅಲ್ಲಾಡಿಸುತ್ತ "ರೂಪಾಯಿ ಬರಲಿಲ್ಲಪ್ಪೋ—ರೂಪಾಯಿ ಬರಲಿಲ್ಲ" ಎಂದರು. ನಾನು ಬೆಪ್ಪಾಗಿ ಅದೇನೆಂದು ಕೇಳಿದೆ. ವೆಂಕಟಕೃಷ್ಣಪ್ಪನವರು ವಿವರಿಸಿದರು:

"ನಿನ್ನ 'ರಂಗಾಚಾರ್ಲು' ಪುಸ್ತಕದ ಪ್ರತಿಗಳನ್ನು ದಿವಾನ್ ಆನಂದರಾಯರು ತಮಗೆ ಬೇಕಾದವರಿಗೆ ಒಂದೊಂದು ಪ್ರತಿ ಕಳಿಸಿದ್ದಾರೆ. ಅದನ್ನು ಈ ಮನುಷ್ಯ ನೋಡಿ ನೀನು ಎಲ್ಲರಿಗೂ ಉಚಿತವಾಗಿ ಕೊಡುತ್ತಿದ್ದೀ ಎಂದು ತಪ್ಪು ತಿಳಿದುಕೊಂಡು ಹೀಗೆ ಆಡಿದರು. ನಾನು ಅದಕ್ಕೆ ಹೇಳಿದೆ, ಬೆಲೆ ಒಂದು ರೂಪಾಯಿ ಕೊಟ್ಟರೆ ಪುಸ್ತಕ ದೊರೆತೀತೆಂದು."

ಹೀಗೆ ಹೇಳಿ ನನ್ನ ಕಡೆ ತಿರುಗಿ "ಬೆಪ್ಪೆ, ಇದಕ್ಕೆಲ್ಲ ಮರುಳುಹೋಗಿ ಬಿಟ್ಟಿ ಪುಸ್ತಕ ಕೊಡಬೇಡ. ನೀನು ಖಂಡಿತ ಹಾಗೆ ಮಾಡಕೂಡದು"—ಎಂದು ನನ್ನಿಂದ ಭಾಷೆ ತೆಗೆದುಕೊಂಡರು.

ವೆಂಕಟಕೃಷ್ಣಪ್ಪನವರು ತುಂಬಾ ಸಾತ್ತ್ವಿಕರು, ಹಾಸ್ಯಶೀಲರು, ಉದಾರಿಗಳು.

ಮೇಲೆ ಹೇಳಿದ ಆರ್. ವೆಂಕಟರಾಮಯ್ಯನವರು ವೆಂಕಟಕೃಷ್ಣಪ್ಪನವರ ಸ್ವಜನ. ವೆಂಕಟಕೃಷ್ಣಪ್ಪನವರದು ಬಾಯಿಹಾಡಿಕೆ; ವೆಂಕಟರಾಮಯ್ಯನವರದು ಪಿಟೀಲು. ವೆಂಕಟರಾಮಯ್ಯನವರು ಕೋ-ಆಪರೇಟಿವ್ ಇಲಾಖೆಯಲ್ಲಿದ್ದರು. ಒಳ್ಳೆಯ ಆಳು, ಠೀವಿಯಿಂದ ಪೋಷಾಕು ಹಾಕಿಕೊಳ್ಳುವರು.

ಇನ್‌ಸ್ಪೆಕ್ಟರ್ ಚೌಡಯ್ಯನವರು ಘಟವಾದ್ಯದಲ್ಲಿ ಪರಿಶ್ರಮ ಮಾಡಿದ್ದವರು. ಅವರೂ ಒಳ್ಳೆಯ ರಸಿಕರು.

ಹನುಮಂತರಾವ್, ಶ್ರೀನಿವಾಸರಾವ್ — ಈ ಅಣ್ಣತಮ್ಮಂದಿರು

ಅಮಲ್ದಾರರಾಗಿದ್ದು ಅಸಿಸ್ಟೆಂಟ್ ಕಮಿಷನರ ಪದವಿಗೆ ಹತ್ತಿದವರು. ಅವರಿಬ್ಬರೂ ಕಾವ್ಯ ಪುರಾಣಗಳಲ್ಲಿ ಆಸಕ್ತರಾಗಿದ್ದರು.

ನಾಗೇಶರಾಯರೂ ಇತರರೂ ಸತ್ಕಾವ್ಯಾಭಿಮಾನಿಗಳು.

## ಭಾರತವಾಚನ ಪ್ರಾರಂಭ

ಈ ರಸಿಕವರ್ಗವು ಸಂಜೆ ಆಫೀಸಿನಿಂದ ಮನೆಗೆ ಬಂದ ತರುವಾಯ ಬಟ್ಟೆ ಬದಲಾಯಿಸಿಕೊಂಡು ಒಂದೊಂದು ದಿನ ಒಬ್ಬೊಬ್ಬ ಮಿತ್ರರ ಮನೆಯಲ್ಲಿ ಸೇರುವ ವಾಡಿಕೆ ಮಾಡಿಕೊಂಡಿದ್ದರು. ಅರ್ಕಾಟ್. ಶ್ರೀನಿವಾಸಾಚಾರ್ಯರ ರಸ್ತೆಯಲ್ಲಿ ಮಿರ್‌ಮಿರ ರಾಮರಾವ್ ಎಂಬವರ ಮನೆಯಲ್ಲಿ ಎಚ್. ನಾಗೇಶ ರಾಯರಿದ್ದರು. ಅಲ್ಲಿ ಈ ರಸಿಕವರ್ಗ ಸೇರಿದ್ದನ್ನು ನಾನು ನೋಡಿದ್ದೇನೆ. ವೆಂಕಟಕೃಷ್ಣಪ್ಪ ಏನನ್ನಾದರೂ ಹಾಡುವರು. ಇನ್ನೊಬ್ಬರು ಯಾವುದಾದರೂ ಶ್ಲೋಕ ಹೇಳುವರು. ಬಿಂದೂರಾಯರು ಭಾರತವಾಚನ ಮಾಡುವರು. ಆಗ್ಗೆ ಬಿಂದೂರಾಯರ ಪರಿಚಯ ನನಗೆ ಆಗಿರಲಿಲ್ಲ.

ಮಿತ್ರಗೋಷ್ಠಿಯ ವಿನೋದದಲ್ಲಿ ಪ್ರಾರಂಭವಾದದ್ದು ಬಿಂದೂರಾಯರ ಭಾರತವಾಚನ. ಕ್ರಮೇಣ ಅದು ಅವರಿಗೆ ಸಂತೋಷದ ಕಾರ್ಯಕ್ರಮ ವಾಯಿತು. ಆಮೇಲೆ ಅದು ನಿತ್ಯ ಪಾರಾಯಣವಾಯಿತು. ಬರುಬರುತ್ತ ಅದು ಜೀವನವ್ರತವಾಯಿತು. ಹಾಗೆಯೇ ಅದು ಒಂದು ಲೋಕಸಮಾರಾಧನೆ ಯಾಯಿತು. ಕಡೆಗೆ ಅದು ಜೀವನದ ಪರಮಸಿದ್ಧಿಯಾಯಿತು. ವಿನೋದ ದಲ್ಲಿ ಪ್ರಾರಂಭವಾದ ಭಾರತವಾಚನ ಪರಮಾತ್ಮಸಂತೃಪ್ತಿಯಲ್ಲಿ ಪರ್ಯವ ಸಾನವಾಯಿತು.

## ಸರಕಾರಿ ಉದ್ಯೋಗ

ಬಿಂದೂರಾಯರು ಆಗ ಸೆಕ್ರೆಟೇರಿಯಟಿನಲ್ಲಿ ಉದ್ಯೋಗದಲ್ಲಿದ್ದರು. ಆ ಕಾಲದ ಫ್ಯಾಷನ್ ಮೇರೆಗೆ ಪೋಷಾಕು ಧರಿಸುತ್ತಿದ್ದರು. ಭರ್ಜರಿ ಮೀಸೆ, ಓಪನ್‌ಕಾಲರ್ ಕೋಟು, ನೆಕ್‌ಟೈ, ಪೈಜಾಮ ಮೊದಲಾದ ಆಡಂಬರಗಳೆಲ್ಲ ಇದ್ದವು. ದರ್ಬಾರು ಠೀವಿಯ ಆಸಾಮಿ. ಅವರ ಆಫೀಸಿನಲ್ಲಿ ಅವರ ಜಬರ್ದಾರಿಯನ್ನು ಕುರಿತು ಕಂಡವರು ಮಾತನಾಡಿಕೊಳ್ಳುತ್ತಿದ್ದರು.

ಒಂದಾನೊಂದು ದಿನ ಅಸಿಸ್ಟೆಂಟ್ ಸೆಕ್ರೆಟರಿಯಾಗಿದ್ದ ಡಿಸೂಜಾರವ ರಿಗೂ ಬಿಂದೂರಾಯರಿಗೂ ಮಾತು ಕೊಂಚ ಬಿಸಿಬಿಸಿಯಾಗಿ ಬಿಂದೂ

ರಾಯರು ಕುಸ್ತಿಗೆ ಸಿದ್ಧರಾಗಿರುವಂತೆ ಕೋಟಿನ ತೋಳುಗಳನ್ನು ಮೇಲಕ್ಕೆತ್ತಿ ಮುಷ್ಟಿಮಾಡಿ ನಿಂತರು. ಹೇಗೋ ಯಾರೋ ಸಮಾಧಾನಮಾಡಿದರು.

ಸ್ವಲ್ಪಕಾಲದ ಮೇಲೆ ಅವರನ್ನು ಮೈಸೂರಿನ ದಸರಾ ಎಗ್ಸಿಬಿಷನ್ ಆಫೀಸಿಗೆ ವರ್ಗಮಾಡಿದರು. ಅಲ್ಲಿ ಅವರು ತೋರಿಸಿದ ದಕ್ಷತೆಯನ್ನು ಕಂಡು ಆಗ ಅಲ್ಲಿಯ ಸೆಕ್ರೆಟರಿಗಳಲ್ಲೊಬ್ಬರಾಗಿದ್ದ ಬಿ. ಸೀತಾರಾಮಾಚಾರ್ಯರು ಬಿಂದೂರಾಯರನ್ನು ಕೃಷ್ಣರಾಜೇಂದ್ರ ಮಿಲ್ಸ್ ಮೊದಲಾದ ಕಾರ್ಖಾನೆಗಳ ಕಾರ್ಯಾಲಯಕ್ಕೆ ಕರೆದುಕೊಂಡರು. ಹೀಗೆ ಮೈಸೂರಿಗೆ ಹೋದ ಬಳಿಕ ಬಿಂದೂರಾಯರ ಭಾರತವಾಚನ ಪರಿಪಕ್ವವಾಗಿ ಕ್ರಮೇಣ ಅದೇ ಅವರ ಜೀವಿತವ್ರತವಾಯಿತು.

ಈ ಸಮಯದಲ್ಲಿ ವೆಂಕಣ್ಣಯ್ಯನವರಿಗೂ ಬಿಂದೂರಾಯರಿಗೂ ಸ್ನೇಹ ಬೆಳೆಯಿತು.

## ಪರಿಷತ್ತಿನಲ್ಲಿ ಗಮಕ ಪಾಠ

೧೯೩೩–೩೪ರಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಉಪಾಧ್ಯಕ್ಷನಾಗುವ ಜವಾಬ್ದಾರಿ ನನ್ನ ಪಾಲಿಗೆ ಬಂದಿತು. ಆಗ ಪರಿಷತ್ತಿನಲ್ಲಿ ಭಾರತವಾಚನದ ಅಭ್ಯಾಸವನ್ನು ಪ್ರೋತ್ಸಾಹಪಡಿಸಬೇಕೆಂದು ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿ, ಶ್ರೀನಿವಾಸಮೂರ್ತಿ ಮೊದಲಾದವರಿಗೂ ತೋರಿತ್ತು. ಅವರೆಲ್ಲರ ಪ್ರಯತ್ನ ಅನುಮೋದನೆಗಳಿಂದ ಪರಿಷತ್ತಿನಲ್ಲಿ ಕಾವ್ಯವಾಚನದ ಅಥವಾ ಗಮಕ ಕಲೆಯ ಕ್ಲಾಸುಗಳನ್ನು ನಡಸತಕ್ಕದ್ದೆಂದೂ ಆ ಕೆಲಸವನ್ನು ಬಿಂದೂರಾಯರು ನಡಸಿಕೊಡಬೇಕೆಂದೂ ತೀರ್ಮಾನವಾಯಿತು.

ಗಮಕ ಕಲೆ ನನಗೆ ಬಾಲ್ಯದಿಂದ ಪ್ರಿಯವಾದದ್ದು. ಮುಳಬಾಗಲು, ಶ್ರೀನಿವಾಸಪುರ, ಚಿಂತಾಮಣಿ ಮೊದಲಾದ ಊರುಗಳಲ್ಲಿ ಸಾಮಾನ್ಯವಾಗಿ ತೆಲುಗರಾದ ವೈಶ್ಯರು 'ವಾಚಕ'ದ ಅಭ್ಯಾಸವನ್ನು ನಡಸುತ್ತಿದ್ದದ್ದನ್ನು ನಾನು ಕಂಡಿದ್ದೆ. 'ಆಂಧ್ರ ಭಾಗವತ', 'ಮನುಚರಿತ್ರೆ' ಮೊದಲಾದ ಕಾವ್ಯಗಳನ್ನು ಒಬ್ಬ ವಿದ್ವಾಂಸನು ಹೇಳಿಕೊಡುತ್ತಿದ್ದ. ಯಾವ ಯಾವ ಕಥಾ ಸನ್ನಿವೇಶಕ್ಕೆ ಯಾವ ಯಾವ ರಾಗ ಉಚಿತವಾದದ್ದು, ಎಲ್ಲೆಲ್ಲಿ ರಾಗವನ್ನು ಹೇಗೆ ವಿನ್ಯಾಸ ಮಾಡತಕ್ಕದ್ದು, ಉಚ್ಚಾರಣೆ ಯಾವ ಮಟ್ಟದಲ್ಲಿರಬೇಕಾದದ್ದು, ಪದಗಳನ್ನು ಬಿಡಿಸುವುದು ಹೇಗೆ, ಅವುಗಳ ಮೇಲೆ ಸ್ವರಭಾರವನ್ನು

ಹಾಕುವುದು ಹೇಗೆ—ಇದನ್ನೆಲ್ಲ ಆ ಪಂಡಿತನು ಕಲಿಸುತ್ತಿದ್ದನು. ನನ್ನ ತಂದೆ ಒಳ್ಳೆಯ ವಾಚಕನೆಂದೆನಿಸಿಕೊಂಡಿದ್ದರು.

ಹೀಗೆ ನನಗೆ ಒಳ್ಳೆಯ ಕಾವ್ಯವಾಚನದ ವಿಷಯದಲ್ಲಿ ಉತ್ಸಾಹ.

ಬಿಂದೂರಾಯರಿಗೆ ಒಳ್ಳೊಳ್ಳೆಯ ಶಿಷ್ಯ ಶಿಷ್ಯೆಯರು ದೊರೆತದ್ದೂ ಒಂದು ಭಾಗ್ಯ. ಅವರಲ್ಲಿ ಮೊಟ್ಟಮೊದಲನೆಯ ಸಾರಿ ಶಿಷ್ಯೆಯರಾಗಿದ್ದವರಲ್ಲಿ ಶ್ರೀಮತಿ ಶಕುಂತಲಾಬಾಯಿ ಪಾಂಡುರಂಗರಾವ್ ಅವರು ಈಗಲೂ ತಮ್ಮ ಕಾವ್ಯ ವಾಚನದಿಂದ ಸಭಿಕರನ್ನು ಸಂತೋಷಪಡಿಸುತ್ತಿದ್ದಾರೆ.

ಪರಿಷತ್ತಿನಲ್ಲಿ ಗಮಕ ತರಗತಿಗಳನ್ನು ನಡೆಸುತ್ತಿದ್ದ ಕಾಲದಲ್ಲಿಯೇ ಬಿಂದೂರಾಯರು ಬಹುಮಟ್ಟಿಗೆ ವಾನಪ್ರಸ್ಥ ಧರ್ಮವನ್ನು ಹಿಡಿದಿದ್ದರು. ಒಪ್ಪತ್ತು ಊಟ : ಅದೂ ಸ್ವಯಂಪಾಕ. ಸ್ನಾನ ಸಂಧ್ಯಾವಂದನೆ ಪೂಜಾದಿ ಗಳಲ್ಲಿ ಅತಿಶಯವಾದ ಶ್ರದ್ಧೆ. ಏಕಾದಶಿ ಮೊದಲಾದ ಹರಿದಿನಗಳಲ್ಲಿ ಸಂಪೂರ್ಣ ಉಪವಾಸ.

ಅವರು ತೊಂಭತ್ತರ ಸುಮಾರಿನಲ್ಲಿದ್ದಾಗ ಒಂದು ದಿನ ಕೇಳಿದೆ–"ವಾಚನ ವಾದ ಮೇಲೆ ಸ್ವಲ್ಪ ಆಹಾರ ತೆಗೆದುಕೊಳ್ಳಬಹುದಲ್ಲ ?"—ಎಂದು. ಅವರು ಹೇಳಿದರು :

"ದಿನಕ್ಕೆ ಒಂದು ಸಾರಿ ಊಟ. ಬೆಳಗ್ಗೆ ಹತ್ತು ಹನ್ನೊಂದು ಘಂಟೆಗೆ ಒಂದಿಷ್ಟು ಅನ್ನ ಸಾರು ಮಾಡಿಕೊಳ್ಳುತ್ತೇನೆ. ಕೊಂಚ ಪಲ್ಯವೋ ಉಪ್ಪಿನ ಕಾಯಿಯೋ ಇದ್ದರೆ ಆಗಬಹುದು. ಸ್ವಲ್ಪ ಮಜ್ಜಿಗೆ, ಆಮೇಲೆ ಆಯಾಸ ವಾಗಿದ್ದರೆ ಒಂದು ಬಟ್ಟಲು ನೀರು. ಇಷ್ಟೇ ನನ್ನ ಪದ್ಧತಿ. ಸಂಜೆ ಎಲ್ಲಿ ಯಾದರೂ ಭಾರತವಾಚನವಾಗಿದ್ದರೆ ಅಲ್ಲಿ ಅವರು ಒಂದು ಲೋಟ ಹಾಲು ಕೊಟ್ಟರೆ ತೆಗೆದುಕೊಳ್ಳುವುದುಂಟು. ಅಷ್ಟು ಹೊರತು ಯಾವ ಆಹಾರವೂ ನನಗೆ ಬೇಕಾಗುವುದಿಲ್ಲ."

ನಾನು ಆಗ ಅಂದುಕೊಂಡೆ—ಇವರು ಈಹೊತ್ತೂ ದೃಢಕಾಯರಾಗಿರು ವುದಕ್ಕೆ ಈ ಲಘ್ವಾಶಿತೆಯೇ, ನಿಯಮನಿಷ್ಠೆಯೇ ಮುಖ್ಯ ಕಾರಣ ಎಂದು.

## ರಾಜೀನಾಮೆ

ಬಿಂದೂರಾಯರು ಸರಕಾರಿ ನೌಕರಿಯಿಂದ ಕಂಪನಿ ನೌಕರಿಗೆ ವರ್ಗಪಡಿಸಿ ಕೊಂಡ ಕಾಲದಲ್ಲಿ ನನಗೆ ಅವರ ಪರಿಚಯವಾಗಿತ್ತು. ಅವರು ಹಾಗೆ ನೌಕರಿ ಯನ್ನು ಬದಲಾಯಿಸಬೇಕೆಂದು ಪ್ರೋತ್ಸಾಹ ಕೊಟ್ಟವರಲ್ಲಿ ನಾನೂ ಒಬ್ಬ.

ಸೀತಾರಾಮಾಚಾರ್ಯರಿಗೂ ನನಗೂ ಆಗ್ಗೆ ತುಂಬ ಸ್ನೇಹ ಬೆಳೆದಿತ್ತು. ಬಿಂದೂರಾಯರು ಆ ಕಂಪನಿಗೆ ಒಳ್ಳೆಯ ಸಹಾಯಕರಾದಾರೆಂದೂ ಅಲ್ಲಿ ದೊರೆಯುವ ಮಾನ ಮರ್ಯಾದೆಗಳಿಂದ ಅವರು ಸಂತುಷ್ಟರಾದಾರೆಂದೂ ನಾನು ನಿರೀಕ್ಷಿಸಿಕೊಂಡಿದ್ದೆ. ಒಂದೆರಡು ವರ್ಷ ಕಾಲ ಆ ಏರ್ಪಾಟು ತೃಪ್ತಿಕರವಾಗಿಯೇ ನಡೆಯಿತು.

ಆಮೇಲೆ ಬಿಂದೂರಾಯರ ಮಾತಿನಲ್ಲಿ ಆಗಾಗ ಅಸಂತೃಪ್ತಿಯ ಧ್ವನಿ ಹೊರಡುತ್ತಿತ್ತು. ಒಂದು ಕಂಪನಿಯ ಕಾರ್ಯಾಲಯವೆಂದರೆ ಅಲ್ಲಿ ಯಜಮಾನರು ಅನೇಕರಾಗುವುದು ಸ್ವಾಭಾವಿಕ. ಕೆಲಸ ಮಾಡುವಾತ ಇವರ ಮಾತನ್ನೂ ಕೇಳಬೇಕು; ಅವರ ಮಾತನ್ನೂ ಕೇಳಬೇಕು. ಇದು ಬಿಂದೂರಾಯರಂಥವರಿಗೆ ಸುಲಭವಲ್ಲ. ಯಥಾರ್ಥವನ್ನು ಬಚ್ಚಿಡುವುದೂ ದಾಖಲೆಗಳನ್ನು ಬಿಟ್ಟು ಯಾರೋ ಹೇಳಿದಂತೆ ಲೆಕ್ಕ ಪತ್ರಗಳನ್ನು ಬರೆದಿಡುವುದೂ ಅವರ ಮನಸ್ಸಿಗೆ ಒಗ್ಗದ ಕೆಲಸ.

ಹೀಗಾಗಿ ಸುಮಾರು ಒಂದು–ಒಂದೂವರೆ ವರ್ಷ ಗೊಣಗಾಡುತ್ತಿದ್ದು ಯಾವುದೋ ಒಂದು ಕಟು ಸಂದರ್ಭ ಬಂದಾಗ ಬಿಂದೂರಾಯರು ಆ ಚಾಕರಿಗೆ ರಾಜೀನಾಮೆ ಕೊಟ್ಟರು.

ಮುಂದೆ ಜೀವನಕ್ಕೇನು ಉಪಾಯ? ಎಂದು ಸ್ನೇಹಿತರು ಕೇಳಿದಾಗ ದ್ರೌಪದಿ ಶ್ರೀಕೃಷ್ಣನನ್ನು ಕುರಿತು ಹೇಳಿದ ಪದ್ಯವನ್ನು ಹೇಳಿ "ಹರಿಯೇ ನಮಗೆ ಉಪಾಯ" ಎಂದರು.

ಅನಂತರ ಐದಾರು ವರ್ಷ ಕಳೆದ ಬಳಿಕ ಅವರ ಕೈಯಿಂದ ತಮ್ಮ ಹಳೆಯ ಚಾಕರಿಗೆ ಸಲ್ಲಬೇಕಾಗಿದ್ದ ಪಿಂಛನಿಗಾಗಿ ಸರಕಾರಕ್ಕೆ ಬೇಡಿಕೆ ಪತ್ರವನ್ನು ಬರೆಯಿಸಲು ಬಹು ಒತ್ತಾಯ ಮಾಡಬೇಕಾಯಿತು. ಮನಸ್ಸಿಲ್ಲದವರಾಗಿ ಅವರು ಪತ್ರ ಬರೆದರು. ಸರಕಾರ ಕೊಂಚ ಪಿಂಛನಿ ಮಂಜೂರು ಮಾಡಿತು. ಅದು ಬಹು ಕೊಂಚದ್ದು: ಉಪ್ಪಿಗಾದರೆ ಹುಣಿಸೇಹಣ್ಣಿಗಾಗದು, ಹುಣಿಸೇಹಣ್ಣಿಗಾದರೆ ಉಪ್ಪಿಗಾಗದು. ಬಿಂದೂರಾಯರು ತಮ್ಮ ಹಣಕಾಸಿನ ಸ್ಥಿತಿಯನ್ನು ಯಾರಿಗೂ ಎಂದೂ ತಿಳಿಯಪಡಿಸಿದವರಲ್ಲ. ಅವರು ಯಾರಲ್ಲಿಯೂ ಒಂದು ದಿನವೂ, ಒಂದು ಕ್ಷಣವೂ ತಮ್ಮ ಹಣಕಾಸಿನ ಸಂದರ್ಭವನ್ನು ಸೂಚಿಸಿದವರು ಕೂಡ ಅಲ್ಲ. ಅವರು ಸಂತೋಷವಾಗಿದ್ದದ್ದನ್ನೂ ಅವರ ನಗುವನ್ನೂ ಅವರ ಸರಸತೆಯನ್ನೂ ನೋಡಿದವರಿಗೆ ಅವರಿಗೆ ಯಾವ ಕೊರತೆಯೂ ಇರಲಿಲ್ಲವೆನಿಸುತ್ತಿತ್ತು. ಅವರಿಗೆ ಕೊರತೆಯಿದ್ದದ್ದು ನಿಜ.

ಆದರೆ ಅದನ್ನು ಅವರು ಅನುಭವಿಸಿದಂತೆ ಎಂದೂ ತೋರಲಿಲ್ಲ.

ಎಷ್ಟೋ ವರ್ಷಗಳ ಹಿಂದೆ ಅವರಿಗೆ ಪತ್ನೀವಿಯೋಗವಾಗಿತ್ತು. ಅವರ ಹೆಣ್ಣುಮಕ್ಕಳು ಬೇರೆ ಕಡೆ ಗಂಡಂದಿರೊಡನೆ ವಿಹಿತರೀತಿಯಲ್ಲಿದ್ದರು. ಬಿಂದೂರಾಯರಿಗೆ ಗಂಡುಸಂತಾನವಿರಲಿಲ್ಲ. ಅವರ ತಮ್ಮಂದಿರು ತೀರಿ ಕೊಂಡಿದ್ದದ್ದರಿಂದ ಆ ದೊಡ್ಡ ಕುಟುಂಬವನ್ನು ಇವರೇ ನಿರ್ವಹಿಸುತ್ತಿದ್ದರು. ಅವರು ಎಷ್ಟು ತೀವ್ರವಾದ ಕಷ್ಟನಿಷ್ಠುರಗಳನ್ನು ಎಷ್ಟು ದೀರ್ಘಕಾಲ ಸಹಿಸಿರಬಹುದೆಂಬುದರ ಕಲ್ಪನೆ ಈಗ, ಅವರು ಇಹವನ್ನು ಬಿಟ್ಟು ತೆರಳಿದ ಮೇಲೆ ನನ್ನ ಮನಸ್ಸಿಗಾಗುತ್ತಿದೆ.

## ಶ್ರೀರಾಮಕೃಷ್ಣರ ಒಂದು ಕಥೆ

ಬಿಂದೂರಾಯರನ್ನು ನೆನೆದಾಗಲೆಲ್ಲ ಭಗವಾನ್ ರಾಮಕೃಷ್ಣ ಪರಮ ಹಂಸರು ಹೇಳುತ್ತಿದ್ದ ಕಥೆಯೊಂದು ನನಗೆ ಜ್ಞಾಪಕಕ್ಕೆ ಬರುತ್ತದೆ.

ಒಬ್ಬ ವಿದ್ವಾಂಸನು ಒಬ್ಬಾನೊಬ್ಬ ರಾಜನಲ್ಲಿಗೆ ಯಾಚಕನಾಗಿ ಹೋದ. ರಾಜ ಆತನನ್ನು ಕೇಳಿದ:

ರಾಜ: "ನೀವು ಯಾವ ಶಾಸ್ತ್ರದಲ್ಲಿ ಪಂಡಿತರು?"

ಯಾಚಕ: "ನಾನು 'ಶ್ರೀಮದ್ಭಾಗವತ ಪುರಾಣ' ಹೇಳತಕ್ಕವನು."

ರಾಜ: "ಹಾಗೆಯೆ? ಬಹು ಸಂತೋಷ. 'ಭಾಗವತ ಪುರಾಣ' ಕೇಳಲು ನನಗೆ ತುಂಬ ಕುತೂಹಲವುಂಟು. ಆದರೆ ನನಗೆ ಈಹೊತ್ತು ಬಿಡುವಿಲ್ಲ. ಮುಂದಿನ ಶನಿವಾರ ತಾವು ಬಂದರೆ ಕುಳಿತು ಕೇಳಿಯೇನು."

ಬ್ರಾಹ್ಮಣನಿಗೂ ಸಂತೋಷವಾಯಿತು. ಗೊತ್ತಾಗಿದ್ದ ಶನಿವಾರ ಅರಮನೆಗೆ ಹೋದ. ಆಗ ಅಲ್ಲಿದ್ದ ಚಾರರು "ಸ್ವಾಮಿ, ಇಂದು ದೊರೆಗಳು ಏನೋ ದೇಹಾಲಸ್ಯದಿಂದ ತಮ್ಮನ್ನು ನೋಡಲು ಆಗಲಾರದು. ಮುಂದಿನ ಶನಿವಾರ ದಯಮಾಡಿಸೋಣವಾಗಲಿ" ಎಂದರು.

ಇನ್ನೊಂದು ಶನಿವಾರವೂ ಮತ್ತೊಂದು ಶನಿವಾರವೂ ಹೀಗೆಯೇ ಕಳೆ ಯಿತು. ಯಾವುದೋ ಕಾರಣದಿಂದ ರಾಜನು ಯಾಚಕನನ್ನು ಕಾಣಲಾಗ ಲಿಲ್ಲ. ಆರನೆಯ ಶನಿವಾರ ರಾಜನು ಬಿಡುವು ಮಾಡಿಕೊಂಡು ಪುರಾಣ ಕೇಳಲು ಸಿದ್ಧನಾಗಿ ಕುಳಿತಿದ್ದ. ಅಂದು ಪೌರಾಣಿಕ ಬರಲಿಲ್ಲ. ರಾಜನಿಗೆ ಅದು ಸೋಜಿಗವೆನಿಸಿತು. ಕಾರಣವೇನೆಂದು ವಿಚಾರಿಸುವುದಕ್ಕಾಗಿ ಸೇವಕ ರನ್ನು ಕಳುಹಿಸಿದ. ಆ ಬ್ರಾಹ್ಮಣ ಬರುವ ಮರ್ಜಿಯಲ್ಲಿಲ್ಲವೆಂದು ಅವರು

ಪ್ರತ್ಯುತ್ತರ ತಂದರು. ಆಗ ರಾಜ ತಾನೇ ಆ ಬ್ರಾಹ್ಮಣನನ್ನು ಕಂಡು ವಿಚಾರಿಸಬೇಕೆಂದು ಆತನಿದ್ದ ಕಡೆಗೆ ಹೋಗಿ ನೋಡಿದ. ಆ ಬ್ರಾಹ್ಮಣ ಗ್ರಂಥದಲ್ಲಿ ಮಗ್ನನಾಗಿ ಕುಳಿತಿದ್ದ. ರಾಜ ಕೇಳಿದ:

ರಾಜ: "ಪಂಡಿತರೆ, ಇಂದು ನಾನು ತಮ್ಮ ಪುರಾಣ ಕೇಳುವ ಕುತೂಹಲದಿಂದ ಬಂದಿದ್ದೇನೆ. ತಾವು ನನ್ನ ಮನೆಗೆ ದಯಮಾಡಬೇಕು."

ಬ್ರಾಹ್ಮಣ: ಮಹಾಸ್ವಾಮಿ, ನನಗೆ ಈಗ ಯಾಚನೆಯ ಹಂಬಲ ಬಿಟ್ಟು ಹೋಗಿದೆ."

ರಾಜ: "ಅದೇಕೆ?"

ಬ್ರಾಹ್ಮಣ: "ತಾವು ಮೊದಲ ದಿವಸ ಹೇಳಿದಿರಿ, ತಮಗೆ 'ಭಾಗವತ'ದಲ್ಲಿ ಕುತೂಹಲವೆಂದು. ಅದಕ್ಕಾಗಿ ನಾನು ಆ ಗ್ರಂಥವನ್ನು ವಿಶೇಷವಾದ ಆಸಕ್ತಿಯಿಂದ ನಾಲ್ಕಾರು ಸಾರಿ ಓದಿದೆ. ನೀವು ಏನು ಪ್ರಶ್ನೆ ಕೇಳಬಹುದೋ! ಅದಕ್ಕೆ ಸಮಂಜಸವಾದ ಉತ್ತರವನ್ನು ನಾನು ಸಿದ್ಧಪಡಿಸಿಟ್ಟುಕೊಂಡಿರಬೇಕೆಂದು ಗ್ರಂಥವನ್ನು ಪುನಃಪುನಃ ಸಾವಧಾನವಾಗಿ ಓದಿದೆ. ಓದುತ್ತ ಓದುತ್ತ ಹೊಸ ಹೊಸ ಸ್ವಾರಸ್ಯಗಳನ್ನು ಗ್ರಂಥದಲ್ಲಿ ಕಂಡೆ. ಈಗ ನನಗೆ ಈ 'ಭಾಗವತ' ರಸಾಯನಕ್ಕಿಂತ ದೊಡ್ಡ ಭಾಗ್ಯ ಯಾವುದೂ ಇಲ್ಲವೆಂದು ದೃಢಪಟ್ಟಿದೆ. ಆದದ್ದರಿಂದ ಯಾವ ಅಪೇಕ್ಷೆಯೂ ಈಗ ಇಲ್ಲ. ತಾವು ಸಾವಕಾಶ ಮಾಡಿದ್ದರಿಂದ ನನಗೆ ಮಹೋಪಕಾರವಾಯಿತು. ನಾನು ಧನ್ಯನಾದೆ."

* * *

ಹೀಗಾಯಿತು ಬಿಂದೂರಾಯರಿಗೆ.

## ನಮ್ಮ ಜನರ ಔದಾರ್ಯ

ನಮ್ಮ ಮಹಾಜನರ ಔದಾರ್ಯವನ್ನು ಕುರಿತು ಒಂದು ಸಂಕೋಚದ ಮಾತನ್ನಾಡಬೇಕಾಗಿದೆ. ನೂರಾರು ಊರುಗಳವರು ಬಿಂದೂರಾಯರನ್ನು ಮೆಚ್ಚಿಕೊಂಡು ಆದರಿಸಿದರು. ಹುಬ್ಬಳ್ಳಿ, ಧಾರವಾಡ, ಗದಗು, ಬೆಳಗಾವಿ, ಬೆಂಗಳೂರು, ಮೈಸೂರು, ಬೊಂಬಾಯಿ—ಹೀಗೆ ಎಷ್ಟೋ ದೊಡ್ಡ ದೊಡ್ಡ ಪಟ್ಟಣಗಳವರು ಭಾರತವಾಚನಕ್ಕಾಗಿ ಅವರನ್ನು ಕರೆಸಿಕೊಂಡರು. ಅವರು ಸಂತೋಷದಿಂದ ಹಾಗೆ ಹೋಗಿ ನಾಲ್ಕಾರು ವಾರ ಭಾರತವಾಚನ ಮಾಡಿಬಂದರು. ಅವರಿಗೆ ಕೊಟ್ಟ ಪುರಸ್ಕಾರ ಎಂಥದಿರಬಹುದು? ಕೆಲವು ಕಡೆ ಪ್ರಯಾಣದ ವೆಚ್ಚ ಕೊಟ್ಟಿರಬಹುದು. ಸ್ವಯಂಪಾಕದ ಸಾಮಾನು

ಕೊಟ್ಟಿರಬಹುದು. ಅಲ್ಲಲ್ಲಿ ಒಂದು ಲೋಟ ಹಾಲು ಕೊಟ್ಟಿರಬಹುದು. ಅವರ ಕಿವಿಗಳೆರಡು ತುಂಬಿ ಮೇಲ್ಪೊಳೆ ಹರಿಯುವಂತೆ ಹೊಗಳಿರ ಬಹುದು. ಹೊಗಳಿಕೆಯು ಅನ್ನಕ್ಕೆ ಪ್ರತಿನಿಧಿಯಲ್ಲವೆಂಬುದನ್ನು ನಮ್ಮ ಜನ ಮರೆತಿದ್ದಾರೆ. ಸಂಗೀತಗಾರರಿಗೂ, ನರ್ತಕರಿಗೂ ನಗದು ಸಂಭಾವನೆ ಸಲ್ಲಿಸುವಂತೆ ಗಮಕಿಗೆ ಏಕೆ ಸಲ್ಲಿಸಕೂಡದು ?

ಇದರಲ್ಲಿ ಬಿಂದೂರಾಯರ ಲೋಪವೂ ಇದೆ. ಅವರು ಶುದ್ಧ ಲೌಕಿಕ ರಾಗಿ ಹುಟ್ಟಿದವರು. ಸರಕಾರಿ ಚಾಕರಿಯಲ್ಲಿ ಬೆಳೆದವರು. ಆದದ್ದರಿಂದ ಮಂಗಳಾರತಿ ತಟ್ಟೆಯನ್ನು ಪ್ರದಕ್ಷಿಣೆ ಮಾಡಿಸುವ ಕಲೆ ಅವರಿಗೆ ಬರಲಿಲ್ಲ. ಹೀಗಾಗಿ ಅವರ ಧನಸಂಪಾದನೆ ಕಡೆಕಡೆಯ ಕಾಲದಲ್ಲಿ ಶೂನ್ಯವೇ ಆಗಿತ್ತು ಎಂದು ಹೇಳಬೇಕು. ಆದರೆ ಇದು ಯಾವ ಹೊರ ಮನುಷ್ಯ ನಿಗೂ ತಿಳಿದುಬಂದದ್ದಲ್ಲ.

ವಿನಾ ದೈನ್ಯೇನ ಜೀವನಮ್

ಎಂಬ ವ್ರತದಿಂದ ಅವರು ತಪ್ಪಲಿಲ್ಲ.

ಕರ್ನಾಟಕ ಏಕೀಕರಣವಾದ ಮೇಲೂ ಸರಕಾರಕ್ಕೆ ಅವರ ವಿಷಯ ಹೆಚ್ಚಾಗಿ ತಿಳಿದುಬಂದಂತಿಲ್ಲ. ಕಡೆಕಡೆಯಲ್ಲಿ ಅವರಿಗೆ ರಾಜ್ಯೋತ್ಸವ ಪ್ರಶಸ್ತಿಯೆಂದು ಏನೋ ಬಹುಮಾನ ದೊರೆಯಿತಂತೆ. ಈ ಬಹುಮಾನ ವನ್ನು ಪಡೆಯುವುದಕ್ಕಾಗಿ ಅವರು ಬೆಂಗಳೂರಿಗೆ ಬಂದಿದ್ದರಂತೆ. ಪ್ರಯಾಣದ ವೆಚ್ಚವನ್ನು ಸರಕಾರ ಕೊಟ್ಟಿತೆಂದು ನಾನು ನಂಬಿಕೊಂಡಿ ದ್ದೇನೆ. ಇನ್ನೇನನ್ನು ಕೊಟ್ಟಿತೋ ನನಗೆ ತಿಳಿದಿಲ್ಲ. ನಗದು ಏನನ್ನೂ ಕೊಟ್ಟಂತೆ ನನಗೆ ವರ್ತಮಾನ ಬಂದಿಲ್ಲ.

## ಸರಕಾರದ ಕಲಾಪ್ರೋತ್ಸಾಹ

ಇನ್ನೊಂದು ವಾಸ್ತವಿಕ ಸಂಗತಿಯನ್ನು ಮಹಾಜನರ ತಿಳಿವಳಿಕೆಗೆ ತರ ಬೇಕೆಂದು ನನಗನ್ನಿಸುತ್ತದೆ. ಇಂಡಿಯಾ ದೇಶಕ್ಕೆ ಸ್ವಾತಂತ್ರ್ಯ ಬಂದಮೇಲೆ ರಚನೆಯಾದ ಸರಕಾರದ ಒಬ್ಬ ಮಂತ್ರಿಗಳು ಬೆಂಗಳೂರಿಗೆ ದಯಮಾಡಿಸಿ ದ್ದರು. ಈ ಬಡವನ ಮನೆಗೂ ಭೇಟಿ ಕೊಟ್ಟರು. ಆಗ ನಾನು ಅವರಲ್ಲಿ ಬೇಡಿದೆ, ಹೀಗೆ :

"ಸ್ವಾಮಿ, ದೇಶ ಸ್ವತಂತ್ರವಾಯಿತು. ಕರ್ಣಾಟಕ ಏಕೀಕೃತವಾಗು

ವಂತಿದೆ. ಈಗ ಕರ್ಣಾಟಕ ಸಂಸ್ಕೃತಿಯ ಪುರೋಭಿವೃದ್ಧಿಗೆ ಅವಶ್ಯವಾಗಿ ನಡೆಯಬೇಕಾದ ಒಂದು ಕಾರ್ಯವನ್ನು ತಮ್ಮಲ್ಲಿ ಬಿನ್ನಯಿಸಬೇಕೆಂದಿದ್ದೇನೆ. ಲಾಲಿಸಬೇಕು. ಕರ್ಣಾಟಕ ಸಂಸ್ಕೃತಿಗೆ ಲಕ್ಷಣಪ್ರಾಯರಾಗಿರುವ ಇಬ್ಬರು ಮಹನೀಯರು ಈಗ ಮುದುಕರಾಗಿದ್ದಾರೆ. ವಿದ್ವಾನ್ ಕೆ. ವಾಸುದೇವಾಚಾರ್ಯರಿಗೆ ವರ್ಷ ತೊಂಭತ್ತಾಯಿತು. ಎಸ್. ಜಿ. ಬಿಂದೂರಾಯರಿಗೆ ವರ್ಷ ಎಂಭತ್ತಾಯಿತು. ಇಬ್ಬರಿಗೂ ಧ್ವನಿ ಕುಗ್ಗಿದೆ.

"ಸಂಗೀತವಾಗಲಿ, ಕಾವ್ಯವಾಚನವಾಗಲಿ ಸೊಗಯಿಸುವುದು ಕಂಠ ಸಂಪತ್ತಿನಿಂದ. ಈಗ ಇಷ್ಟು ಕುಗ್ಗಿದ್ದರೂ ಈ ಇಬ್ಬರು ಕರ್ನಾಟಕ ವಿದ್ವಾಂಸರ ಗಾನರೀತಿಯೂ ವಾಚನರೀತಿಯೂ ಇನ್ನೂ ಕಾಂತಿಗುಂದದೆ ಇವೆ. ಅವು ಇನ್ನು ಬಹುಕಾಲ ಹಾಗೆ ಉಳಿಯಲಾರವು. ಆದದ್ದರಿಂದ ವಾಸುದೇವಾಚಾರ್ಯರ ಗಾನವಿಧಾನವನ್ನೂ ಶೈಲಿಯನ್ನೂ ಕೊಂಚಮಟ್ಟಿಗಾದರೂ ನಾವು ದಾಖಲೆ ಮಾಡಿಟ್ಟರೆ ಉತ್ತರೋತ್ತರ ಬರುವ ಗಾನಾಭ್ಯಾಸಿಗಳಿಗೆ ಅದು ಕೊಂಚ ಮಾತ್ರವಾದರೂ ಮೇಲ್ಪಂಕ್ತಿಯಾಗಿದ್ದೀತು. ಹಾಗೆಯೇ ಬಿಂದೂರಾಯರ ಕಾವ್ಯವಾಚನ ಅವರು ಹಾಡಿದ ಕೆಲವು ಪದ್ಯಗಳನ್ನಾದರೂ ನಾವು ಸ್ಥಾಯಿಯಾಗಿ ದಾಖಲೆ ಮಾಡಿಟ್ಟರೆ ಅದು ಮುಂದೆ ಬರುವ ಕಾವ್ಯವಾಚಕರಿಗೆ ಮೇಲ್ಪಂಕ್ತಿಯಾಗಿದ್ದೀತು. ಹೀಗೆ ದಾಖಲೆ ಮಾಡಿಡುವುದಕ್ಕಾಗಿ ಸರಕಾರದವರು ಆ ವಿದ್ವಾಂಸರ ಬಳಿ ಒಂದು ಟೇಪ್‌ರೆಕಾರ್ಡರ್ ಯಂತ್ರವನ್ನೂ ಮತ್ತೊಬ್ಬರ ಬಳಿ ಇನ್ನೊಂದು ಯಂತ್ರವನ್ನೂ ಇರಿಸುವುದಾದರೆ ಆ ವಿದ್ವಾಂಸರು ದಾಖಲೆ ಯಂತ್ರದ ಪಾತ್ರದೊಳಕ್ಕೆ ಹಾಡಲು ಅನುಕೂಲಿಸುತ್ತದೆ.

"ಸಂಗೀತಗಾರರಿಗೇ ಆಗಲಿ ಕಾವ್ಯವಾಚಕರಿಗೇ ಆಗಲಿ ಒಳ್ಳೆಯ ಧಾಟಿ ಯಾವಾಗ ಬೇಕೆಂದರೆ ಆಗ ಬರುವುದಿಲ್ಲ. ಅವರ ಕಂಠ ನೆನಸಿಕೊಂಡಾಗ ಸಿದ್ಧವಾಗುವುದಿಲ್ಲ. ಆದದ್ದರಿಂದ ಅಂಥವರ ಬಳಿ ಯಂತ್ರ ಸಿದ್ಧವಾಗಿದ್ದರೆ ಅವರಿಗೆ ಯಾವಾಗ ಮನಸ್ಸು ಬರುತ್ತದೋ, ಯಾವಾಗ ರಾಗದ ಕಾವು ಏರುತ್ತಿದೆಯೋ ಯಾವಾಗ ಕಂಠ ಶುದ್ಧವಾಗಿರುತ್ತದೆಯೋ ಆಗ ಅವರು ಹಾಡಿ ದಾಖಲೆ ಮಾಡಿಸುವುದು ಸಾಧ್ಯವಾಗುತ್ತದೆ.

"ಎಷ್ಟೋ ಸಾರಿ ಗಾಯಕನು ಏಕಾಂತದಲ್ಲಿ ಕುಳಿತಾಗ ಅವನಿಗೆ ಭಾವಾವೇಶ ಬರುತ್ತದೆ. ರಾತ್ರಿ ಹತ್ತು ಘಂಟೆಯಲ್ಲಿ, ಬೆಳಗಿನ ಝಾವ ಮೂರು ಘಂಟೆಗೆ ಅವನಿಗೆ ತಿಳಿಯದಂತೆ ರಾಗಾವೇಶ ಬರುತ್ತದೆ. ಮಹಾ

ಮಹಾ ವಿದ್ವಾಂಸರಿಗೆ ಹೀಗಾಗುವುದನ್ನು ನಾನು ಬಲ್ಲೆ. ರಾಜಕೀಯದಲ್ಲಿರುವ ನಮ್ಮಂಥವರಿಗೆ ಭಾಷಣಗಳು ಇಷ್ಟಪಟ್ಟಾಗ ಬರುತ್ತವೆ—ಎಷ್ಟು ಬೇಕೆಂದರೆ ಅಷ್ಟು ಬರುತ್ತವೆ. ಕಲೆಯ ವಿಚಾರ ಹಾಗಲ್ಲ. ಕಲಾವಮಾತೃಕೆ ತಾನಾಗಿ ಒಲಿದು ಬರಬೇಕು. ಬಂದಾಗ ಅದನ್ನು ಜಾಗ್ರತೆ ಕಂಡುಕೊಳ್ಳುವವನು ಭಾಗ್ಯಶಾಲಿ.

"ನಾನು ಕೇಳಿರುವುದರಲ್ಲಿ ಟೇಪ್‌ರೆಕಾರ್ಡರ್ ಯಂತ್ರ ಸುಮಾರು ಎರಡೂವರೆ–ಮೂರು ಸಾವಿರ ರೂಪಾಯಿಗಳಿಗೆ ಸಿಕ್ಕುತ್ತದಂತೆ. ಎರಡು ಯಂತ್ರಗಳಿಗೆ ಒಟ್ಟು ಆರು ಸಾವಿರ ಖರ್ಚಾಗಬಹುದು. ಮೇಲು ಖರ್ಚು ನಾಲ್ಕು ಸಾವಿರವೆಂದಿಟ್ಟುಕೊಂಡರೂ ಸರಕಾರ ಹತ್ತು ಸಾವಿರ ರೂಪಾಯಿ ಮಂಜೂರು ಮಾಡುವುದಾದರೆ ವಾಸುದೇವಾಚಾರ್ಯರ ಗಾನಸೌಂದರ್ಯವನ್ನೂ ಬಿಂದೂರಾಯರ ಕಾವ್ಯವಾಚನದ ಸೌಂದರ್ಯವನ್ನೂ ಚಿರಕಾಲ ನಮ್ಮ ಜನಕ್ಕೆ ಉಳಿಸಿದಂತಾಗುತ್ತದೆ."

ಮಂತ್ರಿವರ್ಯರು ಈ ಬಿನ್ನಹವನ್ನು ಲಾಲಿಸಿ ಆಲೋಚಿಸುವುದಾಗಿ ಭರವಸೆ ಹೇಳಿದರು.

ಕೆಲವು ದಿನಗಳಾದ ಮೇಲೆ ದೆಹಲಿಯಿಂದ ನನಗೆ ಪತ್ರ ಬರೆದು ನನ್ನ ಸಲಹೆಯನ್ನು ತಾವು ಮೈಸೂರು ರಾಜ್ಯದ ಮುಖ್ಯಮಂತ್ರಿಗಳಿಗೆ ತಿಳಿಸಿರುವಂತೆಯೂ ಮುಂದಿನ ವಿಚಾರವನ್ನು ಮೈಸೂರಿನ ಮುಖ್ಯಮಂತ್ರಿಗಳು ನಡೆಸಬಹುದೆಂದೂ ಅಪ್ಪಣೆ ಕೊಡಿಸಿದರು.

ನನ್ನ ಬಿನ್ನಹ ಫಲಗಾಣಲಿಲ್ಲ. ಸರಕಾರವೆಂಬುದು ಮಹಾವ್ಯಾಪಾರ. ಮಂತ್ರಿಗಳಿಗೆ ಎಷ್ಟೋ ಕಷ್ಟಗಳಿರಬಹುದು. ಸಿಕ್ಕುಗಳಿರಬಹುದು, ತೊಡಕುಗಳಿರಬಹುದು. ನಾನು ಸರಕಾರವನ್ನು ಕಾಣದವನಾದದ್ದರಿಂದ ಅದಕ್ಕಿರುವ ಕಷ್ಟಗಳನ್ನು ತಿಳಿಯದೆ ನಾನು ಆಕ್ಷೇಪಣೆ ಮಾಡಬಾರದು.

ಬಿಂದೂರಾಯರಂಥ ಅಪೂರ್ವ ಕಲಾಪ್ರವೀಣರು ತಮ್ಮ ಕಲಾಪ್ರತಿಭೆಯ ಗುರುತನ್ನು ಲವಲೇಶವಾಗಿಯಾದರೂ ಹಿಂದೆಬಿಡದೆ ಕಣ್ಣುಮುಚ್ಚಿಕೊಳ್ಳಬೇಕಾಯಿತಲ್ಲಾ ಎಂಬುದು ನನ್ನ ಕೊರತೆ. ಈಗ ಸರಕಾರ ಹಣ ಕೊಡಬಹುದು. ಮಹಾಜನ ಚಂದಾ ಎತ್ತಬಹುದು. ಬಿಂದೂರಾಯರನ್ನು ಹಿಂದಕ್ಕೆ ತರಲಾದೀತೊ? ಅಂಥ ಓಜಸ್ಸಂಪನ್ನವಾದ ಶಾರೀರವನ್ನೂ ಗಮಕಧಾಟಿಯನ್ನೂ ಹಿಂದಕ್ಕೆ ತರಲಾದೀತೊ? ವಿಚಾರ ಮಾಡೋಣವಾಗಲಿ.

೪

# ರಸಿಕರೆಂಥವರು ?

ಇಷ್ಟು ಜನ ಸಂಗೀತ ವಿದ್ವಾಂಸರನ್ನೂ ರಸಿಕರನ್ನೂ ಸ್ಮರಿಸಿದ್ದಾದ ಮೇಲೆ ಇದರ ಉದ್ದೇಶವೇನೆಂಬುದನ್ನು ಸ್ಪಷ್ಟಪಡಿಸುವುದು ಯುಕ್ತ. ಸದ್ಯದ ಪ್ರಪಂಚದಲ್ಲಿ ರಸಿಕತೆ ಕಡಮೆಯಾಗುತ್ತಿದೆಯೆಂಬ ಕೊರಗೇ ಆ ಉದ್ದೇಶ. ಎಲ್ಲೆಲ್ಲಿಯೂ ಎಲ್ಲ ಜೀವನಕ್ಷೇತ್ರಗಳಲ್ಲಿಯೂ ವ್ಯಾಪಾರಪ್ರವೃತ್ತಿಯೂ ಅದರ ಲಕ್ಷಣವಾದ ಆಪಣದ್ರವ್ಯದ ಪ್ರಶಸ್ತಿಯೂ ಹೆಚ್ಚುತ್ತಿವೆ. ಸಂಗೀತ ಕೇಳಿದರೆ ಏನು ಬರುತ್ತದೆ ?—ಎಂದು ಕೇಳುವ ಜನ ಹೆಚ್ಚುತ್ತಿದ್ದಾರೆ. ಮಹಡಿಮನೆಗೆ ಬೆಲೆಯುಂಟು. ರೇಷ್ಮೆ ವಸ್ತ್ರಗಳಿಗೆ ಬೆಲೆಯುಂಟು. ಮೋಟಾರ್ ಕಾರುಗಳಿಗೆ ಬೆಲೆಯುಂಟು. ಚಿನ್ನ ರನ್ನಗಳಿಗಂತೂ ಮೊದಲಿನಿಂದ ಉಂಟೇ ಉಂಟು. ಹೆಂಡ ತಿಂಡಿಗಳಿಗೂ ಬೆಲೆಯುಂಟು—ಧನಿಕ ವರ್ಗದಲ್ಲಿ. ಕಾವ್ಯ ಸಂಗೀತ ಗಳು ಮಾತ್ರ ಬೆಲೆಸಲ್ಲದ ವಸ್ತುಗಳು. ಮನೆಯಲ್ಲಿ ಮದುವೆಯಾದರೆ ಕೆಲವು ಸದ್ದುಗಳಾಗುವುದು ಪದ್ಧತಿ. ಆ ಸದ್ದುಗಳ ಕೋಠಿಗೆ ಸೇರಿದವು ಕಾವ್ಯವಾಚನ, ಸಂಗೀತ ಇತ್ಯಾದಿ. ನಮ್ಮ ಸಮಾಜಜೀವನದಲ್ಲಿ ಬೆಲೆ ಕಳೆದುಕೊಂಡಿರುವ ವಸ್ತುಗಳು ಮೂರು :

(೧) ಮಂತ್ರ
(೨) ಕಾವ್ಯ
(೩) ಗಾನ

ಇವು ಅಗ್ಗವಾಗಿ—ಖರ್ಚು ಎಷ್ಟು ಕಡಮೆಯಾದರೆ ಅಷ್ಟು ನಡೆಯಲಿ ಎಂಬುದು ನಮ್ಮ ಇಂದಿನ ಪ್ರತಿಷ್ಠಾವಂತರ ಮನೋಗತ. ನಾನು ಕೇಳಿದ ಒಂದು ನಿಜವಾದ ಸಂಗತಿಯನ್ನು ಉದಾಹರಿಸಬಹುದು.

## ಒಂದು ಪ್ರಕರಣ

ಬೆಂಗಳೂರಿನಲ್ಲಿ ಒಬ್ಬಾನೊಬ್ಬ ಸಾಹುಕಾರರ ಮನೆಯಲ್ಲಿ ಮದುವೆ. ಎಲ್ಲ ವಿಷಯಗಳಲ್ಲಿಯೂ ಅತಿಶಯವಾದ ವಿಜೃಂಭಣೆ. ದೊಡ್ಡ ಚಪ್ಪರ, ಅದಕ್ಕೆ ಬಟ್ಟೆ ಗುನ್ನಾಪಟ್ಟಿಗಳ ಅಲಂಕಾರಗಳು, ಬಣ್ಣಬಣ್ಣದ ವಿದ್ಯುದ್ದೀಪಗಳು,

ಸೋಫ ಕುರ್ಚಿ ಮೊದಲಾದ ಪರಿಕರಗಳು—ಇವೆಲ್ಲ ಯಥೇಷ್ಟವಾಗಿದ್ದವು.

ಸಂಜೆ ನಾಲ್ಕು ಘಂಟೆಯ ವೇಳೆಗೆ ಸಂಗೀತದವರು ಬಂದರು. ಹಾಡುವವರೊಬ್ಬರು, ಜೊತೆ ಹಾಡಿನವರೊಬ್ಬರು, ಪಿಟೀಲು ವಿದ್ವಾಂಸ, ಮೃದಂಗದ ವಿದ್ವಾಂಸ, ತಂಬೂರಿ ಶ್ರುತಿಯಾತ, ತಾಳಕ್ಕೊಬ್ಬ—ಈ ಆರು ಜನ ಅವರ ವಾದ್ಯಗಳೊಂದಿಗೆ ಇಳಿದರು. ಅವರಲ್ಲಿ ಒಬ್ಬಾತ ಯಜಮಾನನನ್ನು ಗಾಡಿ ಬಾಡಿಗೆ ಕೇಳಿದ.

ಯಜಮಾನ: "ಅದೆಲ್ಲ ಬೇರೆ ಎಲ್ಲೈತೆ? ಆ ಖರ್ಚೆಲ್ಲ ಕಂತ್ರಾಟಿನಲ್ಲೇ ಸೇರ್ಕೈತೆ."

ಹಾಡುವವರು ಆಹೊತ್ತಿನಲ್ಲಿ ತಕರಾರು ಪ್ರಾರಂಭಿಸಬಾರದೆಂದು ಸುಮ್ಮನಾದರು. ಕಛೇರಿ ಪ್ರಾರಂಭವಾಯಿತು. ಸುಮಾರು ಐದೂವರೆ ಘಂಟೆಯಲ್ಲಿ ಸಂಗೀತದ ಪಾರ್ಟಿಯ ಒಬ್ಬಾತ ಯಜಮಾನರ ಬಳಿಗೆ ಹೋಗಿ "ಕಾಫಿಯ ಏರ್ಪಾಟು?" ಎಂದ.

ಯಜಮಾನ: "ಅದೆಲ್ಲ ಬೇರೆಯಿಲ್ಲ. ಕಂತ್ರಾಟಿನಲ್ಲಿ ಸೇರಿದೆ" ಎಂದು ಕೈಯಿಂದ 'ಅಲ್ಲ' ಹೇಳಿದ. ಸಂಗೀತಗಾರರು ತಾವೇ ಕಾಫಿ ತರಿಸಿಕೊಂಡರು.

ಘಂಟೆ ಎಂಟೂವರೆಯಾಯಿತು. ಯಜಮಾನರು "ಹೊತ್ತಾಯಿತ್ರೀ" ಎಂದು ಹೇಳಿದರು. ಸಂಗೀತಗಾರರು ಮಂಗಳ ಹಾಡಿದರು. ಯಜಮಾನರು ಕೈಯಲ್ಲಿ ಹೂವಿನ ಹಾರ ಹಿಡಿದು,

"ಏನು ಸ್ವಾಮಿ—ದುಡ್ಡೇನೋ ತೆಗೆದುಕೊಳ್ಳುತ್ತೀರಿ, ಹಾಡುತ್ತ ಹಾಡುತ್ತ ಮಧ್ಯೆ ಮಧ್ಯೆ ಹತ್ತು ಹತ್ತು ನಿಮಿಷ ಕಳೆದುಬಿಟ್ಟಿರಲ್ಲ ಸುಮ್ಮನೆ?" ಎಂದು ಹಾರ ಹಾಕಿದ.

ಪಿಟೀಲು ವಿದ್ವಾಂಸನಿಗೆ: "ಏನಪ್ಪಾ, ಸ್ವಾಮಿಗಳಂತೂ ದಂ ತೆಗೆದುಕೊಳ್ಳುತ್ತಿದ್ದರು. ನಿನಗೇನು? ಕೈ ತೀಡುವುದಕ್ಕೆ ಏನು ಕಷ್ಟ? ನೀನು ಯಾಕೆ ಸುಮ್ಮನಿರುತ್ತಿದ್ದೆ?"

ಮೃದಂಗದಾತನಿಗೂ ಇದೇ ಮರ್ಯಾದೆ: "ನಿನಗೇನಪ್ಪ ಡಬ್ಬ ತಟ್ಟುವುದಕ್ಕೆ?"

ಕೊನೆಗೆ ತಂಬೂರಿ ಶ್ರುತಿಯವರ ಹತ್ತಿರ ನಿಂತು—"ನೀವು ನಿಜವಾಗಿ ನಿಯತ್ತುವಂತರು. ಒಂದು ನಿಮಿಷ ಪುರಸತ್ತು ತೆಗೆದುಕೊಳ್ಳದೆ ಬಾರಿಸುತ್ತಿದ್ದಿರಿ. ನಿಮಗೆ ಕೊಡುವ ಹಣ ಋಣವಲ್ಲ"—ಎಂದು ಹಾರ ಹಾಕಿದರು.

ಹೀಗಿದೆ ನಮ್ಮ ಹೊಸ ಹಣವಂತರ ರಸಿಕತೆ. ಪಾಶ್ಚಾತ್ಯ ದೇಶಗಳಲ್ಲೂ

ಇಂಥ ವರ್ಗವುಂಟಂತೆ. ಅವರನ್ನು The New Rich—ಅಭಿನವ ಕುಬೇರರು —ಎನ್ನುತ್ತಾರೆ.

## ವರ್ತಕರ ಪ್ರೋತ್ಸಾಹ

ನಮ್ಮ ದೇಶದಲ್ಲಿ ನಲವತ್ತೈದು ಐವತ್ತು ವರ್ಷಗಳ ಹಿಂದೆ ರಾಸಿಕ್ಯ ಈ ಹೀನ ಸ್ಥಿತಿಯಲ್ಲಿರಲಿಲ್ಲವೆಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ. ಆಗಿನ ಮಂಡಿ ವರ್ತಕರಲ್ಲಿ ಸಂಗೀತಪ್ರಿಯರಾದವರು ಬಹು ಮಂದಿ ಇದ್ದರು. ಬೆಂಗಳೂರಿನಲ್ಲಿ ದೊಡ್ಡಣ್ಣನವರ ಸಭಾಮಂದಿರ ಲಭ್ಯವಾದ ಮೊದಲಿನಲ್ಲಿ ವಿದುಷಿ ರಾಜಾಯಿ ಎಂಬಾಕೆಯ ಹಾಡಿಕೆ, ವಿದುಷಿ ಸರಸ್ವತೀಬಾಯಿ ಎಂಬಾಕೆಯ ಹರಿಕಥೆ, ಮಹಾರಾಜಪುರಂ ವೈದ್ಯನಾಥಯ್ಯರ್ ಅವರ ಸಂಗೀತ —ಇದೆಲ್ಲ ನಡೆಯುತ್ತಿದ್ದಾಗ ಸಭಿಕರಲ್ಲಿ ಮೂರರಲ್ಲೊಂದು ಭಾಗ ವರ್ತಕ ಸಾಹುಕಾರರದು ; ಮೂರರಲ್ಲೊಂದು ಭಾಗ ಅಧಿಕಾರಿಗಳದು, ಲಾಯರುಗಳದು ; ಉಳಿದ ಭಾಗ ನನ್ನಂಥ ಇತರರದು. ಕೆಲಮಂದಿ ವರ್ತಕರು ಸಂಗೀತ ಪಾಠ ಮಾಡುತ್ತಿದ್ದದ್ದನ್ನು ನಾನು ಬಲ್ಲೆ. ಗಾರೆ ಕೆಲಸ ಮಾಡುತ್ತಿದ್ದವರಲ್ಲಿ ಒಬ್ಬಾತ ಪುದುಕೋಟೆಗೆ ಹೋಗಿ ದಕ್ಷಿಣಾಮೂರ್ತಿ ಪಿಳ್ಳೆಯವರಲ್ಲಿ ಖಂಜರಿ ಪಾಠ ಕಲಿತದ್ದನ್ನು ನಾನು ಬಲ್ಲೆ. ಮೈಸೂರಿನಲ್ಲಿ ಬಿಡಾರಂ ಕೃಷ್ಣಪ್ಪನವರಿಗೂ ವಾಸುದೇವಾಚಾರ್ಯರಿಗೂ ಆಶ್ರಯಕೊಟ್ಟವರು ಅಲ್ಲಿಯ ವರ್ತಕ ಸಾಹುಕಾರರು. ಕುಗ್ರಾಮವಾದ ಮುಳಬಾಗಲಿಗೆ ಬಂದ ಯಾವ ಸಂಗೀತಗಾರರೂ ಬರಿಗೈಯಿಂದ ಹಿಂದಿರುಗಿದ್ದಿಲ್ಲ. ಅದು ಒಳ್ಳೆ ಸುಭಿಕ್ಷದ ಕಾಲ. ಊರಿಗೆ ಬಂದ ಅತಿಥಿಗಳನ್ನು ಆದರ ಮಾಡಿ ಉಪಚರಿಸುವವರು ಊರೂರಲ್ಲಿಯೂ ನಾಲ್ಕೈದು ಮನೆಗಳವರಿರುತ್ತಿದ್ದರು. ಕುತೂಹಲದಿಂದ ಸಂಗೀತ ಕೇಳುವವರು ಐವತ್ತು-ಅರವತ್ತು ಮಂದಿ ಇರುತ್ತಿದ್ದರು. ಆ ಐವತ್ತು-ಅರವತ್ತು ಮಂದಿಯಲ್ಲಿ ಯತ್ಕಿಂಚಿತ್ತು ಚಂದಾ ಕೊಡಬಲ್ಲವರು ಹತ್ತು ಮಂದಿಯಾದರೂ ಇರುತ್ತಿದ್ದರು. ಸಾಮಾನ್ಯವಾಗಿ ಸಂಭಾವನೆ ಐದು ರೂಪಾಯಿಗೆ ಕಡಮೆಯಿಲ್ಲ. ಹತ್ತು ರೂಪಾಯಿ ಅಪರೂಪವಲ್ಲ. ಹತ್ತು ರೂಪಾಯಿ ತಮ್ಮ ಕೈಗೆ ಬಂದರೆ ಹಾಡುಗಾರರು ಸಂತೋಷಪಡುತ್ತಿದ್ದರು. ಕಳೆದ ನಲವತ್ತು-ಐವತ್ತು ವರ್ಷಗಳಲ್ಲಿ ಮಹಾಪ್ರಸಿದ್ಧರಾದ ವಿದ್ವಾಂಸರು ಸಹ ಹಿಂದಿನ ಕಾಲದಲ್ಲಿ ಹತ್ತು-ಹದಿನೈದು ರೂಪಾಯಿಗಳ ಸಂಭಾವನೆಯಿಂದ ಎಷ್ಟೋ ಸಂತೋಷಪಟ್ಟವರು.

ಆಗ ಕಲೆಗೆ ಪುರಸ್ಕಾರವಿತ್ತು. ಮನೆಗೆ ಒಳ್ಳೆಯ ತುಪ್ಪ, ಒಳ್ಳೆಯ ಹಾಲು ಹೇಗೋ ಮನಸ್ಸಿನ ಜೀವನಕ್ಕೆ ಸಂಗೀತ ಸಾಹಿತ್ಯಗಳು ಹಾಗೆ ಅವಶ್ಯ ದ್ರವ್ಯಗಳೆಂದು ಆಗ ಜನ ಭಾವಿಸಿದ್ದರು.

ಈಗ ಎಲ್ಲಕ್ಕೂ ಚಲಾವಣೆಯಲ್ಲಿರುವ ನಾಣ್ಯದಿಂದ ಬೆಲೆ. ವ್ಯಾಪಾರದ ಮನೋವೃತ್ತಿ, ಅಂಗಡಿಯ ಮನೋವೃತ್ತಿ (Commercial spirit) ಇಂದಿನ ನಾಗರಿಕತೆಯ ಮುಖ್ಯಲಕ್ಷಣವೆಂದು ತೋರುತ್ತದೆ. ಅದು ನಮ್ಮ ಜೀವನದ ಬಹಿರಂಗಕ್ಕೆ ಹೆಚ್ಚು ಹೆಚ್ಚು ಬೆಲೆ ಕಟ್ಟಿ ಅಂತರಂಗಕ್ಕೆ ಬೆಲೆ ತಗ್ಗಿಸಿದೆ. ಎಂದು ಅಂತರಂಗಜೀವನ ಕ್ಷೀಣದಶೆಗೆ ಇಳಿಯಿತೋ ಅಂದೇ ಮನುಷ್ಯ ಜೀವನದ ಮಾನವತೆ ಇಳಿಮುಖವಾಯಿತು. ಮನುಷ್ಯತ್ವದಿಂದ ಮೃಗತ್ವಕ್ಕೆ ಇಳಿಯುತ್ತಿದ್ದೇವೆ.

* * *

ಈ ಲೇಖನಮಾಲೆಯಲ್ಲಿಯ ವ್ಯಕ್ತಿಚಿತ್ರಗಳ ಪ್ರಕರಣಗಳು ನರ್ತಕಿಯರನ್ನೂ ಗಾಯಕರನ್ನೂ ಕುರಿತವು. ಅವು ವಿಶೇಷವಾಗಿ ರಸಿಕರಿಗೆ ಇಷ್ಟವಾಗಬಹುದೆಂದು ನಾನು ಭಾವಿಸಿಕೊಂಡಿದ್ದೇನೆ.

ರಸಿಕರೆಂಬವರು ಯಾರು ?

ಒಬ್ಬಾನೊಬ್ಬ ಹಣವಂತ ತನಗೆ ಮುಪ್ಪು ಬಂತೆಂದು ತೋರಿದಾಗ ತನ್ನ ವಂಶದ ಮತ್ತು ಸ್ವತ್ತಿನ ಭವಿಷ್ಯವನ್ನು ಕುರಿತು ಆಲೋಚಿಸುತ್ತ, ತನಗಿದ್ದ ನಾಲ್ವರು ಮಕ್ಕಳ ನೈಜಪ್ರವೃತ್ತಿಯನ್ನು ಕಂಡುಹಿಡಿಯಬೇಕೆಂದು ಒಂದು ಉಪಾಯವನ್ನು ಯೋಚಿಸಿದ. ಆ ನಾಲ್ವರನ್ನು ಬೇರೆಬೇರೆಯಾಗಿ ಕರೆದು ಒಬ್ಬೊಬ್ಬನ ಕೈಯಲ್ಲಿ ಒಂದೊಂದು ರೂಪಾಯಿ ಇಟ್ಟು "ನೀನು ಮನೆಗೆ ಆಗುವ ಯಾವ ಸಾಮಾನನ್ನಾದರೂ ಕೊಂಡು ತಾ" ಎಂದು ಹೇಳಿದ.

ಮೊದಲನೆಯವನು ಮೋಂಬತ್ತಿಗಳನ್ನು ತಂದ. ಅದನ್ನು ಹಚ್ಚಿಟ್ಟರೆ ಮನೆಗೆಲ್ಲ ಬೆಳಕಾಗುತ್ತದೆಯಷ್ಟೆ ? ಎರಡನೆಯವನು ತಂದದ್ದು ಸಗಣಿಯನ್ನು. ಅದನ್ನು ಮನೆಯೆಲ್ಲ ಸಾರಿಸಲು ಬಳಸಬಹುದಲ್ಲವೆ ? ಮೂರನೆಯವನು ಒಬ್ಬ ಹುಲ್ಲನ್ನು ತಂದ. ಅದನ್ನು ಎಲ್ಲ ಕೋಣೆಗಳಲ್ಲಿಯೂ ಹಾಸಿ ಹರಡಬಹುದಷ್ಟೆ ?

ನಾಲ್ಕನೆಯವನು ಅಗರು ಜವ್ವಾಜಿ ಊದುಬತ್ತಿಯನ್ನು ತಂದ. ಅದನ್ನು ಹಚ್ಚಿಟ್ಟರೆ ಮನೆಯೆಲ್ಲ ಪರಿಮಳ ತುಂಬುತ್ತದಲ್ಲವೆ?

ಈ ನಾಲ್ಕನೆಯವನು ರಸಿಕ.

ಪ್ರಪಂಚದಲ್ಲಿ ಪದಾರ್ಥಗಳಿಗೆ ಬೆಲೆ ತರುವ ಕಾರಣಗಳು ಎರಡು : ಒಂದು ಉಪಯೋಗ ; ಎರಡನೆಯದು ಸೊಗಸು.

ಮೊರ ಪೊರಕೆಗಳಿಗೆ ಉಪಯೋಗದ ದೃಷ್ಟಿಯಿಂದ ಬೆಲೆ. ಹೂ ಗಂಧಕ್ಕೆ ಸೊಗಸಿನ ದೃಷ್ಟಿಯಿಂದ ಬೆಲೆ.

ಅಕ್ಕಿ ಬೇಳೆ ಉಪ್ಪು ಬೆಲ್ಲ ಇಲ್ಲದಿದ್ದರೆ ಊಟವಿಲ್ಲ ; ಬದುಕೇ ಇಲ್ಲದೆ ಹೋಗುತ್ತದೆ. ಹೂ ಗಂಧ ಇಲ್ಲದಿದ್ದರೆ ಯಾರೂ ಸಾಯುವುದಿಲ್ಲ. ಇದು ಬಹುಮಂದಿಯ ವಾದ. ಆದರೆ ಇದಕ್ಕೊಂದು ಉತ್ತರವಿದೆ. ಅನ್ನ ತೊವ್ವೆ ತಿಂದು ಸುವಾಸನೆ ಕಾಣದೆ ಬದುಕಿದರೆ ಅದೆಂಥ ಬದುಕು ? ನಾಯಿ ನರಿಗಳೂ ತಿಂದು ಬದುಕುವುದಿಲ್ಲವೆ ?

ಇದು ಎಲ್ಲ ಜನರಲ್ಲಿಯೂ ಇರುವ ಪ್ರಶ್ನೆ. ಕನ್ನಡದ ಒಂದು ಗಾದೆ ಸಿದ್ಧಾಂತವನ್ನು ಸೂಚಿಸುತ್ತದೆ : "ಸಗಣಿಯುವನ ಸಂಗಕ್ಕಿಂತ ಗಂಧದಹುಡಿಯುವನ ಕೂಡ ಗುದ್ದಾಟ ಲೇಸು."

## ರಸಿಕ ಸ್ವಭಾವ

ಒಂದೇ ಕಾಲದಲ್ಲಿ ಒಬ್ಬ ಬಂಧುಗಳ ಮನೆಯಲ್ಲಿ ಲಾಡು ಚಿರೋಟಿ ಔತಣಕ್ಕೆ ಕರೆ ಬಂದಿರುತ್ತದೆ. ಅದೇ ದಿನ ಅದೇ ಕಾಲದಲ್ಲಿ ಬೇರೊಂದು ಕಡೆ ಶ್ರೀಮತಿ ಸುಬ್ಬುಲಕ್ಷಮ್ಮನ ಸಂಗೀತ ಏರ್ಪಾಟಾಗಿರುತ್ತದೆ. ನೀವು ಎಲ್ಲಿಗೆ ಹೋಗುತ್ತೀರಿ ? ನಂಟರ ಮನೆಗೆ ಹೋದರೆ ನಿಮ್ಮನ್ನು ಆದರದಿಂದ ಬರಮಾಡಿಕೊಂಡು ಕೂಡಿಸಿ ಉಪಚಾರ ಮಾಡುತ್ತಾರೆ. ಕಛೇರಿಗೆ ಹೋದರೆ ಅಲ್ಲಿ ನಿಮ್ಮನ್ನು ಮಾತನಾಡಿಸುವವರಿಲ್ಲ. ಸಾವಿರ ಮಂದಿಯ ನಡುವೆ ನೀವೇ ಪ್ರಯತ್ನಪಟ್ಟು ಎಲ್ಲೋ ಒಂದು ಕಡೆ ಸ್ಥಳಮಾಡಿಕೊಂಡು ಕೂಡಬೇಕಾಗುತ್ತದೆ. ನೀವು ಯಾವುದನ್ನು ಆರಿಸುತ್ತೀರಿ ? ನಾಲಗೆಯ ಸುಖವನ್ನೆ, ಕಿವಿ ಮನಸ್ಸುಗಳ ಸಂತೋಷವನ್ನೆ ? ಯಾವ ಸುಖ, ಯಾವ ಸಂತೋಷ ಮನಸ್ಸಿಗೆ ಹೆಚ್ಚಾಗಿ ತಲಪುತ್ತದೋ, ಮನಸ್ಸಿನಿಂದ ಜೀವವನ್ನು ಹೆಚ್ಚಾಗಿ ಸಂಸ್ಕರಿಸುತ್ತದೋ ಆ ಸುಖಕ್ಕೆ ಮೊದಲನೆಯ ಸ್ಥಾನ ಕೊಡುವುದು ರಸಿಕ ಸ್ವಭಾವ.

ಟಿ. ಎಸ್. ವೆಂಕಣ್ಣಯ್ಯನವರು ರಸಿಕರು. ಅವರೂ ನಾನೂ ದುಂಬಿಗಳ ಹೊಳೆಯುವ ಕಪ್ಪನ್ನೂ ಝೇಂಕಾರವನ್ನೂ ಪುಷ್ಪಸನ್ನಿಧಿಯಲ್ಲಿ ದುಂಬಿ ತೋರುವ ವಿಲಾಸಗಳನ್ನೂ ಕುರಿತು ಮಾತನಾಡಿಕೊಳ್ಳುತ್ತಿದ್ದೆವು. ಲಾಲ್ ಬಾಗಿನಲ್ಲಿ ಅರುಣೋದಯದ ವೇಳೆಗೆ ಹೋದರೆ ಅಲ್ಲಿ ಭೃಂಗಸಂಭ್ರಮ

ವನ್ನು ಕಾಣಲಾದೀತೆಂದುಕೊಂಡು ಮಾರನೆಯ ದಿನ ಅಲ್ಲಿಗೆ ಹೋಗತಕ್ಕದ್ದೆಂಡು ನಿಶ್ಚಯಿಸಿಕೊಂಡೆವು. ನಾಲ್ಕು ಘಂಟೆಗೇ ಎದ್ದು ಲಾಲ್‌ಬಾಗಿಗೆ ಓಡಿದೆವು. ನಾವಿಬ್ಬರೂ ಕಾಫಿ ವ್ಯಸನಿಗಳು. ಆ ಬೆಳಗ್ಗೆ ಅದು ನಮ್ಮಿಬ್ಬರಿಗೂ ಮರೆತುಹೋಯಿತು. ಗೇಟು ಬಳಿಯ ಕಾವಲುಗಾರನನ್ನು ಬೇಡಾಡಿ ನಾಲ್ಕೂವರೆ ನಾಲ್ಕು ಮುಕ್ಕಾಲು ಘಂಟೆಯ ವೇಳೆಗೆ ಸುರಹೊನ್ನೆ ಮರಗಳ ಬಳಿ ನಿಂತು ಕಾದು ನೋಡಿದೆವು. ಹತ್ತು ಹದಿನೈದು ನಿಮಿಷ ಬಿಟ್ಟು ಪಾದರಿ ಮರದ ಬಳಿ ಓಡಿದೆವು. ಅಲ್ಲಿ ಹತ್ತು ನಿಮಿಷವಿದ್ದು ಹಿಪ್ಪೆ (ಮಾಧ್ವೀಕ) ಮರದ ಬಳಿ ಹೋಗಿ ನಿಂತೆವು. ಈ ವೇಳೆಗೆ ಮಬ್ಬು ಮುಗಿದು ಬಾಲ ಸೂರ್ಯಪ್ರಭೆ ಬರುತ್ತಿತ್ತು. ದುಂಬಿಗಳನ್ನು ಕುರಿತು ಪೂರ್ವಕವಿಗಳು ಮಾಡಿದ್ದ ಪ್ರಶಂಸೆ ಅಕ್ಷರ ಅಕ್ಷರವೂ ನಿಜವೆಂದು ನಮಗೆ ಅಂದು ಪ್ರತ್ಯಕ್ಷವಾಯಿತು.

ಊಟ ಗೊಡ್ಡುಸಾರನ್ನವಾದರೂ ಸಂಗೀತ ಭಾವಸಂಪನ್ನವಾಗಿರಬೇಕು. ಬಟ್ಟೆ ಹರಕಲಾದರೂ ಸರಿ; ಮಲ್ಲಿಗೆಯ ಘಮಲಿದ್ದರೆ ಸಾಕು. ಇದು ರಸಿಕನ ಮತ.

## ರಸದ ಲಕ್ಷಣ

ರಸ ಎಂದರೆ ರುಚಿ ಕೊಡುವಂಥಾದ್ದು. ಯಾವ ಒಂದು ರುಚಿ ಅಥವಾ ಗುಣ ಪದಾರ್ಥದಲ್ಲಿರುವುದರಿಂದ ಆ ಪದಾರ್ಥ ನಮಗೆ ಇನ್ನೂ ಬೇಕು, ಮತ್ತೂ ಬೇಕು ಎಂದೆನ್ನಿಸುತ್ತದೋ ಅದೇ ರಸ.

ರಸದ ಲಕ್ಷಣವನ್ನು ವೇದದಲ್ಲಿ ಹೇಳಿದೆ:

ರಸಗ್ಂ ಹ್ಯೇವಾಯಂ ಲಬ್ಧ್ವಾಽನಂದೀ ಭವತಿ ॥

ವಸ್ತುವಿನ ಯಾವ ಗುಣವಿಶೇಷದಿಂದ ಅಥವಾ ಶಕ್ತಿವಿಶೇಷದಿಂದ ಅದನ್ನು ಪಡೆದವನು ಆನಂದಿಸುತ್ತಾನೋ ಅದೇ ರಸ.

ಲೋಕಾನುಭವಗಳಲ್ಲಿ ಯಾರು ರಸಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಾನೋ ಅವನು ರಸಿಕ.

ರಸಿಕನಿಗೆ ಮುಖ್ಯವಾದದ್ದು 'ಪದಾರ್ಥದ ಗಾತ್ರವಲ್ಲ, ಅದರ ಗುಣ. ಅವನು ಗಣನೆ ಮಾಡುವ ಬೆಲೆ ಮಾರುಕಟ್ಟೆಯದಲ್ಲ, ಮನಸ್ಸಿನದು.

ಮಹಾನುಭಾವರಾದ ವಿಶ್ವೇಶ್ವರಯ್ಯನವರು ಊಟ ಮಾಡುತ್ತಿದ್ದದ್ದು

ಒಟ್ಟು ನಾಲ್ಕೈದು ಚಮಚಗಳಷ್ಟನ್ನೆ. ಆದರೆ ಅವರು ಒಂದೊಂದು ಬಟ್ಟಲಿನಿಂದ ಗ್ರಹಿಸಿದ ಒಂದೊಂದು ಚಮಚದ ಗ್ರಾಸದ ರುಚಿಯನ್ನೂ ಅನುಭವಿಸುತ್ತಿದ್ದರು. ಅವರು ಒಬ್ಬಟ್ಟಿಗೆ National Delicacy ಎಂದು ಹೆಸರಿಟ್ಟಿದ್ದರು. ಆದರೆ ಅವರ ಬಾಯಿಗೆ ಸೇರುತ್ತಿದ್ದದ್ದು ಒಂದು ಒಬ್ಬಟ್ಟಿನ ಮಧ್ಯದ ಅಂಗೈಯಷ್ಟು ಭಾಗ. ಇದು ರಸಿಕಭೋಜನ. ಅದರಲ್ಲಿ ಪುಡಿಗಳೂ ಒಗ್ಗರಣೆಗಳೂ ಹೆಚ್ಚಾಗಿರಬೇಕಾಗಿಲ್ಲ. ಭೋಜ್ಯವಸ್ತುವಿನ ಕೇವಲರುಚಿಯನ್ನು ಮಾತ್ರ ಅವರು ನೋಡುತ್ತಿದ್ದರು.

ರಸಿಕನು ಮನೋರಾಜ್ಯದ ನಿವಾಸಿ. ಅವನಿಗೆ ದೇಹರಾಜ್ಯ ಬೇಡವೆಂದಲ್ಲ. ದೇಹವಿಲ್ಲದೆ ಮನಸ್ಸಿಲ್ಲ. ಆದರೆ ರಸಿಕರ ಪಾಲಿಗೆ ದೇಹಾನುಭವವು ಮರದ ಕೊಂಬೆ–ರಂಬೆಗಳಂತೆ ; ಮನಸ್ಸಿನ ಅನುಭವವು ಹೂವು ಹಣ್ಣುಗಳಂತೆ.

ಎಲ್ಲರ ಮನೆಗಳಲ್ಲಿಯೂ ಅಡಿಗೆಯ ಮನೆ, ಊಟದ ಮನೆ, ಉಗ್ರಾಣಗಳು ಇರುತ್ತವೆ. ಹಾಗೆಯೇ ನಡುಮನೆ, ಕೂಡುವ ಕೋಣೆಗಳೂ ಇರುತ್ತವೆ. ನಾವು ಹೆಚ್ಚಾಗಿ ಹೊತ್ತು ಕಳೆಯುವುದು ಕೂಡುವ ಕೋಣೆಗಳಲ್ಲಿ ; ಇಲ್ಲಿ ನಮ್ಮ ಸಂತೋಷ ಸಲ್ಲಾಪಗಳು.

ರಸಿಕನು ಹಾಗೆ ದೈಹಿಕ ವ್ಯಾಪಾರಗಳಲ್ಲಿ ಆವಶ್ಯವಾದಷ್ಟು ಕಾಲ ಕಳೆಯುತ್ತಾನೆ. ಆದರೆ ಅವನ ಕುತೂಹಲವಿರುವುದು ತನ್ನ ಮನಸ್ಸಿನ ಜೀವನದಲ್ಲಿ. ಅಲ್ಲಿ ಅವನು ಪಟ್ಟ ಸಂತೋಷವೇ ಅವನ ಲೆಕ್ಕಕ್ಕೆ ಜೀವನದ ಸಾರಭಾಗ.

ಇದೇ ಮಾತನ್ನು ವಸ್ತ್ರಾಭರಣಗಳ ವಿಷಯದಲ್ಲಿಯೂ ಹೇಳಬಹುದು. ಒಬ್ಬ ಕೇರಳ ಸುಂದರಿ ತನ್ನ ದೊಡ್ಡ ಕಪ್ಪು ತುರುಬಿನಲ್ಲಿ ಒಂದೇ ಒಂದು ಮಲ್ಲಿಗೆ ಹೂವನ್ನು ಮುಡಿದಿದ್ದಳು. ಹೂವಿನ ಬೊಂತೆಯನ್ನಲ್ಲ. ಕೂದಲಿನ ಕಪ್ಪು ಆವರಣದಿಂದ ಮಲ್ಲಿಗೆ ಹೂವಿನ ಧವಳತೆ ಎತ್ತಿಕಾಣುತ್ತಿತ್ತು ; ಹಾಗೆಯೇ ಆ ತುರುಬಿನ ಸೊಂಪೂ ದ್ವಿಗುಣವಾಗಿ ಸೊಗಯಿಸುತ್ತಿತ್ತು.

ಆರ್ಕಾಟ್ ಶ್ರೀನಿವಾಸಾಚಾರ್ಯರು ಸಂಗೀತ ಕೇಳುತ್ತಿದ್ದದ್ದು ಹಾಗೆಯೇ. ತಾವು ಆರಿಸಿ ಕರೆದ ಸಂಗೀತ ವಿದ್ವಾಂಸರನ್ನು ಹಾಡಿಸುತ್ತಿದ್ದದ್ದು ಮುಕ್ಕಾಲು ಅಥವಾ ಒಂದು ಘಂಟೆ ಮಾತ್ರ. ಅಷ್ಟು ಕೊಂಚ ಹೊತ್ತಿನಲ್ಲಿ ಅವರು ಬೇಡುತ್ತಿದ್ದದ್ದು ಯಾವುದೋ ಒಂದು ರಾಗವನ್ನು ಅಥವಾ ಒಂದು ಕೃತಿಯನ್ನು. ಅವರಿಗೆ ಬೇಕಾಗಿದ್ದದ್ದು ಬಹುವಲ್ಲ, ಸ್ವಲ್ಪ. ಆದರೆ ಅದು ಮಧುಖಂಡವಾದ ಸ್ವಲ್ಪ.

ಒಂದು ಮಡಕೆ ಹಾಲಿನಲ್ಲಿ ಸಾರಭಾಗ ಅದರ ಕೆನೆ ಅಥವಾ ಒಂದು

ಗಜ್ಜುಗದ ಕಾಯಷ್ಟು ಬೆಣ್ಣೆ. ಇಷ್ಟು ಮಾತ್ರವೇ ರಸಿಕನಿಗೆ ಬೇಕಾದದ್ದು ; ಮಡಕೆಯಷ್ಟೂ ಅಲ್ಲ.

## ರಸಿಕತೆ ಸಂಸ್ಕಾರಕಾರಕ

ನಮ್ಮ ಎಲ್ಲ ಪ್ರಪಂಚಾನುಭವವೂ ಸಾಮಾನ್ಯವಾಗಿ ಎರಡು ಮೆಟ್ಟಲುಗಳಲ್ಲಿ ಇರುತ್ತದೆ: ಒಂದು ದೇಹದ್ದು, ಇನ್ನೊಂದು ಮನಸ್ಸಿನದು. ಪ್ರಾರಂಭವಾಗುವುದು ದೇಹದಲ್ಲಿ. ಆಮೇಲೆ ಅದು ಮನಸ್ಸಿಗೆ ವ್ಯಾಪಿಸುತ್ತದೆ. ಉಪನಿಷದಾಚಾರ್ಯರು ಆನಂದವೆಂದರೆ ಏನೆಂಬುದನ್ನು ವಿವರಿಸ ಹೊರಟು ಮೊದಲು ಒಬ್ಬ ಆರೋಗ ದೃಢಕಾಯನೂ ದ್ರವ್ಯೋಪಪತ್ತಿಯುಳ್ಳವನೂ ಆದ ಯುವಕನು ಪಡುವ ಅತ್ಯಂತ ಸೌಖ್ಯವನ್ನು ಉದಾಹರಿಸುತ್ತಾರೆ. ಬಳಿಕ ಅದನ್ನು ನೂರರಿಂದ, ನೂರು ನೂರರಿಂದ ಗುಣಿಸಿ ಬ್ರಹ್ಮಾನಂದವನ್ನು ಊಹಿಸಿಕೊಳ್ಳ ಹೇಳುತ್ತಾರೆ. ಇದು ಒಂದು ಸ್ಥೂಲವಾದ ಬೋಧನೆಯ ಮಾರ್ಗ. ಇದರಲ್ಲಿ ನಮಗೆ ಲಕ್ಷ್ಯಕ್ಕೆ ಬರಬೇಕಾದದ್ದು ದೇಹವು ನಮ್ಮ ಜಗದನುಭವದಲ್ಲಿ ಮೊದಲನೆಯ ಮೆಟ್ಟಲೆಂಬುದು. ದೇಹಾನುಭವವೇ ಎಲ್ಲ ಅನುಭವಗಳನ್ನು ಅಳೆಯುವುದಕ್ಕೂ ಮೂಲಮಾನ. ದೇಹದ ಸಂತೋಷ ಕ್ಷಣಿಕವಾದದ್ದು. ಆದರೆ ಆ ಸಂತೋಷವು ಮನಸ್ಸಿನಲ್ಲಿ ಅವತಾರವೆತ್ತಿದಾಗ ಅಲ್ಲಿ ಆದ ಪರಿಣಾಮ ಚಿರಕಾಲದ್ದಾಗಿರುತ್ತದೆ. ಈ ಪರಿಣಾಮವೇ ರಸಿಕತೆ. ರಸದ ಉತ್ತಮ ಪರಿಣಾಮವು ಮನಸ್ಸಿನಲ್ಲಾಗಿ ಅಲ್ಲಿಂದ ಅದು ಜೀವವನ್ನು ಮುಟ್ಟುತ್ತದೆ. ಹೀಗೆ ರಸಿಕತೆ ಸಂಸ್ಕಾರಕಾರಕವಾದದ್ದು. ಅದು ಮನಸ್ಸಿನಲ್ಲಿ ಆಹ್ಲಾದಜನಕವಾಗಿ ಜೀವದಲ್ಲಿ ವಿಕಾಸಕಾರಕವಾಗಿ ಮನುಷ್ಯನ ಬಹಿರಂಗ ವ್ಯಾಪಾರದಲ್ಲಿ ನಯ, ವಿನಯ, ಸಹನೆ, ಸಭ್ಯತೆ, ಗುಣ ಸಂತೋಷ—ಈ ಪ್ರಕಾರದ ಪರಿಣಾಮಗಳನ್ನು ಆಗಮಾಡಿಸುತ್ತದೆ. ಈ ಕಾರಣದಿಂದ ರಸಿಕತೆಗೆ ಮುಖ್ಯ ಪೋಷಕಗಳಾದ ಸಂಗೀತ ಸಾಹಿತ್ಯಗಳು ಲೋಕದಲ್ಲಿ ಬೆಲೆ ಪಡೆದುಕೊಂಡಿರುತ್ತವೆ.

೫

# ಎಸ್. ಜಿ. ನರಸಿಂಹಾಚಾರ್ಯರು

ನನ್ನ ಇಂಗ್ಲಿಷ್ ಹುಚ್ಚು ಸ್ತಿಮಿತಕ್ಕೆ ಬಂದು ಕೆಲವು ದಿನವಾದ ಮೇಲೆ ಕನ್ನಡ ಹುಚ್ಚು ಮೊದಲಾಯಿತು. ಆಗ ನನ್ನ ವಯಸ್ಸಿನವರಿಗೆ ಪ್ರಪಂಚದಲ್ಲಿ ಬದುಕಿದ್ದವರ ಹೆಸರುಗಳಲ್ಲೆಲ್ಲ ದೊಡ್ಡ ಹೆಸರೆಂದರೆ ಬಾಲ ಗಂಗಾಧರ ತಿಲಕರದು. ವೀರರೆಂದರೆ ತಿಲಕರೇ ವೀರರು. ಅವರ ಪಕ್ಕದಲ್ಲಿ ಎಂಥವರನ್ನು ನಿಲ್ಲಿಸಿದರೂ ಆ ಇನ್ನೊಬ್ಬರು ಕುಳ್ಳರೇ. ತಿಲಕರೇ ಪುರುಷಸಿಂಹ. ಇದು ನನ್ನ ಅಂದಿನ ಭಾವನೆ. ಅದು ಸರಿಯಾದದ್ದೆಂದೇ ತೋರುತ್ತದೆ. ತಿಲಕರು ಪೂನಾ ಪಟ್ಟಣದಲ್ಲಿ ಗಣೇಶೋತ್ಸವವನ್ನು ಪ್ರಾರಂಭ ಮಾಡಿ, ಮಹಾರಾಷ್ಟ್ರ ದೇಶದಲ್ಲೆಲ್ಲ ಆ ಉತ್ಸವ ವ್ಯಾಪಿಸುವಂತೆ ಪ್ರೇರಣೆ ಕೊಟ್ಟು, ಅದರ ಮೂಲಕ ಜನಜಾಗೃತಿಯನ್ನುಂಟುಮಾಡಿ, ಜನಪದ ಭಾವನೆಗೆ ರೂಪು ಕೊಟ್ಟ ಸಂಗತಿ ನನಗೆ ತಿಳಿದಿತ್ತು. ಅದರಂತೆ ಕರ್ಣಾಟಕದಲ್ಲೂ ನಾವು ಏಕೆ ಮಾಡಬಾರದು—ಎಂಬ ಪ್ರಶ್ನೆ ನನ್ನ ಮನಸ್ಸಿಗೆ ತೋರಿ, ಅದಕ್ಕುತ್ತರವಾಗಿ ಮಹಾಜನರಲ್ಲಿ ಒಂದು ವಿಜ್ಞಾಪನೆ ಮಾಡಬೇಕೆಂದು ಆಲೋಚನೆ ಬಂತು. ಅದರಂತೆ ಒಂದು ಪ್ರಸಿದ್ಧ ಪತ್ರಿಕೆಯನ್ನು ಬರೆದೆ. ಅದರಲ್ಲಿ ಗಣೇಶ ಕಥೆ, ಆ ರೂಪದ ಗೂಢತತ್ತ್ವ ಮತ್ತು ಆ ದೈವದ ಜನಪದಾದರ್ಶತೆ ಇವೇ ಮೊದಲಾದ ಅಂಶಗಳನ್ನು ನನಗೆ ಆಗ್ಗೆ ತೋರಿದ ಮಟ್ಟಿಗೆ ನಿರೂಪಿಸಿದ್ದೆ. ಆ ಬರವಣಿಗೆಯನ್ನು ಪ್ರಕಟನೆಗೆ ಅರ್ಹವಾದದ್ದೆಂದು ಹೇಳಬೇಕಾದವರು ಯಾರು? ಆ ವೇಳೆಗೆ ನಾನು ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರ ಹೆಸರನ್ನು ಚೆನ್ನಾಗಿ ಗುರುತಿಸಿಕೊಂಡಿದ್ದೆ. ನಾನು ಸ್ಕೂಲಿನಲ್ಲಿ ಓದುತ್ತಿದ್ದಾಗ ಅವರ 'ದಿಲೀಪ ಚರಿತೆ', 'ಅಜನೃಪ ಚರಿತೆ'ಗಳನ್ನು ಓದಿದ್ದೆ; ಅವರು ಸಂಪಾದಿಸಿದ್ದ (ಮ್ಯಾಕ್ಮಿಲನ್ ಕಂಪೆನಿಯ) ಕನ್ನಡ ವಾಚನ ಪುಸ್ತಕಗಳಲ್ಲಿ (Readers) ಎರಡನ್ನು ಪಾಠ ಹೇಳಿದ್ದೆ; ಮತ್ತು ಅವರ ಸಹ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ಕರ್ಣಾಟಕ ಕಾವ್ಯಮಂಜರಿ'ಯ ಕೆಲವು ಸಂಚಿಕೆಗಳನ್ನು ನೋಡಿದ್ದೆ. ಹೀಗೆ ಅವರ ಕನ್ನಡ ಗದ್ಯ ಪದ್ಯ ರಚನೆಯ ಮೂಲಕ ನನಗೆ ಅವರ ವಿಷಯದಲ್ಲಿ ಗೌರವಬುದ್ಧಿಯೂ ಮೆಚ್ಚಿಕೆಯೂ ದೃಢಪಟ್ಟಿದ್ದವು. ಈ

ಕಾರಣದಿಂದ ನಾನು ಅವರಿಗೆ ನನ್ನ ಬರವಣಿಗೆಯನ್ನು ತೋರಿಸಬೇಕೆಂದು ನಿಶ್ಚಯಿಸಿಕೊಂಡೆ.

ಅವರು ವಾಸವಾಗಿದ್ದದ್ದು ಹಾಸ್ಪಿಟಲ್ ಲೇನ್ ಎಂಬ ಬೀದಿಯ ಉತ್ತರ ಪಾರ್ಶ್ವ ಶ್ರೇಣಿಯ ನಡುವೆ ಒಂದು ಮನೆಯಲ್ಲಿ. ಆ ಬೀದಿ ಉಪ್ಪಾರಪೇಟೆ (ಬಳೇಪೇಟೆ) ನರಸಿಂಹಸ್ವಾಮಿಯ ಗುಡಿಯಿಂದ ಪೂರ್ವಕ್ಕೆ ಹೊರಟು (ಹಿಂದಿನ ಹುಚ್ಚಾಸ್ಪತ್ರೆಯ) ಈಗಿನ ಮೈಸೂರು ಬ್ಯಾಂಕಿನ ಪಕ್ಕದಲ್ಲಿ ದೊಡ್ಡ ಪೇಟೆಯನ್ನು ಸೇರುತ್ತದೆ. ನಾನು ಹೋದಾಗ ಅವರೊಡನೆ ಅವರ ಸ್ನೇಹಿತ ರಾದ ಶ್ರೀ ಜಿ. ಜಿ. ನರಸಿಂಹಾಚಾರ್ಯರು ಇದ್ದರು. ಜಿ. ಜಿ. ನರಸಿಂಹಾ ಚಾರ್ಯರೂ ಸಹ ಒಬ್ಬ ಗಣ್ಯವ್ಯಕ್ತಿ. ಅವರು ಸ್ವಾಮಿ ವಿವೇಕಾನಂದರ ಮಾಹಾತ್ಮ್ಯಕ್ಕೆ ಮನಸೋತು, ಅವರಿಗೆ ಸಾಕ್ಷಾತ್ ಶಿಷ್ಯರಾಗಿ, ಅವ ರೊಡನೆ ಕೊಂಚಕಾಲ ದೇಶಸಂಚಾರ ಮಾಡಿದ್ದ ಮಹನೀಯರು. ಅವರಿಗಿದ್ದ ಉದ್ಯೋಗ ದೊಡ್ಡದೇನೂ ಅಲ್ಲ. ಅವರು ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಒಬ್ಬ ಗುಮಾಸ್ತರಾಗಿದ್ದರೆಂದು ತೋರುತ್ತದೆ. ಆದರೆ ಅವರಿಗಿದ್ದ ವೇದಾಂತ ಸಾಹಿತ್ಯ ಜ್ಞಾನ ವಿಸ್ತಾರವಾದದ್ದು ಮತ್ತು ಅವರ ಸ್ವದೇಶಾಭಿಮಾನ ವೀರ್ಯವತ್ತಾದದ್ದು. ಅವರ ಆಕಾರವೂ ಉನ್ನತವಾಗಿ ಗಂಭೀರವಾಗಿ ಪ್ರಸನ್ನ ವಾಗಿತ್ತು. ಈ ಜಿ. ಜಿ.ಯವರ ಮಾತಿಗೆ ಇನ್ನೊಂದು ಸಾರಿ ಬರೋಣ.

ಎಸ್. ಜಿ. ನರಸಿಂಹಾಚಾರ್ಯರು ಆಕಾರದಲ್ಲಿ ದೊಡ್ಡಾಳಲ್ಲ, ಸಾಮಾನ್ಯ ಗಾತ್ರ, ತೆಳುವೆಂದೇ ಹೇಳಬಹುದು. ನೋಡಿದ ಕೂಡಲೆ ಥಟ್ಟನೆ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಬಲ್ಲ ರೂಪಪ್ರಭಾವ ಅವರಿಗಿರಲಿಲ್ಲ. ನನ್ನ ಉದ್ದೇಶವನ್ನು ನಾನು ಹೇಳಿದ ಕೂಡಲೆ ಅವರು—"ನೀವು ಓದುವಿರಾ ? ನಾವು ಕೇಳುತ್ತೇವೆ" ಎಂದರು. ನಾನು ನನ್ನ ಪ್ರಬಂಧವನ್ನು ಓದಿ ಮುಗಿಸಿದ ಮೇಲೆ ತಾವೇ ಅದನ್ನು ಕೈಗೆ ತೆಗೆದುಕೊಂಡು ಇನ್ನೊಂದು ಸಾರಿ ಓದಿದರು. ಆಮೇಲೆ— ,

ಎಸ್. ಜಿ.—"ಆಧುನಿಕ" ಎಂಬ ಮಾತನ್ನು ಉಪಯೋಗಿಸಿದ್ದೀರಲ್ಲ, ಹಾಗೆಂದರೇನು ?

ನಾನು—"ಈಚೀಚಿನ" ಎಂದು.

ಎಸ್. ಜಿ.—ಈಚೀಚಿನ ಎಂದೇ ಏಕೆ ಬರೆಯಬಾರದು ? ನನ್ನ ಸ್ನೇಹಿ ತರು ಮಹಾರಾಷ್ಟ್ರದವರು ಒಬ್ಬರಿದ್ದಾರೆ. ಅವರು ಸಂಸ್ಕೃತ ಬಲ್ಲವರು. ಅವರು ಈ "ಆಧುನಿಕ" ಎಂಬ ಪದವನ್ನು ಒಂದು ಕಡೆ ನೋಡಿದಾಗ ಅದಕ್ಕೆ ಅರ್ಥ

ವೇನು ಎಂದು ನನ್ನನ್ನು ಕೇಳಿದರು. ನಾನು ಆಶ್ಚರ್ಯಪಟ್ಟೆ. ಸಂಸ್ಕೃತದ "ಅಧುನಾ" ಎಂಬುದರ ವಿಶೇಷಣ ರೂಪ ಅಲ್ಲವೆ "ಆಧುನಿಕ" ಎಂಬುದು? ಸಂಸ್ಕೃತ ಬಲ್ಲವರಿಗೇ ಅದು ಇಷ್ಟು ಕಷ್ಟವಾಗಿರುವಾಗ ಸಂಸ್ಕೃತ ತಿಳಿಯದ ನಮ್ಮ ಸಾಮಾನ್ಯ ಜನಕ್ಕೆ ಈ ಮಾತು ಹೇಗೆ ಅರ್ಥವಾಗಬೇಕು?

ಕೆನ್ನೆಗೆ ಬಿದ್ದ ಏಟು ನನಗೆ ನ್ಯಾಯವಾಗಿ ಸಂದದ್ದು. ತಿಂದು ಒರಸಿ ಕೊಂಡೆ. ಅಂಥ ಪೆಟ್ಟುಗಳನ್ನು ಇನ್ನೂ ನಾಲ್ಕಾರು ಸಲ ತಿಂದಿದ್ದೇನೆ.

ಹೀಗೆ ಪ್ರಾರಂಭವಾದ ಪರಿಚಯ ಕೆಲವು ದಿವಸಗಳಲ್ಲಿ ಪಕ್ವವಾಯಿತು. ಆಗ ಚಾಮರಾಜಪೇಟೆಯ ಮೊದಲನೆಯ ರಸ್ತೆಯಲ್ಲಿದ್ದ ಶ್ರೀ ರಾಮಕೃಷ್ಣ ಮಠಕ್ಕೆ ಎಸ್. ಜಿ. ನರಸಿಂಹಾಚಾರ್ಯರೂ, ಜಿ. ಜಿ.ಯವರೂ ವಾರಕ್ಕೆ ಎರಡು ಮೂರು ಸಲವಾದರೂ ಬರುತ್ತಿದ್ದರು. ಅಲ್ಲಿ ಎಸ್. ಜಿ.ಯವರ ಮಾತುಕಥೆ ಕೇಳುವ ಭಾಗ್ಯ ನನಗೆ ಲಭಿಸಿತು. ಆ ಮಾತಿನ ವಿಷಯಗಳು ಕಾವ್ಯಲಕ್ಷಣ, ಕವಿಕಥೆ, ದೇಶಚರಿತ್ರೆ, ಮತತತ್ತ್ವ, ಸಮಾಜಶುದ್ಧಿ ಇತ್ಯಾದಿ.

ಭಾಷಾಶೈಲಿಯಲ್ಲಿ ಸರಳತೆ ಎಸ್. ಜಿ.ಯವರಿಗೆ ಪ್ರಿಯವಾದ ಗುಣ ಎಂಬುದನ್ನು ಅವರು ನನಗೆ ಕಲಿಸಿದ ಪಾಠದಿಂದ ಊಹಿಸಿಕೊಳ್ಳಬಹುದು. ನಡವಳಿಕೆಯಲ್ಲಿಯೂ ಅವರು ಹಾಗೆಯೇ ಸರಳರು.

ಒಂದಾನೊಂದು ದಿನ ಸಂಜೆ ನಮ್ಮ ಸಮಾಜದ ಗಣ್ಯ ಪುರುಷರು ಕಾಲ ಹರಣ ಮಾಡುವ ರೀತಿ ಪ್ರಸ್ತಾಪಕ್ಕೆ ಬಂತು. ಆಗ ಎಸ್. ಜಿ. ಅವರು ಹೀಗೆಂದರು :—"ಇಂಗ್ಲಿಷ್ ವಿದ್ಯೆ ಕಲಿತು ದೊಡ್ಡದೊಡ್ಡ ಹುದ್ದೆಗಳಲ್ಲಿದ್ದು ಪೆನ್‌ಷನ್ ಸಂಪಾದಿಸಿದವರೂ ವಕೀಲರಾಗಿ ಐಶ್ವರ್ಯ ಸಂಪಾದಿಸಿದವರೂ ಮುಪ್ಪಿನಲ್ಲಿ....ಇನ್‌ಸ್ಟಿಟ್ಯೂಟ್ ಮೊದಲಾದ ವಿನೋದ ಸ್ಥಾನಗಳಿಗೆ ಹೋಗಿ ಸಂಜೆಯನ್ನೂ ರಾತ್ರಿಯನ್ನೂ ಅಲ್ಲಿ ಹಾಳುಮಾಡುತ್ತಾರೆ! ಅವರಿಗೆ ವಿನೋದ ವೆಂದರೆ ಇಸ್ಪೀಟ್ ಕಲಹ. ಆನಂದವೆಂದರೆ ಮಧುಸೇವನೆಯ ಮತ್ತು. ಹೀಗೆ ವಿಶ್ರಾಂತಿ ಕಾಲವನ್ನೂ ವ್ಯರ್ಥಮಾಡಿಕೊಂಡು ಪಶುವೃತ್ತಿಯಲ್ಲಿ ಬದುಕನ್ನೂ ಮುಗಿಸಿಕೊಳ್ಳುತ್ತಾರೆ. ಅಂಥವರು ಚೆನ್ನಾಗಿ ಬದುಕಲು ಮನಸ್ಸು ಮಾಡಿದರೆ ಅವರಿಂದ ಎಷ್ಟೋ ಸಮಾಜ ಸೇವೆ ನಡೆಯಬಹುದು! ಅವರ ಸುತ್ತಮುತ್ತ ಎಷ್ಟೋ ಸತ್ಪರಿಣಾಮ ಉಂಟಾಗಬಹುದು!

"ದೊಡ್ಡ ವಿಷಯಕ್ಕೆ ಮನಸ್ಸು ಕೊಡುವ ಅಭ್ಯಾಸವನ್ನು ಚಿಕ್ಕಂದಿನಿಂದ ಮಾಡಿಕೊಳ್ಳಬೇಕು. ಪ್ರಕೃತಿ ಎಲ್ಲೆಲ್ಲೂ ಒಂದೊಂದು ಪುಸ್ತಕವನ್ನು ತೆರೆದಿಟ್ಟೆ

ದ್ದಾಳೆ. ನಮ್ಮಲ್ಲಿರಬೇಕಾದದ್ದು ತೆರದ ಕಣ್ಣು. ಈ ಪೆನ್‌ಷನ್‌ದಾರರೂ ಪುಷ್ಟರಾದ ವಕೀಲರೂ ಆಕಾಶದ ಕಡೆ ನೋಡಬಾರದೆ? ನಕ್ಷತ್ರ ಗ್ರಹಗಳ ಗಾತ್ರಗಳನ್ನೂ ವರ್ಣಗಳನ್ನೂ ಅವುಗಳ ಸಂಚಾರ ಮಾರ್ಗಗಳನ್ನೂ ತಿಳಿದು ಕೊಳ್ಳಬಾರದೆ? ಎಂಥ ಅದ್ಭುತವಾದ ಶಾಸ್ತ್ರ ಖಗೋಳವಿಜ್ಞಾನ!

"ವಿಜ್ಞಾನಶಾಸ್ತ್ರಗಳು ಬುದ್ಧಿಯ ಶ್ರಮವನ್ನು ಬೇಡುತ್ತವೆ. ಅವರು ಅಷ್ಟು ಶ್ರಮಪಡಲಾರರೇನೋ! ಅದು ಹೋಗಲಿ. ಚೆನ್ನಾಗಿ ಅಡಿಗೆ ಮಾಡು ವುದನ್ನಾದರೂ ಕಲಿತು ಹತ್ತು ಜನ ಇಷ್ಟಮಿತ್ರರಿಗೆ ಆಗಾಗ ಔತಣ ಮಾಡ ಬಾರದೆ? ನಮ್ಮ [ಎಸ್. ಜಿ. ಅವರ] ತಂದೆ ಸೊಗಸಾಗಿ ಅಡಿಗೆ ಮಾಡುತ್ತಿ ದ್ದರು. ಆಗಾಗ ಅವರ ಸ್ನೇಹಿತರನ್ನು ಸೇರಿಸಿಕೊಂಡು ವನಭೋಜನ ಏರ್ಪಡಿಸ ಬೇಕು. ಬೇಕಾದ ತಿಂಡಿ ಮಾಡಿ, ಪಾಕ ಪರಿಕವಣೆಯಿಂದ ಸಂತೋಷ ಪಡಿಸುತ್ತಿದ್ದರು. ಅದು ಎಂಥ ನಿರ್ಮಲವಾದ ಮತ್ತು ಗಾಢವಾದ ಸಂತೋಷ! ಇಂಥ ಸಂತೋಷಗಳು ಹೆಚ್ಚು ವೆಚ್ಚವಿಲ್ಲದೆ ದೊರೆಯುವುದು ಸಾಧ್ಯವಾಗಿರು ವಾಗ ನಮ್ಮ ಹಿರಿಯ ಜನ ಅದನ್ನು ಬಿಟ್ಟು ಕುಡಿತದಲ್ಲಿ ಕಾಲಹರಣ ಮಾಡು ತ್ತಾರಲ್ಲ!"

ಈ ರೀತಿಯಾಗಿ ಒಂದು ಹತ್ತು ನಿಮಿಷ ಎಸ್. ಜಿ. ನರಸಿಂಹಾಚಾರ್ಯರು ಮಾತನಾಡಿದರು. ಅವರ ಅಂತರಂಗ ಎಷ್ಟು ಶುಚಿಯಾದದ್ದು ಎಂಬುದು ಇದರಿಂದ ಗೊತ್ತಾಗುತ್ತದೆ.

ಎಸ್. ಜಿ. ನರಸಿಂಹಾಚಾರ್ಯರ ಬಾಲ್ಯದಲ್ಲಿಯೇ ಅವರ ತಂದೆ ಅಳ ಸಿಂಗರಾಚಾರ್ಯರು ತೀರಿಕೊಂಡರು. ಅವರು ಶ್ರೀರಂಗಪಟ್ಟಣದ ನರಸಿಂಹ ಸ್ವಾಮಿ ದೇವಸ್ಥಾನದಲ್ಲಿ ಕೈಂಕರ್ಯ ಮಾಡುತ್ತಿದ್ದರು. ಅವರು ಸಾಹಿತ್ಯ ಪಂಡಿತರು. ಹಿರಿಯ ವೈದ್ಯರು. ಭಸ್ಮಗಳನ್ನೂ ಕುಪ್ಪಿಗೆ ಮಾತ್ರೆಗಳನ್ನೂ ಮಾಡಿ ಅನೇಕ ರೋಗಿಗಳಿಗೆ ವಾಸಿಮಾಡುತ್ತಿದ್ದರು. ಅಡಿಗೆ ಕೆಲಸದಲ್ಲಿ ನಿಸ್ಸೀಮರು. ಅವರ ಮನೆ ದೊಡ್ಡ ಛತ್ರ. ಬಂದವರಿಗೆ ಮಲಗುವುದಕ್ಕೆ ಕೂಡ ಚಾಪೆಗಳೂ, ಪಾರಿವಾಣದ ತಲೆದಿಂಬುಗಳೂ ಯಾವಾಗಲೂ ಸಿದ್ಧ.

ಎಸ್. ಜಿ. ನರಸಿಂಹಾಚಾರ್ಯರು ಪಂಡಿತರೂ ಹೌದು, ರಸಿಕರೂ ಹೌದು. ಆದರೆ ಅವರ ಸಹವಾಸದಲ್ಲಿದ್ದವರಿಗೆ ವಿಶೇಷವಾಗಿ ಕಾಣಬರು ತ್ತಿದ್ದದ್ದು ಅವರ ಸರಸತೆ. ಅವರ ಪಾಂಡಿತ್ಯವೇನಿದ್ದರೂ ಪ್ರೌಢ ಗ್ರಂಥ ಗಳನ್ನು ಪರೀಕ್ಷಿಸುವುದರಲ್ಲಿಯೂ ಪರಿಷ್ಕಾರಗೊಳಿಸುವುದರಲ್ಲಿಯೂ ವಿನಿ ಯುಕ್ತವಾಗುತ್ತಿತ್ತು.

'ಕರ್ನಾಟಕ ಕವಿಚರಿತ್ರೆ'ಯ ಮೊದಲನೆಯ ಸಂಪುಟದ ರಚನೆಯಲ್ಲಿ ಆರ್. ನರಸಿಂಹಾಚಾರ್ಯರೂ, ಎಸ್. ಜಿ. ನರಸಿಂಹಾಚಾರ್ಯರೂ ಸಮ ಸಮವಾಗಿ ಸಹಕರಿಸಿದ್ದರು. ಎಸ್. ಜಿ. ನರಸಿಂಹಾಚಾರ್ಯರ ಕೈವಾಡವು ಆ ಗ್ರಂಥದಲ್ಲಿ ಪೂರ್ವಕವಿಗಳನ್ನು ಕುರಿತ ಯೋಗ್ಯತಾಸೂಚಕ ವಾಕ್ಯಗಳಲ್ಲಿ ಕಾಣಬರುತ್ತದೆ. ಎರಡು ಮೂರು ಆರಿಸಿದ ಮಾತುಗಳಲ್ಲಿ ಕವಿಯ ವಿಶೇಷ ಗುಣವನ್ನು ಎತ್ತಿ ತೋರಿಸುವ ಸೂಕ್ಷ್ಮಗ್ರಹಣ ಕುಶಲತೆ ಎಸ್. ಜಿ. ಅವರದು. ಅವರ ಮಾತುಗಳು ತೂಗಿಸಿ ತೂಗಿಸಿ ಆರಿಸಿದಂಥವು. ಆರ್. ನರಸಿಂಹಾ ಚಾರ್ಯರದು ವಿಸ್ತಾರವಾದ ವಿದ್ವತ್ತು; ಅದ್ಭುತವಾದ ನಾನಾ ಗ್ರಂಥ ಪರಿಚಯ; ಅವರು ಸಂಸ್ಕೃತ ಕನ್ನಡ ತಮಿಳು ತೆಲುಗುಗಳನ್ನು ಆಳವಾಗಿ ಶೋಧಿಸಿ ನೋಡಿದ್ದವರು. ಎಸ್. ಜಿ. ನರಸಿಂಹಾಚಾರ್ಯರದಾದರೋ ರಸೈಕದೃಷ್ಟಿ.

ಎಸ್. ಜಿ. ನರಸಿಂಹಾಚಾರ್ಯರೂ ನಾಟಕದ ವರದಾಚಾರ್ಯರೂ ಆಪ್ತಸ್ನೇಹಿತರು. ವರದಾಚಾರ್ಯರಿಗೆ ಹತ್ತಾರು ಕಂದಪದ್ಯಗಳನ್ನೂ ಹಾಡು ಗಳನ್ನೂ ಎಸ್. ಜಿ. ಅವರು ರಚನೆಮಾಡಿಕೊಟ್ಟಿದ್ದರು. ಕೆಲಮಂದಿ ಸ್ನೇಹಿತರ ಬೇಡಿಕೆಯಂತೆ ಎಸ್. ಜಿ.ಯವರು ಒಂದು ಕಾಮನ ಹಬ್ಬದ ಹಾಡನ್ನು ಕಟ್ಟಿದ್ದರು. ಅದನ್ನು ಹಾಡಿದ್ದನ್ನುನಾನೂ ಕೇಳಿದ್ದೇನೆ. ಅದರಲ್ಲಿ ಅಶ್ಲೀಲಾಂಶ ವೇನೂ ಇಲ್ಲದೆ ಕಥಾಮಾಧುರ್ಯ ತುಂಬಿತ್ತು. ಮಾತುಗಳು ಸುಕುಮಾರ ವಾದವುಗಳಾಗಿ ರಸಗರ್ಭಿತಗಳಾಗಿದ್ದುವು. ಅದು ಒಂದು ಅಪೂರ್ವ ಛಂದ ಸ್ಸಿನಲ್ಲಿದ್ದಂತೆ ನನಗೆ ತೋರಿತು. ಅದರದು ಮಂದಗತಿಯ ಧಾಟಿ. ನಾನು ಅದರ ಕೆಲಕೆಲವು ಪಾದಗಳನ್ನು ಕೇಳಿದ್ದೇನೆಯೇ ಹೊರತು ಸಂಪೂರ್ಣವಾಗಿ ಕೇಳಿಲ್ಲ. ಆ ಹಾಡು ಅಚ್ಚಾಗಿಲ್ಲ. ಆ ಹಾಡನ್ನು ಬಲ್ಲವರು ಯಾರಾದರೂ ಇದ್ದಲ್ಲಿ ಅವರು ಅದನ್ನು ಬರೆದುಕೊಟ್ಟರೆ ಅದರಿಂದ ನಮ್ಮ ಸಾಹಿತ್ಯಕ್ಕೆ ಉಪಕಾರವಾದೀತು. ಬಿ. ವೆಂಕಟಾಚಾರ್ಯರು ಬಂಕಿಮ ಚಂದ್ರರ ಬಂಗಾಳಿ ಯಿಂದ 'ವಿಷವೃಕ್ಷ' ಎಂಬ ಪ್ರಸಿದ್ಧ ಕಾದಂಬರಿಯನ್ನು ಕನ್ನಡಿಸಿದ್ದಾರಷ್ಟೆ? ಅದರಲ್ಲಿ ಬರುವ "ಶರಣು ಕಮಲೆಯ ಚರಣಕೆ" ಎಂಬ ಹಾಸ್ಯದ ಹಾಡು ಎಸ್. ಜಿ. ನರಸಿಂಹಾಚಾರ್ಯರ ಕೃತಿ ಎಂದು ನಾನು ಕೇಳಿದ್ದೇನೆ.

ಎಸ್. ಜಿ. ನರಸಿಂಹಾಚಾರ್ಯರ ಗ್ರಂಥಗಳು ಈಗ ಓದುಗರಿಗೆ ದೊರೆ ಯುತ್ತಿಲ್ಲ. ಅವರ ಬರವಣಿಗೆಯಲ್ಲಿ ಅಚ್ಚಾಗಿರುವಷ್ಟು ಭಾಗವನ್ನು ಸಂಗ್ರಹ ಮಾಡಿ ಪ್ರಕಟಿಸಿದರೆ ಸುಮಾರು ೩೦೦–೪೦೦ ಪುಟಗಳಷ್ಟಾಗಬಹುದು. ಅಷ್ಟ

ನ್ನಾದರೂ ಪ್ರಕಟಗೊಳಿಸಿದರೆ ಅದು ಒಂದು ಸಾಹಿತ್ಯರತ್ನವೆಂದು ಅಂಗೀಕೃತವಾಗುವುದೆಂದು ನನಗೆ ನಂಬಿಕೆಯುಂಟು.

ಮೂವತ್ತು ನಲವತ್ತು ವರ್ಷಗಳ ಹಿಂದೆ ಪ್ರಚಾರದಲ್ಲಿದ್ದ 'ಪದ್ಯಸಾರ' ಎಂಬ ಗ್ರಂಥವನ್ನು ಸಂಕಲನ ಮಾಡಿದ್ದವರೂ ಎಸ್. ಜಿ. ನರಸಿಂಹಾಚಾರ್ಯ ರೆಂದು ನಾನು ಕೇಳಿದ್ದೇನೆ. ನಮ್ಮ ಪುರಾತನ ಕಾವ್ಯಗಳ ಸಾರಭಾಗಗಳನ್ನು ಅಂಥ ಸೂಕ್ಷ್ಮವೇದಿತೆಯಿಂದ ವಿಮರ್ಶೆನೆಮಾಡಿ ಆರಿಸಬಲ್ಲವರು ಬೇರೆ ಯಾರಿದ್ದಾರು? ಆ ಪದ್ಯಗಳಲ್ಲಿಯ ಸ್ವಾರಸ್ಯ ಎಸ್. ಜಿ. ನರಸಿಂಹಾಚಾರ್ಯರ ಸೂಕ್ಷ್ಮಾಭಿರುಚಿಗೆ ನಿದರ್ಶನವಾಗಿದೆ.

ಕನ್ನಡದ ಜೀರ್ಣೋದ್ಧಾರ ಪ್ರಸ್ತಾವದಲ್ಲಿ 'ಕರ್ಣಾಟಕ ಕಾವ್ಯಮಂಜರಿ', 'ಕರ್ಣಾಟಕ ಕಾವ್ಯ ಕಲಾನಿಧಿ'—ಈ ಎರಡು ಮಾಸ ಪುಸ್ತಕಗಳು ಮಾಡಿದ ಸೇವೆಯನ್ನು ಸ್ಮರಿಸದಿರುವುದು ಕೃತಘ್ನತೆಯಾಗುತ್ತದೆ. ಆ ಪತ್ರಿಕೆಗಳನ್ನು ನಡಸುತ್ತಿದ್ದವರು ಶ್ರೀ ಎಂ. ಎ. ರಾಮಾನುಜಯ್ಯಂಗಾರ್ಯರು ಮತ್ತು ಎಸ್. ಜಿ. ನರಸಿಂಹಾಚಾರ್ಯರು—ಇಬ್ಬರೂ ಸೇರಿ. ರಾಮಾನುಜಯ್ಯಂಗಾರ್ಯರದು ನಿಶಿತ ಪಾಂಡಿತ್ಯ. ಅವರೂ ಸೂಕ್ಷ್ಮದೃಷ್ಟಿಯ ವಿಮರ್ಶಕರು. ಅವರೂ ಸಂಪ್ರದಾಯನಿಷ್ಠರು ಮತ್ತು ಭಗವದ್‌ಭಕ್ತರು; ನಡೆನುಡಿಗಳಲ್ಲಿ ಕಟ್ಟುನಿಟ್ಟುಳ್ಳವರು; ಗಂಭೀರ ಸ್ವಭಾವದವರು.

'ಕಾವ್ಯ ಮಂಜರಿ'ಯು ಪ್ರಾಚೀನ ಕಾವ್ಯಗಳನ್ನು ಭಾಗಭಾಗವಾಗಿ ಪ್ರಕಟಮಾಡುತ್ತಿತ್ತು. ಅದಕ್ಕಾಗಿ ಗ್ರಂಥಗಳ ತಾಳಪತ್ರ ಪ್ರತಿಗಳನ್ನೂ ಇತರ ಪುರಾತನಲಿಪಿಗಳನ್ನೂ ಪತ್ತೆಮಾಡಿ ತಂದುಕೊಳ್ಳುವ ಪ್ರಯಾಸವೂ, ಅವುಗಳನ್ನು ಶೋಧಿಸಿ, ಲುಪ್ತವಾಗಿಹೋಗಿದ್ದ ಭಾಗಗಳನ್ನು ಊಹೆಯಿಂದ ಕೂಡಿದಮಟ್ಟಿಗೆ ಸೂಚಿಸಿ, ಅಕ್ಷರಸ್ಖಾಲಿತ್ಯಗಳನ್ನು ಕಂಡುಹಿಡಿದು ಪರಿಷ್ಕಾರಗೊಳಿಸಿ ಮುದ್ರಣಕ್ಕೆ ಸಿದ್ಧಪಡಿಸುವ ಪ್ರಯಾಸವೂ ಎಂಥವೆಂಬುದು ಅಂಥ ಕೆಲಸದ ಅನುಭವವುಳ್ಳವರಿಗೇ ತಿಳಿಯಲಾಗತಕ್ಕದ್ದು. ಅದು ವರ್ಣಿಸಲಾಗದ ಶ್ರಮ; ನಿದ್ದೆ ಕೆಡಿಸಿ, ಊಟ ಬೇಡವೆನಿಸಿ, ತಲೆನೋವು ತರುವಂಥ ಶ್ರಮ. ಅದನ್ನು ಇಷ್ಟದಿಂದ ಪಟ್ಟ ಮೊದಲನೆಯ ಕನ್ನಡದ ಉಪಕಾರಿಗಳು ರಾಮಾನುಜಯ್ಯಂಗಾರ್ಯರು ಮತ್ತು ಎಸ್. ಜಿ. ನರಸಿಂಹಾಚಾರ್ಯರು.

'ಕಾವ್ಯಕಲಾನಿಧಿ'ಯಲ್ಲಿಯೂ ಪ್ರಾಚೀನ ಗ್ರಂಥಗಳು ಪ್ರಕಟವಾಗುತ್ತಿದ್ದವು. 'ಕರ್ನಾಟಕ ಗ್ರಂಥಮಾಲೆ'ಯಲ್ಲಿ "ಆಧುನಿಕ" (ಎಸ್. ಜಿ. ಅವರು ನನ್ನನ್ನು ಕ್ಷಮಿಸಲಿ!) ವಚನ ಪ್ರಬಂಧಗಳೂ ಪದ್ಯ ಪ್ರಬಂಧಗಳೂ ಬರು

ತ್ತಿದ್ದವು. ರಾಮಾನುಜಯ್ಯಂಗಾರ್ಯರ ಕವಿಸಮಯೋಪನ್ಯಾಸಗಳು ಮೊದಲು ಪ್ರಕಟವಾದದ್ದು ಈ ಪತ್ರಿಕೆಯಲ್ಲಿಯೇ ಇರಬಹುದೆಂದು ನನ್ನ ಜ್ಞಾಪಕ. ರಾಮಾನುಜಯ್ಯಂಗಾರ್ಯರ ವಾಕ್ಯಶೈಲಿ ಅಚ್ಚುಕಟ್ಟಾದದ್ದು. ವಿಷಯವನ್ನು ನಿಷ್ಕೃಷ್ಟ ರೀತಿಯಲ್ಲಿ ಪ್ರತಿಪಾದಿಸುವ ಜ್ಞಾನಸಂಪತ್ತೂ ವಾಕ್ಸಾಮರ್ಥ್ಯವೂ ಅವರ ಪಾಲಿಗೆ ಬಂದಿದ್ದವು. 'ಮಂಜರಿ', 'ಕಲಾನಿಧಿ'ಗಳೆರಡರ ಸಂಪಾದನೆ ಯಲ್ಲಿಯೂ ಎಸ್. ಜಿ. ನರಸಿಂಹಾಚಾರ್ಯರ ಕೈಕೆಲಸ ಶೋಭಾಕರ ವಾಗಿತ್ತು. ಅವರ ಸಹಾಯವಿಲ್ಲದಿದ್ದಲ್ಲಿ ಆ ಕೆಲಸ ಅಷ್ಟು ಚೆನ್ನಾಗಿ ಸಾಗು ತ್ತಿರಲಿಲ್ಲವೆಂಬುದು ಅವರ ಸಹೋದ್ಯೋಗಿಗಳ ಅಭಿಪ್ರಾಯ.

ಎಸ್. ಜಿ. ನರಸಿಂಹಾಚಾರ್ಯರು ದೊಡ್ಡ ಹುದ್ದೆಗೆ ಹತ್ತಿದ್ದವರಲ್ಲ. ಸರಕಾರದ ವಿದ್ಯಾ ಇಲಾಖೆಯಲ್ಲಿ ಟ್ರಾನ್ಸ್‌ಲೇಟರ್ (ಭಾಷಾಂತರಕಾರ) ಆಗಿದ್ದವರು. ಆ ಕೆಲಸಕ್ಕೆ ಈಗ Secretary, Textbook Committee ಎಂದು ಹೆಸ ರಾಗಿದೆ. ಆ ಹುದ್ದೆಯ ಸಂಬಳ ಆಗ ಸುಮಾರು ೧೫೦ರ ಮಟ್ಟದಲ್ಲಿದ್ದಿರ ಬಹುದು. ಆದರೆ ಅದು ಸಣ್ಣದೆಂದು ಅವರು ಭಾವಿಸಿದ್ದಂತೆ ಎಂದೂ ತೋರ ಲಿಲ್ಲ. ಸರ್ವದಾ ಸಂತೋಷ ಶಾಂತಿಗಳಿಂದ ತುಂಬಿ ನಡೆದುಕೊಳ್ಳುತ್ತಿದ್ದರು. ಹೊರಕ್ಕೆ ನಿರಾಡಂಬರವಾದ ಜೀವನ; ಒಳಗೆ ಸರಸ್ವತೀ ಸೌಭಾಗ್ಯ ತೃಪ್ತಿ. ಕೆಲಸದಿಂದ ನಿವೃತ್ತರಾಗಬೇಕಾದ ವಯಸ್ಸಿಗೆ ಬಹಳ ಮುಂಚೆಯೇ, ಕೇವಲ ೪೩ನೆಯ ವಯಸ್ಸಿನಲ್ಲೇ, ಅವರ ಆಯುಸ್ಸು ಮುಗಿಯಿತು (ಡಿಸೆಂಬರ್ ೧೯೦೭).

ಎಸ್. ಜಿ. ನರಸಿಂಹಾಚಾರ್ಯರ ಮಗ ರಂಗಸ್ವಾಮಿ ಎಂಬಾತ ಇದ್ದರು. ಅವರೂ ಬಿ.ಎ., ಪಟ್ಟ ಪಡೆದು ಸೆಕ್ರೆಟೇರಿಯಟ್‌ನಲ್ಲಿ ಉದ್ಯೋಗದಲ್ಲಿದ್ದರು. ತಂದೆಯಂತೆ ಸೌಮ್ಯ ಸ್ವಭಾವದವರು ಮತ್ತು ಸರಸ ಕಾವ್ಯಪ್ರಿಯರು.ಅವರೂ ಚಿಕ್ಕವಯಸ್ಸಿನಲ್ಲಿಯೇ ತೀರಿಕೊಂಡರು.

ಎಸ್. ಜಿ. ನರಸಿಂಹಾಚಾರ್ಯರ ತಮ್ಮಂದಿರು ಶ್ರೀ ಎಸ್. ಜಿ. ಗೋವಿಂದ ರಾಜಯ್ಯಂಗಾರ್ಯರು ಈಗ್ಗೆ (೧೯೫೩) ಹತ್ತು ವರ್ಷಗಳ ಹಿಂದಿನವರೆಗೂ ಇದ್ದರು. ಇವರು ತಾಯಿ ಸೀತಮ್ಮನವರ ಪೋಷಣೆಯಲ್ಲಿ ಪ್ರವರ್ಧಮಾನಕ್ಕೆ ಬಂದರು. ಭಸ್ಮಗಳು ಕುಪ್ಪಿಗೆ ಮಾತ್ರೆಗಳು ಇವುಗಳ ತಯಾರಿಕೆಯಲ್ಲಿ ಒತ್ತಾಸೆ ಮಾಡುತ್ತಿದ್ದದ್ದರಿಂದ ತಾಯಿಯ ಎರಡು ಕಣ್ಣುಗಳೂ ಹೋದವು. ಕುರುಡು ತಾಯಿಯೇ ಅಡಿಗೆ ಮಾಡುತ್ತಿದ್ದರು. ಅದಕ್ಕಿಂತ ಆಶ್ಚರ್ಯ ಎಲೆ ಹಚ್ಚು ತ್ತಿದ್ದರು. ಎಸ್. ಜಿ. ಜಿ. ಕಂಟೋನ್ಮೆಂಟಿನ ರೆಸಿಡೆನ್ಸಿಯಲ್ಲಿ ಗುಮಾಸ್ತರಾಗಿ

ದ್ದರು. ಆದರೆ ಸಾಹಿತ್ಯವ್ಯಾಸಂಗದಲ್ಲಿ ಅಣ್ಣಂದಿರ ಅನುಯಾಯಿಗಳು. ಅವರಿಗೆ ಪದ್ಯರಚನೆಯ ಶಕ್ತಿ ಸಹಜವಾಗಿ ಬಂದಿತ್ತು. 'ತಾಮಸ ಪ್ರಭು ಚರಿತಂ', 'ಗೋದಾಸ್ತವ', 'ಪ್ರೋಷಿತ ಪ್ರಿಯ ಸಮಾಗಮಂ' (The Hermit ಎಂಬ ಕವನದ ಅನುವಾದ, ೪೦ ಕಂದ ಪದ್ಯಗಳಲ್ಲಿದೆ) ಮೊದಲಾದ ಪದ್ಯ ಗ್ರಂಥಗಳನ್ನೂ 'ಪ್ರಿಂರೋಜ ವಿಜಯ' (ವಿಕಾರ್ ಆಫ್ ವೇಕ್ ಫೀಲ್ಡ್) ಮೊದಲಾದ ಗದ್ಯ ಗ್ರಂಥಗಳನ್ನೂ ಬರೆದಿದ್ದಾರೆ. 'ಉತ್ತರರಾಮ ಚರಿತೆ'ಯ ೩-೪ ಅಂಕಗಳು ಇವರಿಂದ ಅನುವಾದವಾಗಿ 'ಕರ್ನಾಟಕ ಗ್ರಂಥಮಾಲೆ' ಯಲ್ಲಿ ಅಚ್ಚಾಗಿರುವಂತೆ ತಿಳಿದುಬರುತ್ತದೆ. ಇವರು ಸ್ವಭಾವದಲ್ಲಿ ಸಾಧುಗಳು. ಇಂದಿನ "ಹೊಸ" ಹೊಸಗನ್ನಡದ ದಾರಿಗಳನ್ನು ನೋಡಿ ಅವರಿಗೆ ಮನಸ್ಸಿನಲ್ಲಿ ಕೊಂಚ ಕೆರಳಿಕೆ ಬಂದಿತ್ತು. "ಭಾಷೆ ಹೊಸ ಮಾರ್ಗಗಳನ್ನು ಹಿಡಿಯಲಿ; ಅದನ್ನು ಯಾರೂ ಬೇಡವೆನ್ನುವುದಿಲ್ಲ. ಆದರೆ ಆ ಮಾರ್ಗಗಳಿಗಾದರೂ ಒಂದು ನಿಯಮ, ಒಂದು ಕಟ್ಟುಪಾಡು. ಇರಬೇಡವೆ? ಹಳೆಯ ಮಾರ್ಗಗಳೆಲ್ಲ ತಪ್ಪೆ? ಅದರಲ್ಲೇನಿದೆ ಎಂಬುದನ್ನಾದರೂ ಈಗಿನವರು ನೋಡಿ ತಿಳಿದುಕೊಳ್ಳಬೇಡವೆ?" ಎಂದು ಪೇಚಾಡುತ್ತಿದ್ದರು.

ಎಸ್. ಜಿ. ನರಸಿಂಹಾಚಾರ್ಯರ ಛಾಯಾಚಿತ್ರ (ಫೋಟೋ) ಎಲ್ಲಿಯಾದರೂ ಇದ್ದೀತೆ, ಎಂದು ಬಹುಕಾಲದಿಂದ ಹುಡುಕುತ್ತಿದ್ದೇನೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅದು ಇಲ್ಲ. ಅವರ ಬಂಧುಗಳಲ್ಲಿಯೂ ಸ್ನೇಹಿತರಲ್ಲಿಯೂ ಯಾರಾದರೂ ಅವರ ಛಾಯಾಚಿತ್ರವನ್ನು ಇಟ್ಟುಕೊಂಡಿದ್ದರೆ ಅವರು ಅದನ್ನು ನಾಡಿಗೆ ದೊರಕಿಸಿಕೊಡಬೇಕೆಂದು ಬೇಡಿಕೊಳ್ಳುತ್ತೇನೆ.

ಎಸ್. ಜಿ. ನರಸಿಂಹಾಚಾರ್ಯರ ಸ್ಮರಣೆ ನನ್ನ ಪಾಲಿಗೆ ಗುರುಸ್ಮರಣೆ. ಅದರಿಂದ ಚಿತ್ತಶುದ್ಧಿ, ಮನಶ್ಶಾಂತಿ.

೬

## ೬. ಚ. ವಾಸುದೇವಯ್ಯನವರು

ಆರ್. ನರಸಿಂಹಾಚಾರ್ಯರ ಹೆಸರನ್ನೆತ್ತಿದೊಡನೆಯೇ ಚ. ವಾಸುದೇವಯ್ಯನವರ ಹೆಸರು ನೆನಪಿನ ಮೇಲಕ್ಕೆ ಬರುತ್ತದೆ. ಅವರಿಬ್ಬರೂ ಸಭೆ ಸಮಾರಂಭಗಳಿಗೆ ಜೊತೆಯಾಗಿ ಬರುತ್ತಿದ್ದರು. ಜೊತೆಯಲ್ಲಿ ಕೂಡುತ್ತಿದ್ದರು. ಅತಿಶಯವಾದ ಪ್ರೇಮ ಗೌರವಗಳಿದ್ದವು ಅವರಿಬ್ಬರ ನಡುವೆ. ಹುದ್ದೆಯಲ್ಲಿ ವ್ಯತ್ಯಾಸವಿತ್ತು. ವಾಸುದೇವಯ್ಯನವರು ವಿದ್ಯಾಪ್ರಚಾರ ಇಲಾಖೆಯ ಆಫೀಸಿನ ಮ್ಯಾನೇಜರ್ ಆಗಿದ್ದು ನಿವೃತ್ತರಾಗಿದ್ದರು. ವ್ಯಾಕರಣಾದಿ ಶಾಸ್ತ್ರಪಾಂಡಿತ್ಯದಲ್ಲಿಯೂ ಇಬ್ಬರಿಗೂ ವ್ಯತ್ಯಾಸವಿತ್ತು. ಆದರೆ ನರಸಿಂಹಾಚಾರ್ಯರು ಈ ವ್ಯತ್ಯಾಸಗಳನ್ನು ನೆನಪಿನಲ್ಲಿರಿಸಿಕೊಂಡಿದ್ದಂತೆ ಒಂದು ಕ್ಷಣಮಾತ್ರವೂ ಎಂದೂ ಯಾರಿಗೂ ತೋರಿರಲಿಲ್ಲ. ಸಮಾನಸ್ಕಂಧರಂತೆಯೇ ಇದ್ದರು.

ಎಸ್. ಜಿ. ನರಸಿಂಹಾಚಾರ್ಯರು, ಎಂ. ಎ. ರಾಮಾನುಜಯ್ಯಂಗಾರ್ಯರು, ರಾ. ನರಸಿಂಹಾಚಾರ್ಯರು, ದೇ|| ಅಳಸಿಂಗರಾಚಾರ್ಯರು—ಇವರುಗಳ ಮನೆಮಾತು ತಮಿಳು. ಅವರು ಮಂಡಯಂ ಶ್ರೀವೈಷ್ಣವ ಬ್ರಾಹ್ಮಣ ಪಂಗಡದವರು. ಚ. ವಾಸುದೇವಯ್ಯನವರು, ಎಚ್. ವಿ. ನಂಜುಂಡಯ್ಯನವರು, ಬೆಳ್ಳಾವೆ ವೆಂಕಟನಾರಣಪ್ಪನವರು, ಟಿ. ಎಸ್. ವೆಂಕಣ್ಣಯ್ಯನವರು—ಇವರುಗಳ ಮನೆಮಾತು ತೆಲುಗು.

ವಾಸುದೇವಯ್ಯನವರನ್ನು ಕುರಿತು ನಾನು ಬೇರೆ ಕಡೆ ಒಂದೆರಡು ಸಲ ಪ್ರಸ್ತಾವಮಾಡಿದ್ದೇನೆ. ಆದರೂ ಅವರನ್ನು ಕುರಿತು ತಕ್ಕಷ್ಟು ಹೇಳಿದ್ದೇನೆಂದು ನನಗನ್ನಿಸಿಲ್ಲ. ಅವರ ಮಹಿಮೆ ಅಷ್ಟು ಘನವಾದದ್ದು ಮತ್ತು ಬಹುಮುಖವಾದದ್ದು.

### ವ್ಯಕ್ತಿಜೀವನ—ಕಲಾಕೃತಿ

ಒಂದು ಕಲಾಕೃತಿಗೂ ಅದರ ಕರ್ತನಿಗೂ ಅಂತರಂಗಿಕವಾದ ಕಾರ್ಯಕಾರಣ ಸಂಬಂಧವುಂಟೆ ? ಈ ವಿಚಾರದಲ್ಲಿ ವಿಪುಲವಾಗಿ ಚರ್ಚೆ ನಡೆದಿದೆ. ಕಲಾಕರ್ತನ ಜೀವನ ಎಂಥಾದ್ದಾದರೆ ನಮಗೇನು ? ಅವನು ಕೊಳಕನಾಗಲಿ, ಕುಡುಕನಾಗಲಿ, ಕೆಟ್ಟವನಾಗಲಿ, ಕುಲಗೇಡಿಯಾಗಲಿ, ಅದು ನಮಗೆ ಪ್ರಸಕ್ತ

ವಾದ ವಿಷಯವಲ್ಲ. ನಮಗೆ ಪ್ರಸಕ್ತವಾಗಿರತಕ್ಕದ್ದು ಅವನ ಕೃತಿ. ಅವನ ಕೃತಿ ನಮಗೆ ಮೆಚ್ಚಿಕೆಯಾದರೆ ಅವನ ಅಂತರ್ಗೃಹ (Private) ಜೀವನವನ್ನು ನಾವು ಗಣಿಸಬೇಕಾಗಿಲ್ಲ. ಹೀಗೆಂಬುದು ಒಂದು ವಾದ.

ಇದಕ್ಕೆ ಪ್ರತಿಯಾದದ್ದು ಇನ್ನೊಂದು ವಾದ. ಚಿತ್ರ ಚೆನ್ನಾಗಿ ಬರೆದ ರೇನು? ಹಾಡು ಚೆನ್ನಾಗಿ ಹಾಡಿದರೇನು? ಕಥೆ ಸ್ವಾರಸ್ಯವುಳ್ಳದ್ದಾದರೇನು? ಇದೆಲ್ಲ ಸೊಗಸಿರಬಹುದು. ಆದರೆ ಮನೆಯ ಜೀವನ ಹೊಲಸಾಗಿದ್ದರೆ ಅಂಥವನ ಕಲಾಕೃತಿಗೆ ಹೆಚ್ಚು ಬೆಲೆ ಸಲ್ಲಲಾರದು. ಇದು ಒಂದು ವಾದ.

ಈ ವಾದಗಳಲ್ಲಿ ಒಂದು ಭಾಗವನ್ನು ಸಾಮಾನ್ಯ ಕಲಾಕೃತಿಯ ವಿಷಯದಲ್ಲಿ ಒಪ್ಪಿದರೂ ಒಪ್ಪಬಹುದು. ಕಲಾಕೃತಿಯಲ್ಲಿ ಎರಡು ಜಾತಿಗಳುಂಟು: ಒಂದು ಸಾಮಾನ್ಯ ಮನೋರಂಜನೆಯದು; ಇನ್ನೊಂದು ಜೀವಸ್ಪರ್ಶಿಯಾದದ್ದು. ಮನೋರಂಜನಪ್ರಧಾನವಾದ ಕಲಾಕೃತಿಯಕರ್ತನು ಮಡಿಯುವನೋ ಮೈಲಿಗೆಯವನೋ, ಅದು ನಮಗೆ ಅಷ್ಟು ಅವಶ್ಯವಲ್ಲ. ಆದರೆ ಯಾವ ಕೃತಿಯಿಂದ ನಾವು ಒಂದು ಜೀವಪರಿಷ್ಕರಣವನ್ನು ಅಪೇಕ್ಷಿಸುತ್ತೇವೋ ಆ ಕಲಾಕೃತಿಯನ್ನು ರಚಿಸಿದವನು ತಪಸ್ವಿಯಾಗಿರಬೇಕು. 'ಮೇಘಸಂದೇಶ'ವನ್ನು ಬರೆದವನು ಎಂಥವನೋ ನಾವು ಕೇಳಬೇಕಾಗಿಲ್ಲ. ಆದರೆ 'ರಾಮಾಯಣ'ವನ್ನು ಬರೆದಾತನು—

ವಾಲ್ಮೀಕಿರ್ಭಗವಾನ್ಯಷಿಃ ॥

ಈ ನನ್ನ ಅಭಿಪ್ರಾಯವನ್ನೊಪ್ಪುವವರು ವಾಸುದೇವಯ್ಯನವರ ವ್ಯಕ್ತಿ ಜೀವನಕ್ಕೂ ಅವರ ಗ್ರಂಥಕ್ಕೂ ಇರುವ ಸಾಮೀಪ್ಯಕ್ಕೆ ನಿದರ್ಶನ ಕಾಣುವರು.

ಒಂದು ಪರಿಶುದ್ಧವಾದ ಜೀವನದ ಕುಸುಮಸೌರಭವೇ 'ಆರ್ಯಕೀರ್ತಿ' 'ಭೀಷ್ಮಚರಿತೆ'ಗಳಂಥ ಗ್ರಂಥ. ಲೇಖಕರ ಅಂತರಂಗದ ಧ್ಯೇಯಗಳೂ ತತ್ತ್ವನಿಷ್ಠೆಗಳೂ ಅವರ ಗ್ರಂಥಗಳಲ್ಲಿ ಹೊರಹೊಮ್ಮಿರುತ್ತವೆ.

## 'ಆರ್ಯಕೀರ್ತಿ'

'ಆರ್ಯಕೀರ್ತಿ' ಗ್ರಂಥ ಮೊದಲು ಪ್ರಕಟವಾದದ್ದು ನನ್ನ ಬಾಲ್ಯಕ್ಕೆ ಹಿಂದೆಯೇ ಎಂದು ತೋರುತ್ತದೆ. ಮೊದಲ ಸಾರಿ ಅದನ್ನು ಓದಿದವರ ಮನಸ್ಸಿನ ಮೇಲೆ ಅದರ ವಾಕ್ಯಪ್ರಭಾವವು ಒಂದು ಅದ್ಭುತವೆಂದು ತೋರಿರಬೇಕು. ಬಹುಮಂದಿ ಆ ಶೈಲಿಗೆ ಮನಸೋತು, ಅದನ್ನನುಕರಿಸಲು ಪ್ರಯತ್ನ

ಮಾಡಿದರು. ನಾನು ಕೆಲವು ವರ್ಷಗಳ ಕಾಲ ವಿದ್ಯಾ ಇಲಾಖೆಯ ಪಂಡಿತ ಪರೀಕ್ಷೆಯಲ್ಲಿ ಪರೀಕ್ಷಕನಾಗಿದ್ದೆ. ಆಗಿನ ಪ್ರಬಂಧರಚನೆಯ ಪರೀಕ್ಷೆಯಲ್ಲಿ ಒಪ್ಪಿಸಲಾದ ಹತ್ತಾರು ಪ್ರಬಂಧಗಳನ್ನು ನೋಡಿದ್ದೇನೆ. ಇತರ ಸಂಘ ಸಂಸ್ಥೆಗಳು ಏರ್ಪಡಿಸಿದ ಅನೇಕ ಪ್ರಬಂಧಲೇಖನ ಸ್ಪರ್ಧೆಗಳಲ್ಲಿಯೂ ಭಾಷಣ ಸ್ಪರ್ಧೆಗಳಲ್ಲಿಯೂ ತೀರ್ಪುಗಾರನಾಗಿ ಕೆಲಸಮಾಡಿದ್ದೇನೆ. ಈ ನನ್ನ ಅನುಭವ ಗಳಲ್ಲಿ ನನಗೆ ಚೆನ್ನಾಗಿ ಕಣ್ಣಿಗೆ ಬಂದಿದೆ—ವಾಸುದೇವಯ್ಯನವರ ಶೈಲಿ ಬಹು ಜನರ ಮನಸ್ಸನ್ನು ಹಿಡಿದಿದೆಯೆಂದು. "ಸ್ವದೇಶಪ್ರೀತಿಯನ್ನು ಗುರುತರ ಧರ್ಮವೆಂದೆಣಿಸಿ...." ಇದು 'ಆರ್ಯಕೀರ್ತಿ'ಯ ಪ್ರಾರಂಭ ವಾಕ್ಯ. ಎಷ್ಟೋ ಜನ ಇದನ್ನು ತಮ್ಮ ಲೇಖನ ಭಾಷಣಗಳಲ್ಲಿ ಬಳಸಿದ್ದಾರೆ. ಕೆಲವರು ಉಂಡುಂಡೆ ಯಾಗಿ, ಕೆಲವರು ಚೂರುಚೂರಾಗಿ. ಇಂಥ ಅನುಕರಣೆ ಸ್ವಾಭಾವಿಕವಾ ದದ್ದು. ಅದನ್ನು ನಾನು ಒಂದು ದೋಷವೆನ್ನಲಾರೆ. ಅದೇ ಕಲಿತುಕೊಳ್ಳುವ ದಾರಿ. ಹೀಗೆ ವಾಸುದೇವಯ್ಯನವರು ಕನ್ನಡ ವಚನ ಶೈಲಿಗೂ ಮಾದರಿ ಯಾಗಿದ್ದಾರೆ.

## 'ಕನ್ನಡ ಬಾಲಬೋಧೆ'

ಅವರು ರಚಿಸಿದ ಗ್ರಂಥಗಳಲ್ಲಿ ಅತಿಮುಖ್ಯವಾದದ್ದಾಗಿ ಈಚೆಗೆ ಸರಕಾರದ ಆದರಣೆಯನ್ನು ಕಳೆದುಕೊಂಡಿರುವ ಪುಸ್ತಕ 'ಕನ್ನಡ ಬಾಲಬೋಧೆ'. ಈ ಪುಸ್ತಕವನ್ನು ಪಾಠಶಾಲೆಯ ಉಪಯೋಗದಿಂದ ತಪ್ಪಿಸಿದ್ದು ಭಾಷಾ-ಬೋಧನೆಗೆ ಮೂಲದಲ್ಲಿ ಕೊಡಲಿಯಿಟ್ಟಂತಾಗಿದೆ. ಯಾರ ಮೇಲಿನ ದ್ವೇಷಾ ಸೂಯೆಗಳೋ ಇನ್ನಾರಮೇಲೋ ಬಿದ್ದು ನಷ್ಟವು ದೇಶದ ಬಾಲ ವಿದ್ಯಾರ್ಥಿ ಗಳಿಗೂ ಭಾಷೆಗೂ ತಪ್ಪದ್ದಾಗಿದೆ.

ಬೆಂಗಳೂರು ಸೆಂಟ್ರಲ್ ಕಾಲೇಜಿನ ಮೊದಮೊದಲಿನ ಬಿ.ಎ. ಪದವೀ ಧರರಲ್ಲಿ ಶ್ರೀನಿವಾಸರಾಯರೆಂಬವರೊಬ್ಬರು. ಇವರು ಕೆಲವು ಕಾಲ ಉಪಾ ಧ್ಯಾಯರಾಗಿದ್ದು ಬಳಿಕ ಬಿ.ಎಲ್. ಪ್ಯಾಸ್‌ಮಾಡಿ ನೆಲ್ಲೂರಿನಲ್ಲಿ ವಕೀಲ ರಾಗಿದ್ದರು. ಮೊದಮೊದಲಿನ 'ಕನ್ನಡ ಬಾಲಬೋಧೆ'ಯನ್ನು ರಚಿಸಿದವರಲ್ಲಿ ಒಂದು ಭಾಗದ ಲೇಖಕರು ಈ ಶ್ರೀನಿವಾಸರಾಯರು. ಇನ್ನೊಂದು ಭಾಗದ ಲೇಖಕರು ವಾಸುದೇವಯ್ಯನವರು. ಈ ಬಾಲಬೋಧೆಗಳನ್ನು ಮೂಲೆಗೆ ತಳ್ಳಿದ್ದಕ್ಕೆ ಯಾರು ಜವಾಬ್ದಾರರೋ! ಅವರು ಯಾರಾದರಾಗಲಿ, ಅವರು ಅವಶ್ಯವಾದದ್ದನ್ನು ಮಾಡಿದವರಲ್ಲ, ಹಿತಕರವಾದದ್ದನ್ನು ಮಾಡಿದವರೂ

ಅಲ್ಲ; ಅಕಾರಣವಾಗಿ ಮಲ್ಲಿಗೆಯನ್ನು ಆಚೆಗೆ ನೂಕಿ ಅದರ ಜಾಗದಲ್ಲಿ ಲಾಂಟಾನಾ ಹೂವನ್ನು ತಂದಿಟ್ಟವರು.

ಶುದ್ಧ ಭಾಷಾಭಿಮಾನಿಗಳು ವಾಸುದೇವಯ್ಯನವರ 'ಬಾಲಬೋಧೆ' ಯನ್ನೂ ಎಸ್. ಜಿ. ನರಸಿಂಹಾಚಾರ್ಯರ 'ಪದ್ಯಸಂಗ್ರಹ', 'ಪದ್ಯಸಾರ' ಗಳನ್ನೂ ವಿದ್ಯಾ ಇಲಾಖೆಯಲ್ಲಿ ಅವಶ್ಯ ಪಠ್ಯಪುಸ್ತಕಗಳಾಗುವಂತೆ ಮಾಡ ಬೇಕೆಂದು ನಾನು ಕೈಮುಗಿದು ಬೇಡುತ್ತೇನೆ.

## ಮಿತ್ರವರ್ಗ

ವಾಸುದೇವಯ್ಯನವರು ವಿಶ್ವೇಶ್ವರಯ್ಯನವರಿಗೆ ಮೇಷ್ಟರಾಗಿದ್ದರಂತೆ. ವಿಶ್ವೇಶ್ವರಯ್ಯನವರು ಆಗಾಗ ಅವರ ಮನೆಗೆ ಹೋಗಿ ಯೋಗಕ್ಷೇಮ ವಿಚಾರಿಸಿಕೊಂಡು ಬರುತ್ತಿದ್ದರು. ನನ್ನನ್ನೂ ಒಂದೆರಡು ಸಲ ಕೇಳಿದ್ದು ಜ್ಞಾಪಕವಿದೆ, ವಾಸುದೇವಯ್ಯನವರು ಹೇಗಿದ್ದಾರೆಂದು.

ವಿದ್ಯಾ ಇಲಾಖೆಯ ಅಧ್ಯಕ್ಷರಾಗಿ ವಾಸುದೇವಯ್ಯನವರಿಗೆ ಮೇಲಧಿಕಾರಿ ಯಾಗಿದ್ದ ಎಚ್. ಜೆ. ಭಾಭಾರವರು ವಾಸುದೇವಯ್ಯನವರಲ್ಲಿಟ್ಟಿದ್ದ ಪ್ರೀತಿ ಗೌರವಗಳನ್ನು ನಾನು ಕಣ್ಣಾರ ಕಂಡಿದ್ದೇನೆ. ಭಾಭಾ ಸಾಹೇಬರು ವಾಸು ದೇವಯ್ಯನವರ ಜನ್ಮದಿನವನ್ನು ಗುರುತುಮಾಡಿರಿಸಿಕೊಂಡು ಪ್ರತಿವರ್ಷವೂ ಆ ದಿವಸ ಅವರ ಕೈಗೆ ತಲುಪುವಂತೆ ಒಂದುನೂರು ರೂಪಾಯಿಗಳನ್ನು ಕಳುಹಿಸುತ್ತಿದ್ದರಂತೆ.

ಸರ್ ಎಂ. ಎನ್. ಕೃಷ್ಣರಾಯರವರಿಗೂ ವಾಸುದೇವಯ್ಯನವರಲ್ಲಿ ತುಂಬ ಭಕ್ತಿಯಿತ್ತು.

ಡೆಪ್ಯುಟಿ ಇನ್‌ಸ್ಪೆಕ್ಟರ್ ಜನರಲ್ ಆಗಿದ್ದ ಬಿ. ದಾಸಪ್ಪನವರಿಗೂ ನನಗೂ ಗುರುಶಿಷ್ಯರಂತೆ ಭಾವನೆಯಿತ್ತು. ಭಾನುವಾರ ಭಾನುವಾರವೂ ಮಧ್ಯಾಹ್ನ ಎರಡು ಗಂಟೆಗೆ ನಾನು ದಾಸಪ್ಪನವರ ಮನೆಗೆ ಹೋಗಬೇಕು. ತಿಂಡಿ ಕಾಫಿ ಆದಮೇಲೆ ಷೇಕ್‌ಸ್ಪಿಯರ್‌ನಿಂದಲೋ ಗಿಬ್ಬನ್ನನ ಚರಿತ್ರ ಗ್ರಂಥದಿಂದಲೋ ಕೆಲವು ಭಾಗವನ್ನು ನಾನು ಅವರಿಗೆ ಓದಬೇಕು. ಅದು ನಾಲ್ಕು–ನಾಲ್ಕೂವರೆ ಘಂಟೆಯವರೆಗೆ. ಬಳಿಕ ನಾವಿಬ್ಬರೂ ಅವರ ಗಾಡಿಯಲ್ಲಿ ಮಲ್ಲೇಶ್ವರಕ್ಕೆ ವಾಸುದೇವಯ್ಯನವರ ಮನೆಗೆ ಹೋಗಬೇಕು. ಅಲ್ಲಿ ಸಂಜೆ ಆರು–ಆರೂವರೆ ಘಂಟೆಯವರೆಗೆ. ವಾಸುದೇವಯ್ಯನವರ ಮನೆಯಲ್ಲಿ ಕುರ್ಚಿ ಸೋಫ ಮೊದ ಲಾದ ಪರಿಕರಗಳಿಗೆ ಅಭಾವ. ನಾವು ಸಾಮಾನ್ಯವಾಗಿ ಮನೆಯ ಪೂರ್ವ

ಪಾರ್ಶ್ವದಲ್ಲಿದ್ದ ಖಾಲಿ ಜಾಗದಲ್ಲಿ ಯಾವುದೋ ಗಿಡಗಳ ನೆರಳಿನಲ್ಲಿ ಬಟ್ಟೆ ಯೊಗೆಯುವ ಬಂಡೆಗಳ ಮೇಲೆಯೋ ಕಲ್ಲು ದಿಮ್ಮಿಗಳ ಮೇಲೆಯೋ ಕೂಡು ತ್ತಿದ್ದೆವು. ವಾಸುದೇವಯ್ಯನವರಿಗೆ ಅತ್ಯಂತ ಪ್ರಿಯರಾದ ಚೀಫ್ ಇಂಜಿನಿ ಯರ್ ಶರಭೋಜಯ್ಯಂಗಾರ್ಯರೂ ಇರುತ್ತಿದ್ದರು. ಎಂ. ಎನ್. ಕೃಷ್ಣ ರಾಯರೂ ಆಗಾಗ ನಮ್ಮೊಡನೆ ಸೇರುತ್ತಿದ್ದದ್ದುಂಟು ಅಲ್ಲಿ. ಹೀಗೆ ಐದಾರು ಮಂದಿ ಮಾತುಕಥೆಯಲ್ಲಿ ಕಾಲಕಳೆಯುತ್ತಿದ್ದೆವು. ವಾಸುದೇವಯ್ಯನವರು ಪ್ರಾಸ್ತಾವಿಕವಾಗಿ 'ಭಾರತ'ದಿಂದಲೋ 'ಭಾಗವತ'ದಿಂದಲೋ ಒಂದೆರಡು ಪದ್ಯ ಉದಾಹರಿಸಿ ನಮ್ಮ ಮಾತಿಗೆ ಕಳೆ ಕೊಡುತ್ತಿದ್ದರು.

ವಾಸುದೇವಯ್ಯನವರು ಬಹುಮಾತಿನವರಲ್ಲ; ಸಂದರ್ಭಕ್ಕೆ ತಕ್ಕಂತೆ ಮಿತವಾಗಿ ಒಂದೆರಡು ಮಾತನ್ನಾಡುವರು. ಪ್ರಸಕ್ತ ವಿಷಯದಲ್ಲಿ ಅಡಗಿದ ತತ್ವದ ಮೇಲೆ ಅವರ ಗಮನ.

## ಕಡೆಯ ದಿನಗಳು

ವಾಸುದೇವಯ್ಯನವರ ಅವಸಾನ ದಿನಕ್ಕೆ ಸುಮಾರು ಒಂದು ತಿಂಗಳ ಹಿಂದೆ ಅವರ ಮನೆಗೆ ಹೋಗಿದ್ದೆ. ತಾವು ಮಲಗಿದ್ದ ಮಂಚದ ಮೇಲೆ ಸ್ವಲ್ಪ ಹಿಂದಕ್ಕೆ ಸರಿದು ಅಲ್ಲಿಯೇ ಅವರಿಗೆ ಅಂಟಿಕೊಂಡಂತೆ ಹತ್ತಿರ ಕುಳಿತು ಕೊಳ್ಳುವಂತೆ ಅವರು ಹೇಳಿದರು. ಅವರಿಗೆ ತೊಂಬತ್ತರ ಮೇಲಾಗಿತ್ತು ವಯಸ್ಸು. ಮೈಯೆಲ್ಲ ತಲೆಯಿಂದ ಕಾಲಿನ ವರೆಗೂ ಆಗತಾನೆ ತೊಳೆದಂತೆ ಚೊಕ್ಕಟವಾಗಿತ್ತು. ಅವರ ಮೈ ಚಿನ್ನದ ಬಣ್ಣ. ಮನಸ್ಸಿಗೆ ಉದ್ರೇಕವಾದಾಗ ಅದು ಅಪರಂಜಿ ಬಣ್ಣಕ್ಕೆತಿರುಗುವುದು. ಕೊಳಕಿನ ಸೂಚನೆ ಮೈಮೇಲಾಗಲೀ ಬಟ್ಟೆಗಳ ಮೇಲಾಗಲೀ ರವೆಯಷ್ಟೂ ಇರಲಿಲ್ಲ. ಶುಭ್ರವಾಗಿ ತೇಜೋವಿಶಿಷ್ಟ ವಾಗಿದ್ದ ಮೂರ್ತಿ. ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು. ನಾನು ಒಂದು ಸಾಹಸಮಾಡಿದೆ:—"ನಿಮಗೆ ಕಾಲ ಹೇಗೆ ಕಳೆಯುತ್ತದೆ?"— ಎಂದು ಕೇಳಿದೆ. ಅವರು ಹೇಳಿದರು:

"ಅದೇನು ಕಷ್ಟ? ರಾತ್ರಿಯೆಲ್ಲ ಆಗಾಗ ಎಚ್ಚರವಾಗುತ್ತದೆ. ಆಗ ಗಡಿಯಾರದ ಸದ್ದು ಕೇಳಿಸುತ್ತದೆ. ನಾಲ್ಕು ಘಂಟೆ ಹೊಡೆದಾಗ 'ಓಹೋ ಇನ್ನೇನು ಕಾಫಿ ಬಂದೀತು' ಎಂದುಕೊಳ್ಳುತ್ತೇನೆ. ಒಂದೆರಡು ಕ್ಷಣ ದೇವರ ಸ್ಮರಣೆ ಮಾಡುವ ಹೊತ್ತಿಗೆ ಯಾರಾದರೊಬ್ಬರು ಬಿಸಿನೀರು ತರುತ್ತಾರೆ. ಬಚ್ಚಲವರೆಗೆ ಕರೆದುಕೊಂಡು ಹೋಗುತ್ತಾರೆ. ಮುಖ ಪ್ರಕ್ಷಾಳನವಾದ

ಮೇಲೆ ಬಿಸಿಬಿಸಿ ಕಾಫಿ. ಹತ್ತು ನಿಮಿಷ ಸುಧಾರಿಸಿಕೊಂಡು ಬಳಿಕ ಶ್ರೀವಿಷ್ಣು ಸಹಸ್ರನಾಮ ಹೇಳುತ್ತೇನೆ. ಅಲ್ಲಿಗೆ ಆರು ಘಂಟೆಯಾಗುತ್ತದೆ. ಆಮೇಲೆ ಆದಿತ್ಯಹೃದಯ ಹೇಳುತ್ತೇನೆ. ಅಷ್ಟರೊಳಗಾಗಿ ಮನೆಯವರು ಬಂದು ವಿಚಾರಿಸಿಕೊಳ್ಳುತ್ತಾರೆ. ಬಳಿಕ ಸ್ನಾನ. ಆ ವೇಳೆಗೆ ಏಳೂವರೆ ಎಂಟು ಘಂಟೆಯಾಗುತ್ತದೆ. ಅನಂತರ ಹಾಸಿಗೆಯ ಮೇಲೆ ಮಲಗಿಕೊಂಡೇ ಸಂಧ್ಯಾವಂದನೆ ಹೇಳಿ ಒಂದು ನೂರು ಗಾಯತ್ರಿ ಮಾಡುತ್ತೇನೆ. ಕುಳಿತು ಸಂಧ್ಯಾವಂದನೆ ಮಾಡಲಾರೆ. ಈ ದುರ್ಬಲ ಸಂಧ್ಯಾವಂದನೆ ಮುಗಿಯುವ ವೇಳೆಗೆ ಇನ್ನೊಂದು ಸಾರಿ ಕಾಫಿ ಬರುತ್ತದೆ. 'ಈ ಹೊತ್ತು ಏನು ಅಡಿಗೆ?' ಎಂದು ವಿಚಾರಿಸುತ್ತೇನೆ, ಬಾಯಿ ಚಪ್ಪರಿಸಿಕೊಂಡು. ಊಟದ ಹೊತ್ತಿನವರೆಗೂ ಪಾಕ ಪರಿತವಣೆಗಳ ಯೋಚನೆ. ಅಷ್ಟರಲ್ಲಿ ನಮ್ಮ ಶರಭೋಜಯ್ಯಂಗಾರ್ಯರೋ ಬೇರೆ ಸ್ನೇಹಿತರೋ ಬರುತ್ತಾರೆ. ಹನ್ನೊಂದು ಘಂಟೆಯವರೆಗೆ ಮಾತುಕಥೆ ನಡೆಯುತ್ತದೆ. ಆಮೇಲೆ ಊಟ.

"ಊಟವಾದ ಮೇಲೆ ಪಕ್ಕದ ಗೂಡಿನಲ್ಲಿರುವ ಪುಡಿ ಒಂದು ಚಮಚದಷ್ಟು ಬಾಯಲ್ಲಿ ಹಾಕಿಕೊಂಡು ನೀರು ಕುಡಿಯುವುದು. ಇದು ಜೀರ್ಣಕ್ಕಾಗಿ. ಆಮೇಲೆ ಹತ್ತು ಹದಿನೈದು ನಿಮಿಷ ಬಿಟ್ಟು ಇನ್ನೊಂದು ಪುಡಿ—ಇದು ಮೂಲವ್ಯಾಧಿಯ ಉಪಶಮನಕ್ಕಾಗಿ. ಆಮೇಲೆ ಅರ್ಧ ಮುಕ್ಕಾಲು ಘಂಟೆ ವಿಶ್ರಾಂತಿ. ಸುಮಾರು ಒಂದು ಘಂಟೆಗೆ ಎಚ್ಚರವಾಗುತ್ತದೆ. ಆಗ 'ಮಹಾಭಾರತ'ದಿಂದ ಎರಡು ಮೂರು ಸಂಧಿ ಹೇಳಿಕೊಳ್ಳುವುದು, ಸ್ತೋತ್ರಪಾಠ ಹೇಳುವುದು.

"ಮೂರು ಘಂಟೆಯ ಸುಮಾರಿಗೆ ಸ್ವಲ್ಪ ಕಾಫಿ ಅಥವಾ ನೀರು. ಆ ವೇಳೆಗೆ ಸ್ನೇಹಿತರು ಬರುತ್ತಾರೆ. ಆ ಸುದ್ದಿ ಈ ಸುದ್ದಿ ತರುತ್ತಾರೆ. ಸಂಜೆ ಆರು ಘಂಟೆಯವರೆಗೂ ಹೀಗೆ ಕಾಲ ಕಳೆಯುತ್ತದೆ. ಬಳಿಕ ಸಾಯಂ ಸಂಧ್ಯಾವಂದನೆಯ ನೆಪ. ಹಸಿವಾದರೆ ಒಂದು ಬಟ್ಟಲು ಹಾಲು. ಆಗದಿದ್ದರೆ ಒಂದು ಲೋಟ ನೀರು. ಮತ್ತೆ ಕಣ್ಣು ಮುಚ್ಚುವುದು. ನಿದ್ರೆ ಬಂದಷ್ಟು ಬರಲಿ. ಬಾರದಿದ್ದಾಗ ನಾನು ತಿಂದಿರುವ ತಿಂಡಿಗಳನ್ನು ಕುರಿತು ಧ್ಯಾನಮಾಡಿ ಬಾಯಿ ಚಪ್ಪರಿಸುವುದು. ಮಾರನೆಯ ದಿನ ಸಿಕ್ಕಬಹುದಾದ ತಿಂಡಿತೀರ್ಥಗಳನ್ನು ಕುರಿತು ಚಿಂತಿಸಿ ಸಂತೋಷಪಡುವುದು. ಇವೆರಡೂ ಬೇಸರವಾದರೆ ಇದ್ದೇ ಇದೆ, ರಾಮ-ಕೃಷ್ಣ-ಗೋವಿಂದ.

"ಹೀಗೆ ಕಳೆಯುತ್ತಿದೆ ಸ್ವಾಮಿ ಕಾಲ."

ಅವರೂ ನಗುತ್ತಿದ್ದರು. ಕೇಳಿದವರಿಗೂ ನಗು ಬಂತು.

ವಾಸುದೇವಯ್ಯನವರ ಜ್ಞಾಪಕಶಕ್ತಿ ಕಡೆಯವರೆಗೂ ಕುಗ್ಗದೆ, ಮಂಕು ಕವಿಯದೆ ಇತ್ತು.

ನಾನು ಹೊರಡಲು ಅಪ್ಪಣೆ ಬೇಡಿ ಎದ್ದೆ. ಅವರು "ಹೊರಡಬೇಕೆ ?" ಎಂದರು. ನಾನು, ಒಂದೆರಡು ವಾರ ಬಿಟ್ಟು ಮತ್ತೆ ಬರುವುದಾಗಿ ಹೇಳಿ ಹೊರಟೆ. ಹದಿನೈದಿಪ್ಪತ್ತು ದಿನಗಳಾದಮೇಲೆ ಅವರ ಮೊಮ್ಮಗ ಒಬ್ಬಾತ ನನ್ನ ಮನೆಗೆ ಬಂದು "ನೀವು ತಾತನಿಗೆ ಹೇಳಿದ್ದಿರಂತೆ ಮತ್ತೆ ಬರುತ್ತೇನೆಂದು. ಹದಿನೈದು ದಿವಸವಾಯಿತು ಎಂದು ಅವರು ಜ್ಞಾಪಕ ಮಾಡಿಕೊಂಡರು. ನಿಮಗೆ ತಿಳಿಸಬೇಕೆಂದು ಹೇಳಿದರು" ಎಂದ.

ಈ ಮಾತು ನನ್ನನ್ನು ಎಚ್ಚರಿಸಿತು. ನಾನು ಆ ದಿನವೇ ಮಧ್ಯಾಹ್ನದ ಮೇಲೆ ಅವರಲ್ಲಿಗೆ ಹೋದೆ. ಆ ಹದಿನೈದು ದಿನದಲ್ಲಿ ಅವರ ಸ್ಥಿತಿಯಲ್ಲಿ ಯಾವ ವ್ಯತ್ಯಾಸವೂ ನನಗೆ ಕಾಣಿಸಲಿಲ್ಲ. ಈ ಸಾರಿಯ ಮಾತು ಕೊಂಚ ಕಡಮೆಯಾಗಿತ್ತು. ನಾನು ಹದಿನೈದಿಪ್ಪತ್ತು ನಿಮಿಷ ಇದ್ದು ಹೊರಟುಬಂದೆ. ಅನಂತರ ಐದಾರು ದಿವಸಕ್ಕೆ ಅವರ ಕಾಲ ಮುಗಿಯಿತು.

## ನಿಃಸ್ಪೃಹತೆ

ವಾಸುದೇವಯ್ಯನವರ ನಿಃಸ್ಪೃಹತೆಯ ವಿಷಯದಲ್ಲಿ ನಾನು ಅನೇಕ ಉದಾಹರಣೆಗಳನ್ನು ಕೇಳಿದ್ದೇನೆ. ಅವರದು ಭಾರಿ ಕುಟುಂಬ. ಬಂಧುಬಳಗ ಹೆಚ್ಚಾಗಿದ್ದರು. ಎಲ್ಲರ ಭಾರವನ್ನೂ ಅವರೇ ಹೊತ್ತಿದ್ದರು. ಒಂದು ಸಾರಿ ಯಾವುದೋ ಗೃಹಕೃತ್ಯಕ್ಕಾಗಿ ಒಬ್ಬ ವೈಶ್ಯ ಸಾಹುಕಾರನಲ್ಲಿ ಎರಡು ಸಾವಿರ ರೂಪಾಯಿ ಸಾಲ ತೆಗೆದು ತಮ್ಮ ಮನೆಯನ್ನು ಆಧಾರ ಮಾಡಿ ಕೊಟ್ಟಿದ್ದರು. ನಾಲ್ಕೈದು ವರ್ಷ ಕಳೆದ ಮೇಲೆ ವಾಸುದೇವಯ್ಯನವರಿಗೆ ಆ ಸಾಲ ತೀರಿಸಬೇಕೆಂದು ಮನಸ್ಸು ಬಂದಿತು. ಭಾಭಾ ಸಾಹೇಬರು ಒಂದಾನೊಂದು ತಾತಾ ಕಂಪೆನಿಯಲ್ಲಿ ಅವರಿಗೆ ಕೊಡಿಸಿದ್ದ ಷೇರುಗಳನ್ನು ಮಾರಿ ಆ ವೈಶ್ಯ ಸಾಹುಕಾರನಲ್ಲಿಗೆ ತೆಗೆದುಕೊಂಡು ಹೋದರು. ಆತ "ನಾನೇನು ನಿಮ್ಮನ್ನು ಅವಸರಪಡಿಸಲಿಲ್ಲವಲ್ಲ ?" ಎಂದು ಉಪಚಾರ ನುಡಿದ. ವಾಸುದೇವಯ್ಯನವರು "ಋಣ ತೀರಿಸುವುದು ನನ್ನ ಕರ್ತವ್ಯ. ಅವಸರಪಡಿಸದೆ ಇರುವುದು ನಿಮ್ಮ ಒಳ್ಳೆಯತನ. ನೀವು ಒಳ್ಳೆಯವರೆಂದು ನಾನು ಕರ್ತವ್ಯ ಮರೆಯತಕ್ಕದ್ದಲ್ಲ. ಬಡ್ಡಿ ಎಷ್ಟಾಗಿರಬಹುದು ?"—ಎಂದು ಕೇಳಿ ಆತ ಹೇಳಿ

ದಂತೆ ಎರಡು ಸಾವಿರದ ಎಂಟುನೂರು ರೂಪಾಯಿಗಳನ್ನು ಪಾವತಿ ಮಾಡಿದರು. ಆತ ಅವರಲ್ಲಿ ಅತ್ಯಂತ ಗೌರವವನ್ನಿಟ್ಟಿದ್ದವನು ; ಒಂದು ತಟ್ಟೆಯಲ್ಲಿ ತಾಂಬೂಲವನ್ನಿರಿಸಿ ಅದರಲ್ಲಿ ಬಡ್ಡಿ ಎಂಟುನೂರು ರೂಪಾಯಿಗಳನ್ನಿಟ್ಟು ಅದನ್ನು ಸ್ವೀಕರಿಸಬೇಕೆಂದು ಬೇಡಿಕೊಂಡ.

## ಮನೋದಾರ್ಢ್ಯ

ವಾಸುದೇವಯ್ಯನವರು ನನಗೆ ಹೇಳಿದ ಸಂಗತಿಗಳಲ್ಲಿ ಇನ್ನೊಂದು ಇದು. ಅವರನ್ನು ಬಾಲ್ಯದಲ್ಲಿ ಬೆಳಸಿದವರು ಅವರ ಅತ್ತಿಗೆಯಂತೆ. ತಮ್ಮ ತಾಯಿ ತೀರಿಹೋಗಿದ್ದದ್ದರಿಂದ ಈ ಅತ್ತಿಗೆಯೇ ತಾಯಿಯಾಗಿದ್ದರು. ಈಕೆ ಮುದುಕಿ. ತನಗೆ ಅವಸಾನ ಕಾಲ ಸಮೀಪಿಸಿದಾಗ ಆಕೆ ವಾಸುದೇವಯ್ಯನವರನ್ನು ಒಳಗೆ ಕರೆದು ಕೇಳಿದರು :

"ಅಪ್ಪಾ, ನನಗೆ ಒಂದು ಉಪಕಾರ ಮಾಡುತ್ತೀಯಾ ?"

ವಾಸುದೇವಯ್ಯನವರು : "ಅಮ್ಮ, ನನ್ನ ಬದುಕೆಲ್ಲ ನಿನ್ನದು. ನಾನು ಏನು ಮಾಡಿದರೆ ನೀನು ತೋರಿಸುವ ಅಭಿಮಾನ ವಾತ್ಸಲ್ಯಗಳ ಋಣ ತೀರೀತು ? ನೀನು ಏನು ಹೇಳಿದರೆ ಅದನ್ನು ಮಾಡಲು ನಾವೆಲ್ಲ ಸಿದ್ಧರಾಗಿದ್ದೇವೆ."

ವಾಸುದೇವಯ್ಯನವರಿಗೂ ಅಲ್ಲಿದ್ದ ಇತರರಿಗೂ ಕಣ್ಣುಗಳಲ್ಲಿ ನೀರು ತುಂಬಿತು. ಆಕೆ ಅಷ್ಟು ಯಾತನೆಪಡುತ್ತಿದ್ದರು. ಆಕೆ ಹೇಳಿದರು :

"ಅಪ್ಪಾ, ನಾಳೆ ಗೋಕುಲಾಷ್ಟಮಿ. ನಾನಾದರೋ ಏಳಲಾರೆ. ಸ್ನಾನವಿಲ್ಲ, ಪೂಜೆಯಿಲ್ಲ ಹೀಗೆ ಬಿದ್ದಿದ್ದೇನೆ. ನಾಳೆ ನನಗೆ ಹೊಟ್ಟೆಯಲ್ಲಿ ಸಂಕಟ ಇನ್ನೂ ಹೆಚ್ಚಬಹುದು. ನೀವು ಯಾರೂ ಅದಕ್ಕೋಸ್ಕರ ಕನಿಕರಪಟ್ಟು ನನಗೆ ಹಾಲನ್ನೋ ಹಣ್ಣನ್ನೋ ಬಾಯಿಗೆ ಹಾಕಬಾರದು. ನಾಳೆ ಬೆಳಗ್ಗೆ ನಾನು ಬದುಕಿದ್ದರೆ ಸ್ನಾನ ಮಾಡಿಸಿ ದೇವರ ತೀರ್ಥ ಬಾಯಿಗೆ ಹಾಕಿರಿ. ಅಷ್ಟೇ ನನಗೆ ಬೇಕಾದದ್ದು."

ಪೂರ್ವಿಕರ ಮನೋದಾರ್ಢ್ಯಕ್ಕೆ ಉದಾಹರಣೆಯಾಗಿ ವಾಸುದೇವಯ್ಯನವರು ಇದನ್ನು ಹೇಳಿದರು. ಇಂಥ ಮನೋದಾರ್ಢ್ಯವನ್ನೂ ಪವಿತ್ರ ಪ್ರಜ್ಞೆಯನ್ನೂ ಕಂಡು ಅನುಭವಿಸಿದ್ದವರು 'ಭೀಷ್ಮಚರಿತೆ'ಯನ್ನು ಬರೆಯುವುದರಲ್ಲಿ ಉತ್ಸುಕರಾದದ್ದು ಸ್ವಾಭಾವಿಕವೇ ಆಗಿದೆ. ಒಳ್ಳೆಯ ಬದುಕಿನಿಂದ ಒಳ್ಳೆಯ ಗ್ರಂಥ. 'ಭಗವದ್ಗೀತೆ'ಯ ಹನ್ನೆರಡನೆಯ ಅಧ್ಯಾಯದ

ಅದ್ವೇಷ್ಟಾ ಸರ್ವಭೂತಾನಾಂ
ಮೈತ್ರಃ ಕರುಣ ಏವ ಚ ॥
ನಿರ್ಮಮೋ ನಿರಹಂಕಾರಃ
ಸಮದುಃಖಸುಖಃ ಕ್ಷಮೀ ॥

ಇತ್ಯಾದಿ ಶ್ಲೋಕಗಳು ವಾಸುದೇವಯ್ಯನವರಿಗೆ ಅನ್ವಯಿಸುವಂತೆ ಅನ್ವಯಾರ್ಹರಾದ ಮಹಾಪುರುಷರು ಲೋಕದಲ್ಲಿ ಬೇರೆ ಯಾರಿದ್ದಾರೊ ನಾನರಿಯೆ. ವಾಸುದೇವಯ್ಯನವರಿಗೆ ಪರಮಪ್ರಿಯವಾಗಿದ್ದ ಗ್ರಂಥ 'ಕುಮಾರವ್ಯಾಸ ಭಾರತ'. ಅದರ ಒಂದು ಪದ್ಯ ವಾಸುದೇವಯ್ಯನವರನ್ನೇ ಕುರಿತದ್ದೆಂದೆನಿಸುತ್ತದೆ :

ಬೈಯರಾರನು ಬೈಯೆ ಕೇಳ್ವರು ।
ಅಯ್ಯ ಕೊಳಿರೆಂದೆನುತಲೀವರು ।
ಪ್ರಿಯವಚನವ ನುಡಿವರಾರಾಡೊಡೆಯು ಮನ್ನಿಸುತ ॥
ಮೈಯ ಮರೆವರು ಆತ್ಮಚಿಂತೆಯ_।
ಲೊಯ್ಯನೇ ಕಣ್ದೆರೆದು ಮುಚ್ಚುತ_।
ಲಯ್ಯನೆನಿಪರು ಜಗಕೆ ಇದು ಸಾಧುಗಳ ಗುಣವೆಂದ ॥

೭

## ಪಂಜೆ ಮಂಗೇಶರಾಯರು

ಕನ್ನಡ ಪುನರುಜ್ಜೀವನದ ಚರಿತ್ರೆಯಲ್ಲಿ ಅವಶ್ಯ ಸ್ಮರಣೀಯರಾದ ವಿದ್ವತ್ಸಜ್ಜನರಲ್ಲಿ ಪಂಜೆ ಮಂಗೇಶರಾಯರು ಮುಖ್ಯರು. ಅವರು ಸಾಹಿತ್ಯೋ-ತ್ಸಾಹದ ಕಾರಣದಿಂದಲೂ ಸೌಶೀಲ್ಯದ ಕಾರಣದಿಂದಲೂ ನೈಜವಾದ ಸ್ನೇಹತತ್ಪರತೆಯ ಕಾರಣದಿಂದಲೂ ಚಿರಸ್ಮರಣೀಯರಾಗಿದ್ದಾರೆ.

ಅವರ ಪರಿಚಯ ನನಗೆ ಆಗುವುದಕ್ಕೆ ಎಷ್ಟೋ ವರ್ಷಗಳ ಹಿಂದೆ ಅವರ ವಿಷಯವನ್ನು ನಾನು ಬಿ. ಎಂ. ಶ್ರೀಕಂಠಯ್ಯನವರ ಬಾಯಿಂದ ಕೇಳಿದ್ದೆ. ಶ್ರೀಕಂಠಯ್ಯನವರಿಗೆ ಪಂಜೆಯವರ ವಿಷಯದಲ್ಲಿ ಸಂತತವೂ ಗಾಢವೂ ಆದ ಅಭಿಮಾನ. ಪಂಜೆಯವರು 'ಕವಿಶಿಷ್ಯ' ಎಂಬ ನಾಮಾಂಕಿತದಿಂದ ಬರೆದಿದ್ದ ಅನೇಕ ಹಾಡುಗಳನ್ನು ಶ್ರೀಕಂಠಯ್ಯನವರು ಮೆಚ್ಚಿ ನನಗೆ ತೋರಿಸಿದ್ದರು. ಆದದ್ದರಿಂದ ಅವರನ್ನು ನೋಡಬೇಕೆಂಬ ಕುತೂಹಲ ನನ್ನಲ್ಲಿ ಪ್ರಬಲ ವಾಗಿತ್ತು.

### ಪ್ರಥಮ ಪರಿಚಯ

ನಾನು ಅವರನ್ನು ಮೊದಲ ಸಾರಿ ಕಂಡದ್ದು ಎಲ್ಲಿ, ಯಾವಾಗ ಎಂಬುದು ಈಗ ಮರೆತುಹೋಗಿದೆ. ಅದು ಬಹುಶಃ ೧೯೩೩–೩೪ರಲ್ಲಿ. ನಾನು ಮಂಗಳೂರಿಗೆ ಹೋಗಿದ್ದಾಗ ಪಂಜೆಯವರೂ ಆಗ ಆ ಊರಿಗೆ ಬಂದಿದ್ದ ರೆಂದು ವರ್ತಮಾನ ಕೇಳಿ ಅವರಿದ್ದ ಮನೆಗೆ ಹೋದೆ. ಮಧ್ಯಾಹ್ನ ಸುಮಾರು ಒಂದೂವರೆ ಘಂಟೆಯ ಸಮಯ. ಭೋಜನ ನಡೆಯುತ್ತಿತ್ತು. ಮಂಗೇಶ ರಾಯರಿಗೆ ನನ್ನ ಹೆಸರನ್ನು ಯಾರೋ ಹೋಗಿ ಹೇಳಿದರು. ಅವರು ಅಲ್ಲಿಂದಲೇ ಹೋ! ಎಂದು ಕೂಗಿ "ಬನ್ನಿ ಊಟಕ್ಕೆ, ಬಹು ಸೊಗಸಾಗ್ಯದೆ ಈ ಹೊತ್ತಿನ ಅಡಿಗೆ" ಎಂದು ಉತ್ಸಾಹದಿಂದ ಕರೆದರು. ನಾನು ಆಗತಾನೆ ನನ್ನ ಊಟ ಮುಗಿಸಿಕೊಂಡು ಅಲ್ಲಿಗೆ ಹೋಗಿದ್ದೆ. ಆ ಮಾತನ್ನು ಹೇಳಿ ಆ ಮನೆಯ ಮುಂದುಗಡೆಯ ಕೈಸಾಲೆಯಲ್ಲಿ ಹಾಯಾಗಿ ಕುಳಿತುಕೊಂಡೆ. ಅಲ್ಲಿ ವರ್ತ ಮಾನಪತ್ರಿಕೆಗಳೂ ಚಿತ್ರಪತ್ರಿಕೆಗಳೂ ಇದ್ದವು.

ಮಂಗೇಶರಾಯರು ಭೋಜನ ಮುಗಿಸಿಕೊಂಡು ಬಂದು ನನ್ನೊಡನೆ ಮಾತಿಗೆ ಕುಳಿತರು. ಆಗ ಅವರು ಖಾಯಂ ಆಗಿದ್ದ ಜಾಗ ಮಡಿಕೇರಿ ಎಂದು ನನ್ನ ಜ್ಞಾಪಕ. ಅಲ್ಲಿ ಅವರು ಹೈಸ್ಕೂಲಿನ ಹೆಡ್‌ಮಾಸ್ತರಾಗಿದ್ದರು. ಬೇಸಿಗೆ ರಜದಲ್ಲಿ ತಮ್ಮ ಊರಿಗೆ ಬಂದಿದ್ದರು. ನಾನು ಆಹೊತ್ತು ಯಾರು ಯಾರನ್ನು ನೋಡಬೇಕೆಂದು ಉದ್ದೇಶವಿಟ್ಟುಕೊಂಡಿದ್ದೆನೋ ಆ ಜಾಗಗಳಿಗೆಲ್ಲ ನನ್ನನ್ನು ಕರೆದುಕೊಂಡು ಹೋದವರು ಮಂಗೇಶರಾಯರು. ದಾರಿಯುದ್ದಕ್ಕೂ ವಿನೋದ, ಹಾಸ್ಯ, ನಡುನಡುವೆ ಸಾಹಿತ್ಯತತ್ತ್ವದ ವಿವರಣೆ, ಕವಿಕಾವ್ಯ ವಿಮರ್ಶೆ—ಹೀಗೆ ನಮ್ಮ ನಡಿಗೆಯ ದೂರವೆಷ್ಟೆಂಬುದು ನನಗೆ ತಿಳಿಯಲಿಲ್ಲ. ಬಳಲಿಕೆ ತೋರಲಿಲ್ಲ.

## ಮುಳಿಯ ತಿಮ್ಮಪ್ಪಯ್ಯನವರು

ಮೊದಲು ನಾವು ಹೋದದ್ದು ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರ ಮನೆಗೆ. ಆ ಮನೆ ಒಂದು ಗದ್ದೆಯ ನಡುವೆ ಇತ್ತೆಂದು ನನ್ನ ಜ್ಞಾಪಕ. ನನಗೆ ಅತ್ಯಂತ ಪ್ರಿಯರಾಗಿದ್ದ ವಿದ್ವಾನ್ ಕಡಂಗೋಡ್ಲು ಶಂಕರಭಟ್ಟರೂ ಆ ಮನೆಯಲ್ಲಿದ್ದರು. ಶಂಕರಭಟ್ಟರು ತಿಮ್ಮಪ್ಪಯ್ಯನವರ ಸೋದರಳಿಯಂದಿರೆಂದು ನನ್ನ ಜ್ಞಾಪಕ. ಶಂಕರಭಟ್ಟರು ರೂಪದಲ್ಲಿ ಕಾಂತಿವಂತರಾಗಿದ್ದರು. ವಿನಯಶೀಲರು. ಅವರ ಮಾತು ಮಿತಪದಗಳುಳ್ಳದ್ದಾಗಿ, ಪೊಳ್ಳುತನವಿಲ್ಲದೆ ಸಮಂಜಸವಾಗಿರುತ್ತಿತ್ತು. ಅವರ ಬರವಣಿಗೆಯನ್ನು ಅದಕ್ಕೆ ಮೊದಲೇ ನಾನು ನೋಡಿದ್ದೆ. ಅವರನ್ನು ನೋಡಿದ ಬಳಿಕ ಅವರಲ್ಲಿ ನನಗೆ ಮಮತೆಯುಂಟಾಯಿತು. ಶಂಕರಭಟ್ಟರು ಸಂಸ್ಕೃತದಲ್ಲಿ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದವರು.

ಮುಳಿಯ ತಿಮ್ಮಪ್ಪಯ್ಯನವರು ಮಹಾಪಂಡಿತರು—ಸಂಸ್ಕೃತ, ಕನ್ನಡ ಎರಡರಲ್ಲಿಯೂ. ಅವರ 'ನಾಡೋಜ ಪಂಪ' ಅವರ ಕೀರ್ತಿಯನ್ನು ಉಳಿಸುವ ಗ್ರಂಥ.

ತಿಮ್ಮಪ್ಪಯ್ಯನವರು ಸರಸಿಗಳು, ಉದಾರಿಗಳು. ಪಂಜೆ ಮಂಗೇಶರಾಯರು ಅವರನ್ನು ಕೊಂಚ ಕೊಂಚ ಲೇವಡಿ ಮಾಡುವರು.

"ಮುಳಿಯ ತಿಮ್ಮಪ್ಪಯ್ಯ—ತಿಮ್ಮಪ್ಪಯ್ಯ ಎಂದಿಗೂ ಮುನಿಸಿಕೊಳ್ಳ."

"ಮುಳಿಯದ ತಿಮ್ಮಪ್ಪಯ್ಯ."

"ಮುಳಿಯುವ ತಿಮ್ಮಪ್ಪಯ್ಯ."

"ಮುಳಿದಿರುವ ತಿಮ್ಮಪ್ಪಯ್ಯ."

ಹೀಗೆ ಬಗೆಬಗೆಯಾಗಿ ಅವರನ್ನು ಚೇಡಿಸಲು ಪ್ರಯತ್ನಿಸುವರು. ತಿಮ್ಮಪ್ಪಯ್ಯನವರು ಎಲ್ಲಕ್ಕೂ ನಗುತ್ತ ಗಂಭೀರದಿಂದಿರುವರು. ಮಂಗೇಶರಾಯರು ಶುದ್ಧ ಸಾಹಿತ್ಯ ಪ್ರಶ್ನೆಯೊಂದನ್ನೆತ್ತುವರು. ಆಗ ಹೊರಡುತ್ತಿತ್ತು ತಿಮ್ಮಪ್ಪಯ್ಯನವರ ವಾಕ್ಕು. ಅದು ಶಾಸ್ತ್ರವಿದ್ವತ್ತೆಯಿಂದ ಕೂಡಿದ ವಾಕ್ಕು.

ತಿಮ್ಮಪ್ಪಯ್ಯನವರು ಆಚಾರವಂತರು. ಗಂಭೀರಸ್ವಭಾವದವರು, ಸಾಧುಗಳು.

ನಾನು ಅವರ ಮನೆಗೆ ಹೋದ ಕೂಡಲೆ ಅಲ್ಲಿಯ ವಾಡಿಕೆಯಂತೆ ಬೆಲ್ಲ ನೀರು ಕೊಟ್ಟು ಉಪಚರಿಸಿದರು. ಸುಮಾರು ಒಂದೂವರೆ ಘಂಟೆಯ ಕಾಲ ಮಾತುಕಥೆಯಾಡುತ್ತಿದ್ದೆವು.

## ಬಾಲಸಾಹಿತ್ಯ ಮಂಡಲ

ಅಲ್ಲಿಂದ ಮಂಗೇಶರಾಯರು ಬಾಲಸಾಹಿತ್ಯ ಮಂಡಲದ ಕಾರ್ಯಾಲಯಕ್ಕೆ ನನ್ನನ್ನು ಕರೆದುಕೊಂಡು ಹೋದರು. ಅಲ್ಲಿ ಉಗ್ರಾಣ ಮಂಗೇಶರಾಯರು, ಉಲ್ಲಾಳ ಮಂಗೇಶರಾಯರು ಮೊದಲಾದ ಹೆಸರಾಂತ ಸಾಹಿತಿಗಳು ನನಗೆ ದೊರಕಿದರು. ಪಂಜೆಯವರು "ಓಹೋ—ಇಲ್ಲಿ ನೋಡಿರಿ ಮಂಗ ಸಭೆ!" ಎಂದರು. ಅಲ್ಲಿದ್ದವರೆಲ್ಲ ಎಷ್ಟು ನಕ್ಕಿರಬಹುದೋ! ಹಾಗೆಯೇ ಮಾತುಕಥೆ. 'ಭರತೇಶ ವೈಭವ'ವನ್ನು ಶೋಧನೆಮಾಡಿ ಪ್ರಕಟಿಸುವ ಪ್ರಯತ್ನವನ್ನು ಕುರಿತು ಕೊಂಚಕಾಲ ಮಾತನಾಡುತ್ತಿದ್ದೆವು. ಬಾಲಸಾಹಿತ್ಯ ಮಂಡಲದ ಪೂರ್ವೋತ್ತರ ಚರಿತ್ರೆಯನ್ನೂ ಅವರ ಆಲೋಚನೆಯನ್ನೂ ನನಗೆ ತಿಳಿಯಪಡಿಸಿದರು.

ಅಷ್ಟು ಹೊತ್ತಿಗೆ ಸಂಜೆಯಾಯಿತು. ಸೆಯಿಂಟ್ ಅಲೋಸಿಯಸ್ ಕಾಲೇಜಿಗೆ ಹೋಗಿ ಅಲ್ಲಿಯ ತಂಪಿನ ವಾತಾವರಣದಲ್ಲಿ ಕೊಂಚಕಾಲ ಕಳೆದೆವು. ಮಂಗಳೂರು ಪ್ರಾಂತದ ಕೆಲಮಂದಿ ಜನನಾಯಕರ ಕಥೆಗಳನ್ನೂ ನಾನು ಆಗ ಕೇಳಿದೆ.

ನಾನು ನನ್ನ ಜಾಗಕ್ಕೆ ಹಿಂದಿರುಗಲು ಪಂಜೆಯವರ ಅಪ್ಪಣೆ ಬೇಡಿದಾಗ ನನ್ನ ಹೃದಯುದಲ್ಲಾದ ತೀವ್ರ ವೇದನೆಯನ್ನು ನಾನು ವರ್ಣಿಸಲಾರೆ. ಎಷ್ಟೋ ವರ್ಷಗಳಿಂದ ನನ್ನನ್ನು ಸಲಹಿದ ಒಬ್ಬ ಹಿರಿಯಣ್ಣನ ಸಾನ್ನಿಧ್ಯ

ವನ್ನು ನಾನು ಬಿಟ್ಟುಹೋಗುತ್ತಿದ್ದೇನೆಂದು ನನಗನಿಸಿತು.

ಅಲ್ಲಿಂದೀಚೆಗೆ ಪಂಜೆ ಮಂಗೇಶರಾಯರಿಗೂ ನನಗೂ ಐದಾರು ಸಲ ಭೇಟಿಯಾಗಿರಬಹುದು. ಅವರನ್ನು ಕಣ್ಣಿಂದ ನೋಡಲಾದೀತು, ಅವರ ಮಾತನ್ನು ಕೇಳಲಾದೀತು—ಎನ್ನಿಸುವಂಥ ಸಂದರ್ಭ ಬಂದಾಗಲೆಲ್ಲ ನನ್ನ ಪಾಲಿಗೆ ಅದೊಂದು ಹಬ್ಬ. ಸೊಗಸಾದ ಕಥೆಗಳು, ಬಾಯಿತುಂಬ ನಗು, ಮುಖದ ತುಂಬ ಸ್ನೇಹದ ಕಾಂತಿ—ಇದು ಅವರ ಆಕರ್ಷಣೆ. ನೋಡಲು ಎತ್ತರವಾದ ವ್ಯಕ್ತಿ. ಸೊಗಸಾದ ಮೈಬಣ್ಣ. ಮಾತನಾಡುತ್ತಿದ್ದಾಗ ಕಣ್ಣು ಹುಬ್ಬು, ಮೀಸೆ, ಗಲ್ಲ, ತುಟಿ—ಎಲ್ಲ ಕುಣಿದಾಡುವುವು. ಮುಖದ ಮೇಲಣ ಒಂದೊಂದು ನರವೂ ಉಬ್ಬಿ ಕುಣಿದಾಡುತ್ತಿತ್ತು.

## ಕಾವ್ಯಪಾಠ

೧೯೩೪-೩೫ರಲ್ಲಿ ಪರಿಷತ್ತಿನ ಸಾಹಿತ್ಯೋತ್ಸವದಲ್ಲಿ ಅವರು ಕಾವ್ಯಪಾಠದ ವಿಷಯವನ್ನು ಕುರಿತು ಭಾಷಣಮಾಡಿದರು. ಅದಕ್ಕೆ ಹಿಂದಿನ ದಿವಸವೋ ಒಂದೆರಡು ದಿವಸ ಹಿಂದೆಯೋ ಮಲ್ಲೇಶ್ವರದ ಶಾಲೆಯೊಂದರ ವಿದ್ಯಾರ್ಥಿಗಳು 'ಗೋವಿನ ಕಥೆ'ಯನ್ನು ನಾಟಕರೂಪದಲ್ಲಿ ಹಾಡಿ ಅಭಿನಯಿಸಿ ತೋರಿಸಿದ್ದರು. ಆ ಹುಡುಗರನ್ನು ತಯಾರುಮಾಡಿದ್ದವರು ಆ ಶಾಲೆಯ ಹೆಡ್‌ಮಾಸ್ಟರ್. ಅವರ ಹೆಸರು ಈಗ ನನಗೆ ಮರೆತುಹೋಗಿದೆ. ಅವರು ದೇವರಾಯಸಮುದ್ರದ ಕಡೆಯವರೆಂದು ನಾನು ಕೇಳಿದ್ದೆ. ಅವರನ್ನು ಕಾಣುವ ಯೋಗ ನನಗೆ ಈಗ ಲಭಿಸಿದರೆ ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸಿಯೇನು. 'ಗೋವಿನ ಕಥೆ'ಯ ಗರ್ಭದಲ್ಲಿ ನಾಟಕವಸ್ತು ಹುದುಗಿಕೊಂಡಿದೆಯೆಂಬುದನ್ನು ಕಂಡ ಮಹಾಪ್ರತಿಭೆ ಆ ಮೇಷ್ಟರದು. ಬಳಿಕ ಆ ಕಾವ್ಯದ ಪದ್ಯಗಳನ್ನು ರಸದೃಷ್ಟಿಯಿಂದ ಆರಿಸಿ ಸಂದರ್ಭೋಚಿತವಾದ ರಾಗಗಳಿಗೆ ಅಳವಡಿಸಿದ್ದು ಅವರ ಎರಡನೆಯ ಮಹತ್ತ್ವ. ಆ ಬಾಲಕರನ್ನು ಗೊಲ್ಲ, ಗೋವು, ಹುಲಿ, ಕರು, ಹಸುವಿನ ಮಂದೆ—ಈ ನಾನಾ ಪಾತ್ರಗಳಿಗೆ ತಿದ್ದಿ ಅವರ ದೇಹಭಂಗಿಯನ್ನೂ ಮುಖಭಂಗಿಯನ್ನೂ ಕಲಿಸಿದ್ದು ಮೂರನೆಯ ಮಹತ್ತ್ವ.

ಈ 'ಗೋವಿನ ಕಥೆ' ನಾಟಕವನ್ನು ನೋಡಿದಾಗ ಪಂಜೆ ಮಂಗೇಶರಾಯರು ಪಟ್ಟ ಸಂತೋಷ ಇಷ್ಟಿಷ್ಟೆಂದು ಹೇಳಲಾಗುವುದಿಲ್ಲ. ಅವರು ತಮ್ಮ ಉಪನ್ಯಾಸಕ್ಕೆ 'ಗೋವಿನ ಕಥೆ' ಕಾವ್ಯವನ್ನೇ ಆರಿಸಿಕೊಂಡು, ಬಾಲಕರಾಡಿದ

ನಾಟಕವನ್ನು ಪ್ರಶಂಸೆಮಾಡಿ, ಬಳಿಕ ಕಾವ್ಯದ ವಾಕ್ಯಗಳನ್ನು ತೆಗೆದು ಕೊಂಡರು. "ಗೊಲ್ಲಗೌಡನು" ಪದ್ಯವನ್ನೆತ್ತಿಕೊಂಡು ಗೊಲ್ಲ ಎಂದರೇನು, ಅವರ ದೊಡ್ಡಿ ಹೇಗಿರುತ್ತದೆ, ಶ್ರೀಕೃಷ್ಣನು ಗೊಲ್ಲರೊಡನೆ ಆಟವಾಡಿದ್ದು— ಇದನ್ನೆಲ್ಲ ಕೊಂಚ ಕೊಂಚ ವಿಸ್ತರಿಸುತ್ತ ಆ ವಿವರಣೆಗಳನ್ನು ತಮ್ಮ ಅಂಗಾಂಗ ಅಭಿನಯಗಳಿಂದ ದೃಷ್ಟಾಂತಪಡಿಸಿ ತೋರಿಸಿಕೊಟ್ಟರು.

ಚದುರ ಶಿಖೆಯನ್ನು ಹಾಕಿದ

ಈ ವಾಕ್ಯವನ್ನು ಹೇಳಿ, ತಾವೇ ಕೈಯಿಂದ ತಲೆಯಮೇಲೆ ಶಿಖೆ ಗಂಟು ಕಟ್ಟಿ, ಅದನ್ನು ಸಭಿಕರಿಗೆ ತೋರಿಸುತ್ತ, ಆ ಪದದಿಂದಲೂ ಆ ಅಂಗಭಾವ ದಿಂದಲೂ ತೋರಿಬರುವ ಗೊಲ್ಲನ ಮನೋದಾರ್ಢ್ಯ, ಅವನ ನಿರ್ಧಾರ ಬುದ್ಧಿ—ಇವುಗಳನ್ನು ಉತ್ಸಾಹದಿಂದ ವಿವರಿಸಿದರು. ಆ ಉಪನ್ಯಾಸವನ್ನು ಭಾಷಣವೆನ್ನುವುದಕ್ಕಿಂತ ಕುಣಿದಾಟವೆಂದೂ ಅಭಿನಯವ್ಯಾಖ್ಯಾನವೆಂದೂ ಹೇಳಿದರೆ ತಪ್ಪಾಗದು.

## ರಾಯಚೂರು ಸಮ್ಮೇಳನ

ರಾಯಚೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಪಂಜೆ ಮಂಗೇಶ ರಾಯರು ಅಧ್ಯಕ್ಷರು. ರಾಯಚೂರು ಪಟ್ಟಣದಿಂದ ಪರಿಷತ್ತಿಗೆ ಯಥಾವಿಧಿ ಯಾಗಿ ಆಹ್ವಾನ ಬಂದಿದ್ದಾಗ್ಗೂ, ರಾಯಚೂರಿನ ಸ್ವಾಗತ ಸಮಿತಿಯಲ್ಲಿ ಕಕ್ಷಿಗಳು ಹುಟ್ಟಿಕೊಂಡು, ಪರಿಷತ್ತಿನ ಸಮ್ಮೇಳನಕ್ಕೆ ವಿಘಾತ ಬಂದೀತೇನೋ ಎಂಬ ಹೆದರಿಕೆಗೆ ಕಾರಣಗಳಾಗಿದ್ದವು. ಪರಿಷತ್ತಿನ ಅಧಿಕಾರಿಗಳು ಉತ್ಸಾಹ ಗುಂದದೆ ಅಲ್ಲಿ ಹೋಗುವಂತೆ ಧೈರ್ಯ ಕೊಟ್ಟವರು ಆಗ ಹೈದರಾ ಬಾದ್ ಸರಕಾರದಲ್ಲಿ ವ್ಯವಸಾಯದ (ಅಗ್ರಿಕಲ್ಚರಲ್) ಇಲಾಖೆಯ ದೊಡ್ಡ ಅಧಿಕಾರಿಗಳಾಗಿದ್ದ ಶ್ರೀ ಕೂರಪಾಡು ಎಸ್. ಗುಂಡಪ್ಪನವರು. ಇವರು ಮೈಸೂರು ಸರಕಾರದ ವ್ಯವಸಾಯದ ಇಲಾಖೆಯಲ್ಲಿ ದೊಡ್ಡ ಹುದ್ದೆಯಲ್ಲಿದ್ದವರು. ಇವರ ಭರವಸೆಯ ಮೇಲೆ ಪರಿಷತ್ತಿನ ಕಾರ್ಯ ಕರ್ತರು ರಾಯಚೂರಿನಲ್ಲಿ ಊರ ಹೊರಗಡೆ ಗೊತ್ತಾಗಿದ್ದ ಒಂದು ಹೊಸ ಬಂಗಲೆಯಲ್ಲಿ ಬಿಡಾರಮಾಡಿದ್ದರು. ರಾಯಚೂರು ಊರೊಳಗಿನ ಸ್ವಾಗತ ಸಮಿತಿಯ ಎರಡು ಕಕ್ಷಿಗಳಲ್ಲಿ ಒಂದು ಕಕ್ಷಿಯವರು ವಿರೋಧ ಪ್ರದರ್ಶನ ಮಾಡಿಯಾರು ಎಂದು ಎಲ್ಲರಿಗೂ ಭೀತಿಯಾಗಿತ್ತು. ಈ ಭೀತಿಯನ್ನು

ಪರಿಹಾರ ಮಾಡಿಕೊಳ್ಳಲು ಆಗ ಅಲ್ಲಿ ಡಿವಿಷನ್ ಅಧಿಕಾರಿಯಾಗಿದ್ದ ಜಂಗ್ ಬಹದ್ದೂರ್ ಸಾಹೇಬರನ್ನು ಕಂಡು, ಅವರ ಪ್ರೋತ್ಸಾಹವನ್ನೂ ಅಭಯವಚನವನ್ನೂ ಸಂಪಾದಿಸಿಕೊಂಡದ್ದಾಗಿತ್ತು. ಹಾಗಿದ್ದರೂ ನಮ್ಮ ಭಯ ನಿಶ್ಶೇಷವಾಗಿ ಹೋಗಿರಲಿಲ್ಲ. ಊರಿನ ಪುಂಡುಗಾರರೂ ದೊಂಬಿ ಜನವೂ ಏನು ಅನುಚಿತವನ್ನಾದರೂ ಮಾಡಲಾದೀತು ಎಂಬ ಶಂಕೆ ಮನಸ್ಸಿನಲ್ಲಿ ತುಂಬಿತ್ತು.

ಸಮ್ಮೇಳನದ ಪ್ರಾರಂಭದ ದಿವಸ ಅಧ್ಯಕ್ಷರನ್ನು ಸಭಾಮಂಟಪಕ್ಕೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುವುದು ವಾಡಿಕೆ. ಅಂದು ಹಾಗೆ ನಮ್ಮ ಬಿಡಾರದಿಂದ ಊರೊಳಗಿನ ರಾಮಟಂಕಿ ಶಾಲೆಯೆಂಬ ಕಡೆ ಗೊತ್ತಾಗಿದ್ದ ಸಭಾಮಂಟಪಕ್ಕೆ ಅಧ್ಯಕ್ಷ ಮಂಗೇಶರಾಯರನ್ನು ಮೆರವಣಿಗೆಯಲ್ಲಿ ಕರೆದುಕೊಂಡುಹೋಗತಕ್ಕದ್ದೆಂದು ನಿಶ್ಚಯಮಾಡಿತ್ತು. ಮೆರವಣಿಗೆ ಸಂಜೆ ಸುಮಾರು ನಾಲ್ಕು ಘಂಟೆಗೆ ನಮ್ಮ ಬಿಡಾರದ ಜಾಗದಿಂದ ಹೊರಡಬೇಕಾಗಿತ್ತು. ಅದಕ್ಕೆ ಅರ್ಧ ಘಂಟೆ ಮುಂಚೆ ನಾನು ಮಂಗೇಶರಾಯರ ಕೊಠಡಿಗೆ ಹೋಗಿ ಅವರನ್ನು ಅವಸರಪಡಿಸಿದೆ.

"ಏನು ನೀವಿನ್ನೂ ಸಿದ್ಧವಾಗಿಲ್ಲ? ಮೆರವಣಿಗೆಗೆ ಉಡುಪು ಹಾಕಿಕೊಂಡಿಲ್ಲ. ಕಮಿಷನರು ಜಂಗ್ ಬಹದ್ದೂರ್‌ರವರು ತಮ್ಮ ಸ್ವಂತ ಕಾರನ್ನು ಮೆರವಣಿಗೆಗಾಗಿ ಕಳಿಸಿದ್ದಾರೆ. ಅದು ರೆಡ್ ಮ್ಯಾಕ್ಸ್‌ವೆಲ್ ಕಾರು—ಕಾದಿದೆ—ಭರ್ಜರಿಯಾಗಿದೆ. ನಿಮ್ಮ ಉಡುಪು ಅದಕ್ಕೆ ತಕ್ಕಹಾಗಿರಬೇಕು."

ನಾನು ಈ ಮಾತನ್ನಾಡುವಾಗ ಅದೇ ಕೋಣೆಯಲ್ಲಿ ಶ್ರೀಮಾನ್ ಬೆನಗಲ್ ರಾಮರಾಯರೂ ಇದ್ದರು.

ಮಂಗೇಶರಾಯರು ನನ್ನ ಮಾತನ್ನು ಕೇಳಿ ನಸುನಕ್ಕು ಹೇಳಿದರು:

"ನೀವು ಏಕೆ ಅವಸರಪಡುತ್ತೀರಿ? ನನ್ನ ಬಟ್ಟೆಬರೆಗಳನ್ನು ತೊಡಿಸಿ, ಬೆತ್ತಲೆಯನ್ನು ಹೋಗಲಾಡಿಸುವುದಕ್ಕೆ ತಕ್ಕವರನ್ನು ಇಟ್ಟುಕೊಂಡಿದ್ದೇನೆ. ಆಕೆ ಬಹು ಜಾಣೆ. ದೊಡ್ಡಮನುಷ್ಯರ ಮನೆಯ ಹೆಂಗಸನ್ನೇ ನಾನು ಇಟ್ಟುಕೊಂಡಿದ್ದೇನೆ...."

ಹೀಗೆ ಹೇಳುತ್ತ, ಮಂದಹಾಸದಿಂದ ತಮ್ಮ ಬೆನ್ನ ಕಡೆ ಕಣ್ಣು ತಿರುಗಿಸುತ್ತಿದ್ದರು. ಅಲ್ಲಿದ್ದವರು ಬೆನಗಲ್ ರಾಮರಾಯರು. ಅವರಾದರೋ ರೇಗಿನಿಂದ:

"ಪೋಲಿ, ಭಂಡ, ಹೆಣ್ಣು ಹೆತ್ತವರು ಬೇರೆ ಗತಿ ಕಾಣದೆ ಇಂಥ

ಭಂಡರಿಗೆ ಹಣ್ಣು ಕೊಡಬೇಕಾಗುತ್ತದೆ”—ಎಂದು ಗೊಣಗಿಕೊಳ್ಳು ತ್ತಿದ್ದರು.

ಬೆನಗಲ್ ರಾಮರಾಯರ ತಂಗಿ ಪಂಜೆ ಮಂಗೇಶರಾಯರ ಭಾರ್ಯೆ.

ಈ ಸಂಬಂಧವನ್ನು ಕುರಿತು ಪಂಜೆಯವರು ಆಡಿದ ಸಲಿಗೆಯ ಮಾತಿಗೆ, ಬೆನಗಲ್ ರಾಮರಾಯರು ಮುನಿಸು ತೋರಿದ್ದು ಆ ಹಾಸ್ಯಪ್ರಸಂಗ. ರಾಮರಾಯರು ಬಾಯಿಗೆ ಬಂದಂತೆ ‘ಭಂಡ’, ‘ಪುಂಡ’ ಎಂದು ಬಯ್ಯು ತ್ತಿದ್ದರೆ ಮಂಗೇಶರಾಯರ ನಗು ಕಟ್ಟಡವನ್ನೆಲ್ಲ ತುಂಬಿತ್ತು.

ಆ ಸಂಜೆಯ ಮೆರವಣಿಗೆ ಉಲ್ಲಾಸಕರವಾಗಿತ್ತು. ಹದಿನೈದಿಪ್ಪತ್ತು ಗಜಕ್ಕೊಬ್ಬ ಪೊಲೀಸ್ ಕಾನ್‌ಸ್ಟೇಬಲ್ ಇದ್ದ. ಜನ ರಸ್ತೆಯಲ್ಲಿ ಕಿಕ್ಕಿರಿದಿತ್ತು. ಎಲ್ಲರಿಗೂ ತುಂಬಾ ಸಂತೋಷವಾಯಿತು.

ಸಮ್ಮೇಳನದ ಉಪಸಂಹಾರ ಭಾಷಣದಲ್ಲಿ ಪಂಜೆ ಮಂಗೇಶರಾಯರು ಗದ್ಗದ ಧ್ವನಿಯಿಂದ ಆಡಿದ ಕಟ್ಟಕಡೆಯ ಮಾತು ಹೃದಯಸ್ಪರ್ಶಿಯಾದದ್ದು. ಅದು ಹೀಗೆ :

“ನನ್ನ ಅವಸಾನಕಾಲದಲ್ಲಿ ಬಾಯಿಂದ ‘ಕೃಷ್ಣ’ ‘ಕೃಷ್ಣ’ ಎಂಬ ಮಾತು ಹೊರಡುವಂತೆ ‘ಕನ್ನಡ’ ‘ಕನ್ನಡ’ ಎಂಬ ಮಾತೂ ಉಚ್ಚಾರಣೆಯಾಗಲಿ.”

## ಜಮುಖಂಡಿ ಸಮ್ಮೇಳನ

ಜಮಖಂಡಿಯ ಸಮ್ಮೇಳನದಲ್ಲಿ ತರುಣ ಕವಿಗಳ ಕೂಟವೊಂದು ಸಮ್ಮೇಳನದ ಅಂಗವಾಗಿ ಏರ್ಪಾಟಾಗಿತ್ತು. ಅನೇಕ ಮಂದಿ ತರುಣ ಕವಿಗಳು ಅಲ್ಲಿ ತಮ್ಮ ತಮ್ಮ ಕವನಗಳನ್ನೋದಿದರು. ಅವರ ಪೈಕಿ ಹೊಳ್ಳ ಎಂಬವರೊಬ್ಬರು ತೆಂಗಿನ ಕಾಯಿ ಮಾರುವವನ ಹಾಡನ್ನು ಹೇಳಿದರು; ಬಹು ಚನ್ನಾಗಿತ್ತು. ಇನ್ನೊಬ್ಬ ತರುಣರು ಮಾಸ್ತಿ ನರಸಿಂಗರಾಯರು. ಇವರು ಆಗ್ಗೆ ಸುಮಾರು ಇಪ್ಪತ್ತು ವರ್ಷ ವಯಸ್ಸಿನ ತರುಣರು. ಸ್ವಭಾವದಿಂದ ಅವರು ವಿನಯಶೀಲರು. ಅವರ ಮುಖಮುದ್ರಿಕೆಯೂ ಅತ್ಯಂತ ವಿನಯದ್ದಾಗಿತ್ತು; “ಯಾಕೆ ಪುಟ್ಟಿಸಿದೆಯೋ ದೇವ” ಎನ್ನುವಂತಿತ್ತು. ಇಂಥವರು ಬರೆದು ತಂದಿದ್ದದ್ದು ಬಹು ಸೊಗಸಾದ ಪದ್ಯ. ಅದನ್ನು ಓದುವುದಕ್ಕೆ ಪೀಠಿಕೆಯಾಗಿ ನರಸಿಂಗರಾಯರು ತಮ್ಮ ನಮ್ರತೆಯನ್ನು ಸೂಚಿಸಿ, ತಮ್ಮ ಧೃಷ್ಟತನಕ್ಕಾಗಿ ಕ್ಷಮಾಪಣೆ ಬೇಡಿ, “ನಾನು ತಂದಿರುವುದು ಕವಿತ್ವ ಹೌದೋ ಅಲ್ಲವೋ ನನಗೇ ಸಂದೇಹವಾ

ಗಿದೆ. ಕ್ಷಮಿಸಬೇಕು"—ಎಂದು ಮೊದಲಾಗಿ ಸಂಕೋಚದ ಮಾತುಗಳನ್ನಾಡಿ ಆಮೇಲೆ ಪದ್ಯವನ್ನೋದಿದರು. ಸಭೆಗೆ ಆದ ಆನಂದ ಅಷ್ಟಿಷ್ಟಲ್ಲ. ಇಂಥ ಹುಡುಗ ನಮ್ಮಲ್ಲಿದ್ದಾನಲ್ಲ ! ಎಂಬ ಸಂತೋಷವನ್ನು ಎಲ್ಲರ ಮುಖದಲ್ಲಿಯೂ ಕಾಣಬಹುದಾಗಿತ್ತು.

ನರಸಿಂಗರಾಯರು ತಮ್ಮ ಪದ್ಯದ ಕಟ್ಟಕಡೆಯ ಮಾತನ್ನು ನುಡಿದು ಕಾಗದ ಮಡಿಸುವಷ್ಟರಲ್ಲಿದ್ದಾಗ ಪಂಜೆ ಮಂಗೇಶರಾಯರು ತಾವು ಕುಳಿತಿದ್ದ ಕುರ್ಚಿಯಿಂದ ಥಟ್ಟನೆ ಎಗರಿ ದುಡದುಡನೆ ನರಸಿಂಗರಾಯರ ಬಳಿಗೆ ಹೋಗಿ ಮಹಾ ಭಯೋತ್ಪಾದಕವಾದ ಮುಖದಿಂದ

"ಯಾರಯ್ಯಾ ನಿನಗೆ ಹೇಳಿದ್ದು ಇದು ಪದ್ಯ ಹೌದೋ ಅಲ್ಲವೋ ಎಂದು ? ಅವರಿಗೆ ಬುದ್ಧಿಯಿಲ್ಲ."

—ಹೀಗೆ ರೇಗಾಟದ ಧ್ವನಿಯಿಂದ ಮುಖ ತಿವಿಯುವಂತೆ ಕೈಮಾಡಿ ಕೊಂಡು ಹೇಳಿದರು. ನರಸಿಂಗರಾಯರು ತಬ್ಬಿಬ್ಬಾದರು. ನಾವೆಲ್ಲ ಈ ನಾಟಕ ನೋಡಿ ಹೊಟ್ಟೆಬಿರಿಯ ನಗುತ್ತಿದ್ದೆವು. ನರಸಿಂಗರಾಯರಿಗೆ ಅದರ ಭಾವ ಅರ್ಥವಾದದ್ದು ಒಂದೆರಡು ನಿಮಿಷ ಕಳೆದ ಬಳಿಕ. ಮಂಗೇಶರಾಯರು ಅವರನ್ನು ಬಾಚಿ ತಬ್ಬಿಕೊಂಡು ಮೇಲಕ್ಕೆತ್ತಿದ್ದರು.

* * *

ಪಂಜೆ ಮಂಗೇಶರಾಯರಿಗೆ ಕಡೆಕಡೆಯಲ್ಲಿ ಆಗಾಗ ಆರೋಗ್ಯ ಕೊಂಚ ಕೆಡುತ್ತಿತ್ತು. 'ಗದುಗಿನ ಭಾರತ'ವನ್ನು ಸಂಗ್ರಹಮಾಡಿಕೊಡುವ ಕೆಲಸವನ್ನು ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಒಪ್ಪಿಸಿತ್ತು. ಅದು ಬಹು ದೊಡ್ಡ ಕೆಲಸ. ಅಂಥ ಕೆಲಸವನ್ನು ಪಂಜೆ ಮಂಗೇಶರಾಯರಿಗೆ ಒಪ್ಪಿಸಿದ್ದು ನಮಗೆಲ್ಲ ತುಂಬಾ ಸಂತೋಷದ ವಿಷಯ. ಅವರು ಸಂಕ್ಷೇಪಿಸುವ ಕಾರ್ಯವನ್ನು ಮುಗಿಸಿದ ಸುಮಾರಿನಲ್ಲಿ, ಆ ಗ್ರಂಥಕ್ಕೆ ಒಂದು ಪೀಠಿಕೆಯನ್ನು ಬರೆಯುವ ಪ್ರಯತ್ನದಲ್ಲಿದ್ದಾಗ, ಕೆಲವು ಪ್ರಾಚೀನ ಗ್ರಂಥಗಳನ್ನು ನೋಡಬೇಕೆಂಬ ಉದ್ದೇಶದಿಂದ ಮೈಸೂರು ಪಟ್ಟಣಕ್ಕೆ ಬಂದು ಅಲ್ಲಿ ಒಂದೆರಡು ವಾರ ಇದ್ದರು. ಆಗ ಒಂದು ದಿನ ಸಂಜೆ ಅವರೂ ನಾನೂ ಡಿಸ್ಟ್ರಿಕ್ಟ್ ಆಫೀಸಿನ ಆವರಣದಲ್ಲಿರುವ ವಿಸ್ತಾರವಾದ ತೋಟದಲ್ಲಿ ಒಂದು ಕಲ್ಲುಬೆಂಚಿನ ಮೇಲೆ ಕುಳಿತು, ಏನೇನೋ ಹರಟುತ್ತಿದ್ದೆವು. ಆಗ ಒಬ್ಬ ಸ್ನೇಹಿತರ ಸವಾರಿ ಅಲ್ಲಿಗೆ ಚಿತ್ತೈಸಿತು. ಅವರು ಪಂಜೆಯವರನ್ನು

ಕಂಡೊಡನೆಯೇ ಮುಖದಿಂದ ಸಂತೋಷ ಸಂಜ್ಞೆಮಾಡಿ ಹತ್ತಿರ ಬಂದು ಕೇಳಿದರು:

ಸ್ನೇ: "ಯಾವಾಗ ಬಂದದ್ದು?"

ಪಂಜೆ: "ಮೂರು ನಾಲ್ಕು ದಿನವಾಯಿತು."

ಸ್ನೇ: "ಏನು ಕಾರ್ಯವೋ?"

ಪಂಜೆ: "ಬೇಸರ ಕಳೆಯುವುದಕ್ಕೋಸ್ಕರ (ಚೇಂಜ್)".

ಸ್ನೇ: "ಕುಟುಂಬ ಸಮೇತವಾಗಿಯೋ?"

ಪಂಜೆ: "ಹೇಳಿದೆನಲ್ಲ—ಬೇಸರ ಕಳೆಯುವುದಕ್ಕಾಗಿ ಬಂದೆನೆಂದು?"

ಆ ಸ್ನೇಹಿತರು ತಮ್ಮ ಬೆಪ್ಪುತನವನ್ನು ನೋಡಿಕೊಂಡು ನಮ್ಮ ನಗುವಿನಲ್ಲಿ ಅವರೂ ಸೇರಿದರು.

ಇಂಥ ಸರಸಿಗಳು ಪಂಜೆಯವರು. ಸರಸತೆಯ ಜೊತೆಗೆ ಉದಾತ್ತತೆ ಸೇರಿಕೊಂಡಿತ್ತು. ದೊಡ್ಡ ಸಂಸಾರ. ಮನೆಯಲ್ಲಿ ಅತಿಥಿ ಅಭ್ಯಾಗತರಿಗೆ ಆದರಣೆ. ಎಲ್ಲ ವಿಷಯಗಳಲ್ಲಿಯೂ ಕೋಮಲತೆ, ಶುಚಿತ್ವ. ಇವು ಅವರ ಲಕ್ಷಣಗಳು.

ವಾಗುವುದೆಂದು ಅವರಿಗೆ ವಿಜ್ಞಾಪನೆ ಮಾಡಿದ್ದೆ. ನಮ್ಮ ಜನದಲ್ಲಿರುವ ನೂರಾರು ತಪ್ಪು ಭಾವನೆಗಳು ನಮ್ಮ ಇಂದಿನ ರಾಜಕೀಯ ದುಃಸ್ಥಿತಿಗೂ, ಆರ್ಥಿಕ ಅವ್ಯವಸ್ಥೆಗೂ ಮೂಲಕಾರಣಗಳಾಗಿವೆ. ದೇಶದ ಜನಜೀವನವನ್ನು ಚೊಕ್ಕಟಪಡಿಸಬೇಕೆನ್ನುವವರು ನಮ್ಮ ಜನಕ್ಕೆ ಮೊದಲು ಕಾರ್ಯಕಾರಣ ವಿವೇಕದ ಅಭ್ಯಾಸವನ್ನು ಮಾಡಿಸಬೇಕು. ಅಂಥ ವಿವೇಕದ ಅಭ್ಯಾಸಕ್ಕೆ ಸಾಧಕವಾಗತಕ್ಕದ್ದು ತರ್ಕಶಾಸ್ತ್ರ.

## ತರ್ಕಪಾಂಡಿತ್ಯ

ವಿರೂಪಾಕ್ಷಶಾಸ್ತ್ರಿಗಳು ತರ್ಕದಲ್ಲಿ ಉದ್ದಾಮಪಂಡಿತರೆಂದು ದೇಶದೇಶಗಳಲ್ಲೂ ಪ್ರಖ್ಯಾತಿ ಪಡೆದಿದ್ದವರು.

ಅವರಿಗೆ ತರ್ಕಶಾಸ್ತ್ರದಲ್ಲಿ ಎಷ್ಟುಮಟ್ಟಿನ ಸೌಲಭ್ಯವೂ, ಅಧಿಕಾರವೂ ಬಂದಿತ್ತೆಂಬುದನ್ನು ಒಂದು ಸಂಗತಿಯಿಂದ ಊಹಿಸಬಹುದು. ವೇದಾಂತ ಶಾಸ್ತ್ರ ಪಾಠ ಹೇಳುತ್ತಿದ್ದ ಕಾಲದಲ್ಲಿ ಸಾಂಖ್ಯ, ವೈಶೇಷಿಕ ಮೊದಲಾದ ಭಿನ್ನ ಭಿನ್ನಮತಗಳ ವಾದಗಳು ಪರಾಮರ್ಶೆಗೆ ಬರುತ್ತಿದ್ದವಷ್ಟೆ. ಶಾಸ್ತ್ರಿಗಳವರು ಆ ನಾನಾ ಮತಗಳನ್ನು ಬೇರೆಬೇರೆಯಾಗಿ ಪ್ರಸ್ತಾವಿಸಿ,

"ನಮ್ಮ ಮತದಲ್ಲಿ,ಎಂದರೆ ತಾರ್ಕಿಕಮತದಲ್ಲಲ್ಲ, ವೇದಾಂತಮತದಲ್ಲಿ...."

ಎಂದು ವಿವರಣೆ ಕೊಡುತ್ತಿದ್ದರು. ಮೊದಮೊದಲು ಅವರಿಗೆ ಪ್ರಸಿದ್ಧಿ ಇದ್ದದ್ದು ತಾರ್ಕಿಕರೆಂದು. ಆದದ್ದರಿಂದಲೇ 'ತರ್ಕಪಂಚಾನನ' ಎಂಬ ಬಿರುದು. ಜಗದ್ಗುರುಗಳ ಪ್ರಭಾವದಿಂದ ತರ್ಕಕ್ಕಿದ್ದ ಸ್ಥಾನ ವೇದಾಂತಕ್ಕೆ ದೊರೆಯಿತು.

## ಔಚಿತ್ಯ

ವಿರೂಪಾಕ್ಷಶಾಸ್ತ್ರಿಗಳವರು ಎಲ್ಲ ವಿಷಯಗಳಲ್ಲಿಯೂ ಪ್ರಾಮಾಣಿಕರು ಮತ್ತು ಪರಿಶುದ್ಧವೃತ್ತರು. ಅಹಂಕಾರದಿಂದಲಾಗಲಿ ಮಾತ್ಸರ್ಯ ಕ್ರೋಧಗಳಿಂದಾಗಲಿ ಮಾತನಾಡುವವರಲ್ಲ. ತಮ್ಮ ಅಂತರಂಗದಲ್ಲಿದ್ದ ಸತ್ಯವನ್ನು ನುಡಿಯಬೇಕು, ನಿರ್ಭೀತರಾಗಿ ನುಡಿಯಬೇಕು—ಇದು ಅವರ ಸ್ವಭಾವ. ಸತ್ಯವಚನದ ಪ್ರಸಕ್ತಿಯಲ್ಲಿ ಅವರು ಬೇರೆ ಯಾವ ಅಧಿಕಾರಕ್ಕೂ ತಲೆಬಾಗರು. ಇದನ್ನು ಎಲ್ಲರೂ ತಿಳಿದುಕೊಂಡಿದ್ದದ್ದರಿಂದ ಅವರ ವಿಷಯದಲ್ಲಿ ಯಾರಿಗೂ ಅಸಮಾಧಾನ ಬರುತ್ತಿರಲಿಲ್ಲ. ಎಲ್ಲರೂ ಭಕ್ತಿಗೌರವಗಳನ್ನಿರಿಸಿಕೊಂಡಿದ್ದರು.

ಶಾಸ್ತ್ರಿಗಳವರು ಸಮಸ್ತರಲ್ಲಿಯೂ ಅನುಕಂಪೆಯಿದ್ದವರು. ತಮ್ಮ ವೈಯಕ್ತಿಕ ಜೀವನದಲ್ಲಿ ಅವರು ಬಡತನವನ್ನು ಕಂಡಿದ್ದವರು, ಕಷ್ಟಕಾರ್ಪಣ್ಯಗಳನ್ನು ಕಂಡಿದ್ದವರು, ರೋಗವಿಯೋಗಗಳನ್ನು ಕಂಡಿದ್ದವರು. ಅವರ ಮನಸ್ಸು ಹೀಗೆ ಮೃದುವಾಗಿ ಕೋಮಲವಾಗಿತ್ತು. ನನ್ನ ಪಾಠಕ್ಕೆ ಬೆಳಗ್ಗೆ ಎಂಟೂವರೆ ಘಂಟೆಯೆಂದು ಗೊತ್ತುಮಾಡಿದ್ದರಷ್ಟೆ. ಒಂದೊಂದು ಸಾರಿ ನಾನು ಆ ಹೊತ್ತಿಗೆ ಸರಿಯಾಗಿ ಮಠಕ್ಕೆ ಹೋದಾಗ ಶಾಸ್ತ್ರಿಗಳು ಅಲ್ಲಿಗೆ ದಯಮಾಡಿಸಲಾಗುತ್ತಿರಲಿಲ್ಲ. ಒಂದೊಂದು ದಿವಸ ಅರ್ಧ ಘಂಟೆ ಮುಕ್ಕಾಲು ಘಂಟೆ ಒಂದು ಘಂಟೆ ತಡವಾಗಿಬಿಡುತ್ತಿತ್ತು. ಹಾಗೆ ತುಂಬಾ ತಡವಾದ ಒಂದು ದಿನ ಅವರು ಹೇಳಿದರು :

"ನೋಡ್ರೀ, ನಾವು ಮನಿ ಮನಿ ಅಂತೇವು. ಅದರಾಗೆ ಯಾರು ಹ್ಯಾಂಗಾದರೂ ಹೋಗಲಿ, ಏನಾದರೂ ಮಾಡಿಕೊಳ್ಳಲಿ ಎಂದು ನೋಡದ ಹಾಂಗಿದ್ದು ಬಿಟ್ಟರೆ ಅದು ಮನಿ. ಆಗ ಎಲ್ಲರಿಗೂ ಸಮಾಧಾನ. ಹಾಂಗಲ್ಲದೆ ಒಂದು ಸಾರಿ ಇದು ಮಡಿ, ಇದು ಮೈಲಿಗಿ ಎಂದು ಧರ್ಮವಿಚಾರ ಯಾರಿಗಾದರೂ ಹೇಳಿದಿರೆಂದರೆ ಅದು ಮನಿಯಲ್ಲ, ಹುಚ್ಚಾಸ್ಪತ್ರಿ."

ಒಂದೊಂದು ಸಾರಿ ಅವರಿಗೂ ಇಂಥ ಅನುಭವ ಆಗುತ್ತಿತ್ತೆಂದು ತೋರುತ್ತದೆ.

## ಗುರುವಂದನೆ

ಪಾಠಕ್ಕೆ ನಾವು ಸೇರಿದಾಗ ಮೊದಲು ಶಾಸ್ತ್ರಿಗಳವರು ಬಂದ ಕೂಡಲೆ "ಗುರುವಂದನೆ ಮಾಡೋಣಾಯಿತೆ?" ಎಂದು ಕೇಳುವರು. ನಾನು "ಆಯಿತು" ಎಂದು ಹೇಳಿದರೆ ಅವರಿಗೆ ತೃಪ್ತಿಯಿಲ್ಲ.

"ಇನ್ನೊಂದು ಸಾರಿ ಮಾಡಿಬಿಡೋಣ—ದೋಷವಿಲ್ಲ". ಎನ್ನುವರು. ಆಗ ಅವರೂ ಸೇರಿ ಹತ್ತು ಹನ್ನೆರಡು ಸಾರಿ ಸಾಷ್ಟಾಂಗ ಪ್ರಣಾಮ—ಗುರುಗಳ ಚಿತ್ರಪಟದ ಮುಂದೆ. ಅವರ ಪರಿಭಾಷೆಯಲ್ಲಿ "ಒಂದು ಸಲ" ಎಂದರೆ ಹನ್ನೆರಡು ಸಲ. ಆಗ ನಾನು ದೊಣ್ಣೆಯಾಗಿರಲಿಲ್ಲ. ಆದರೂ ಶಾಸ್ತ್ರಿಗಳವರ ವಂದನಕ್ರಮ ಕೊಂಚ ದೇಹಪ್ರಯಾಸದ್ದೇ. ಆದರೆ ಆ ಪ್ರಯಾಸ ಅವರಿಗೆ ಆದಂತೆ ತೋರುತ್ತಿರಲಿಲ್ಲ. ಪಾಠ ಮುಗಿದ ಮೇಲೆ ಮತ್ತೆ ಗುರುವಂದನೆ. ಅನಧ್ಯಯನದ ದಿನಗಳು ಸನ್ನಿಹಿತವಾದಾಗ ಅದಕ್ಕೆ ಮುಂಚೆ ಮಂಗಲ ಪಾಠ; ವಿಶೇಷ ಗುರುವಂದನೆ! ನನಗೆ ಕೈಕಾಲು ಸೋತುಹೋಗುತ್ತಿತ್ತು.

ಗುರುವಂದನವಾದ ಮೇಲೆ, ಪಾಠ ಪ್ರಾರಂಭದಲ್ಲಿ ಪ್ರತಿದಿನವೂ "ಸಂಧ್ಯಾವಂದನೆ ಆಗ್ಯದೆಯಷ್ಟೆ?" ಅನಂತರ ಗುರುವಂದನದ ಪ್ರಶ್ನೆ. ಆಮೇಲೆ

ವಿ: "ನಿನ್ನೆ ಆದ ಪಾಠ ಬಾಯಿಗೆ ಗಟ್ಟಿಮಾಡೋಣಾಗ್ಯದೆ ತಾನೆ?"

ನಾನು: "ಸುಮಸುಮಾರಾಗಿ ನೋಡಿಕೊಂಡಿದ್ದೇನೆ."

ವಿ: "ಈ ಹೊತ್ತಿನ ಪಾಠವಾಕ್ಯಗಳನ್ನು ನೋಡಿರೋಣಾಗ್ಯದೆಯಷ್ಟೆ?"

ನಾನು: "ಒಂದೆರಡು ಸಲ ನೋಡಿದ್ದೇನೆ."

ಆಮೇಲೆ ಪಾಠಕ್ಕೆ ಪ್ರಾರಂಭ.

## ನನ್ನ ಕಷ್ಟ

ಹೀಗೆ ಹಿಂದಿನ ಪಾಠ ಮುಂದಿನ ಪಾಠದ ವಿಷಯದಲ್ಲಿ ನಾಲ್ಕೈದು ಸಾರಿ ಪ್ರಶ್ನೆಮಾಡಿದ ಮೇಲೆ ಒಂದು ದಿನ ನಾನು ನಿಜ ಹೇಳಿಬಿಡಬೇಕೆಂದು ಮನಸ್ಸು ಮಾಡಿದೆ. ನಾನು ಹೇಳಿದೆ:

"ಈ ಶಾಸ್ತ್ರವನ್ನು ನಾನು ಅದಕ್ಕೆ ಅಧಿಕಾರಿಯಾಗಬೇಕೆಂದು ವ್ಯಾಸಂಗ ಮಾಡುವವನಲ್ಲ. ನನಗೆ ದಿಗ್ದರ್ಶನದಷ್ಟು ಪರಿಚಯವಾದರೆ ತೃಪ್ತಿ. ಶಾಸ್ತ್ರ ಪ್ರಕ್ರಿಯೆಯ ಸ್ಥೂಲ ಪರಿಚಯ ನನಗಾದರೆ ಅದೇ ಭಾಗ್ಯ. ನನ್ನ ಕಸಬು ಬೇರೆ. ನಾನು ರಾಜಕೀಯದಲ್ಲಿರತಕ್ಕವನು; ಪತ್ರಿಕೋದ್ಯೋಗಿ. ನನ್ನ ಜೀವಿಕೆಗೆ ಅವಶ್ಯವಾದ ಶಾಸ್ತ್ರಗಳು ರಾಜ್ಯಶಾಸ್ತ್ರ, ಅರ್ಥಶಾಸ್ತ್ರಗಳು. ಆ ಶಾಸ್ತ್ರಗಳಲ್ಲಿ ಹೊಸಹೊಸ ಪ್ರಕರಣಗಳು ಬರುತ್ತಿವೆ. ವಾರವಾರವೂ ಹೊಸ ಹೊಸ ಗ್ರಂಥಗಳೂ ಹುಟ್ಟುತ್ತಿವೆ. ನಾನು ಅವುಗಳನ್ನು ಓದಬೇಕು. ನಾನು ವೇದಾಂತಶಾಸ್ತ್ರವನ್ನು ಪಂಡಿತನಂತೆ ಸ್ವಾಧೀನಪಡಿಸಿಕೊಳ್ಳುವುದು ಅಸಾಧ್ಯ. ನನಗೆ ಆ ಆಶೆಯೇ ಇಲ್ಲ."

ಶಾಸ್ತ್ರಿಗಳವರು ತಾಳ್ಮೆಯಿಂದ ಇದನ್ನು ಕೇಳಿದರು, ಕನಿಕರಿಸಿದರು; "ಆದಷ್ಟು ಬೇಗ ಮಾಡೋಣ" ಎಂದರು.

ಆದರೆ ಆಮೇಲೂ ಗುರುವಂದನೆಯ ನಿಯಮವನ್ನಾಗಲಿ, ಪ್ರಶ್ನೆಗಳ ನಿಯಮವನ್ನಾಗಲಿ ಸಡಿಲಮಾಡಲಿಲ್ಲ. ಅವರ ಪದ್ಧತಿಯಂತೆಯೆ ಅವರು ನಡೆದರು.

ನನ್ನ ಗೃಹಕೃತ್ಯದಲ್ಲಿ ಯಾವುದೋ ಒಂದು ವಿಘಾತ ಬಂದ ಕಾರಣದಿಂದ ನಾನು ಕೊಂಚ ಕಾಲ ಅವರಲ್ಲಿ ಹೋಗಲಾಗಲಿಲ್ಲ. ಅದನ್ನು ಬಿಟ್ಟರೆ ಅವರಿಗೆ ನನ್ನ ವಿಷಯದಲ್ಲಿ ಒಂದೇ ರೀತಿಯ ಅಭಿಮಾನವಿತ್ತು.

## ಪಾಠಧೋರಣೆ

ಶಾಸ್ತ್ರಿಗಳವರ ಪಾಠಧೋರಣೆಯನ್ನು ನಾನು ಹೇಗೆ ವರ್ಣಿಸಲಾದೀತು ?

ಸ್ಫೂರ್ಜದ್ಗಂಗಾಪ್ರವಾಹಾನುಕರಣಮುಮಲೋ ಭಾರತೀತೀರ್ಥ ಏಷಃ

ಎಂಬ ಪೂರ್ವಿಕರ ವಾಕ್ಯವೊಂದನ್ನು ಜ್ಞಾಪಕಕ್ಕೆ ತರುತ್ತಿತ್ತು. ಕನ್ನಡದಲ್ಲಿ ವಿವರಣೆ ಹೇಳುವರು. ನಡುನಡುವೆ ಇಂಗ್ಲಿಷ್ ಮಾತುಗಳನ್ನೂ ಬಳಸುವರು. ರೈಲು ಪ್ರಯಾಣ ಮೊದಲಾದ ಪರಿಚಿತ ಸಂದರ್ಭಗಳಿಂದ ದೃಷ್ಟಾಂತ ಕೊಡುವರು. ಕಾವ್ಯಗಳಿಂದ ಉದಾಹರಣೆ ಕೊಡುವರು.

ಒಂದು ಸಾರಿ ಮಾಯಾಸ್ವರೂಪವನ್ನು ಕುರಿತು ಹೇಳುವಾಗ 'ಚಂಪೂ ಭಾರತ'ದ ಒಂದು ವಾಕ್ಯವನ್ನು ಉದಾಹರಿಸಿದರು :

"ದ್ರೌಪದಿಗೆ ನಡು ಎಂಬ ಅಂಗವಿತ್ತೆಂಬುದನ್ನು ಅನುಮಾನ (Inference) ದಿಂದ ಹೇಳಬೇಕಾಗಿದೆ. ದೇಹದ ಮೇಲಣ ಅರ್ಧವೂ ಕೆಳಗಿನ ಅರ್ಧಭಾಗವೂ ಕೂಡ ಬರುತ್ತಿದ್ದವು. ಆದದ್ದರಿಂದ ಆ ಶಿರೋಭಾಗ ಪಾದಭಾಗಗಳೆರಡೂ ಒಂದೇ ಒಡಲಿಗೆ ಸೇರಿದವು. ಅವೆರಡನ್ನೂ ಒಟ್ಟುಗೂಡಿಸುವ ಅವಯವ ಒಂದು ಇದ್ದಿರಲೇಬೇಕು—ಎಂದು ನಾವು ಅನ್ವಯವ್ಯತಿರೇಕತರ್ಕದಿಂದ ಅನುಮಾನಿಸುತ್ತೇವೆ. ನಡು ಎಂಬುದಿತ್ತೋ ಇಲ್ಲವೋ ! ಅಂಥ ಬಡ ನಡು. ಮಾಯಾ ವಿಚಾರವೂ ಹಾಗೆಯೇ. ಅದು ಇದೆಯೋ ? ಇಲ್ಲ. ಇಲ್ಲವೋ ? ಇದೆ. ಹೀಗೆ."

ಶಾಸ್ತ್ರಿಗಳ ಪ್ರವಚನ ರೀತಿಗೆ ಇದು ಒಂದು ಸಣ್ಣ ಮಾದರಿ.

ಶಾಸ್ತ್ರಿಗಳು ಎಲ್ಲ ಕಾವ್ಯಗಳನ್ನೂ ಪುರಾಣಗಳನ್ನೂ ನೋಡಿದ್ದವರು. ಇದರ ಜೊತೆಗೆ ಬಹು ವಿದ್ವತ್ಸಂಪರ್ಕದಿಂದ ಸಂಪ್ರದಾಯ ಮರ್ಯಾದೆಗಳನ್ನು ತಿಳಿದುಕೊಂಡಿದ್ದವರು. ಅಧ್ಯಯನಕ್ಕೆ ಕುಳಿತಾಗ ಇವರು ಘನಪಾಠಿಗಳೆಂದೇ ತೋರುತ್ತಿತ್ತು. ಅಷ್ಟು ಶುದ್ಧವಾಗಿತ್ತು ಅವರ ಕಂಠಸ್ವರ ಮತ್ತು ಉದಾತ್ತಾನುದಾತ್ತಾದಿಗಳ ಉಚ್ಚಾರ.

## ಒಂದು ಉಪಮಾನ

ವಿರೂಪಾಕ್ಷಶಾಸ್ತ್ರಿಗಳು ಪಾಠದ ಅವಸರದಲ್ಲಿ ಉದಾಹರಣೆಗಾಗಿ ವಿನೋದದ ಕಥೆಗಳನ್ನು ಹೇಳುತ್ತಿದ್ದದ್ದುಂಟು. ವಿರಕ್ತಿಯನ್ನು ಕುರಿತು ಹೀಗೆ ಹೇಳುತ್ತಿದ್ದರು :

"ನೋಡ್ರಿ. ನಮಗೆ ಯಾವುದೋ ಕಾರಣದಿಂದ ಹೊಟ್ಟೆ ಭಾರವಾಗಿ ಗುಡಗುಡ ಅಂತಿರುತ್ತದೆ. ಆಗ ತೋರುತ್ತದೆ, ಕೊಂಚ ವಿರೇಚಕ ತೆಗೆದು ಕೊಂಡರೆ ಜಡ್ಡು ಹೋಗಿ ಮೈ ಹಗುರವಾಗುತ್ತದೆ—ಎಂದು. ಆಗ 'ಈ ಹೊತ್ತು ಬುಧವಾರ, ಪುರಸತ್ತಾಗಿದೆ'—ಎಂದು ಒಂದು ಚಟಾಕು ಹರಳೆಣ್ಣೆ ಕುಡಿಯೋಣ. ಅನಂತರ ವಿರೇಚನಕ್ಕಾಗಿ ಕಾದಿರೋಣ. ಘಂಟೆ ಒಂಭತ್ತು ಹತ್ತಾದರೂ ಹಾಗೆಯೇ ಇರುವುದಾಗುತ್ತದೆ. ಎಣ್ಣೆ ಹೊಟ್ಟೆಯಾಗೆ ಗುಡು ಪ್ಪೆಂದು ಕೂತುಬಿಟ್ಟಿರ್ರ್ತದೆ. ಘಂಟೆ ಹನ್ನೊಂದಾಯಿತೆನ್ನಿ. ಆಗ ಅಂದು ಕೋತೇವು: 'ಇದು ಹೀಗಾಗೋದಿಲ್ಲ. ಸ್ನಾನಮಾಡಿ ಸಂಧ್ಯಾ ಮುಗಿಸಿ ಭೋಜನ ಮಾಡಿದರೆ ಆ ಶಾಖದಿಂದ ದೇಹದೊಳಗಿನ ಕಶ್ಮಲ ಕರಗಿ ಆ ಭಾರದಿಂದ ಜಾರಿಬಿದ್ದೀತು'—ಅಂತ. ನಾವು ಇಷ್ಟೆಲ್ಲ ಯೋಚನೆ ಮಾಡಿ ಸ್ನಾನ ಮಾಡಿ ಮೈ ಒರಸಿಕೊಂಡು ಸಂಧ್ಯಾವಂದನೆಗೆ ಕೂಡಬೇಕು ಅಂತ ಮಡಿಯುಟ್ಟು ಕಚ್ಚೆ ತೀಡುತ್ತಿರುವ ಕಾಲದಲ್ಲಿ ಬಂದುಬಿಡ್ತದೆ ನೋಡ್ರಿ—ಮಾಡಿದ ಸ್ನಾನವೆಲ್ಲ ವ್ಯರ್ಥ!

"ವಿರಕ್ತಿ ಎಂಬುದೂ ಹೀಗೆಯೇ. ಸಂಸಾರ, ನಿಷ್ಠುರ, ಸಾಲ, ಮುಜಗರ ಇದೆಲ್ಲ ಅನುಭವಿಸಿ, 'ಸಾಕಪ್ಪ ಸಂಸಾರ' ಅನ್ನಿಸುತ್ತದೆ. ಆಗ ಹೋಗಿ ಗುರು ಗಳವರಲ್ಲಿ ಬೇಡಿ, ಕಾಷಾಯ ಬೇಕೆಂದು ತಲೆ ಮುಂಡನ ಮಾಡಿಸಿಕೋತಾ ಇರುವ ಕಾಲಕ್ಕೆ ಬಂದುಬಿಡ್ತದೆ ದಾರಾಪುತ್ರಾದಿಗಳ ಚಿಂತಿ. 'ಎಲಾ ಇಷ್ಟು ಒಳ್ಳೇ ಹೆಂಡತಿಮಕ್ಕಳನ್ನು ಬಿಟ್ಟು ಹೋಗಬೇಕಲ್ಲ—ನನ್ನ ಮಕ್ಕಳು ಎಂಥ ಬುದ್ಧಿವಂತರು!—ಇವರನ್ನು ಯಾಕೆ ಬಿಟ್ಟುಹೋಗಬೇಕು!' ಆರು ತಿಂಗಳ ವೈರಾಗ್ಯ ಒಂದು ಕ್ಷಣದಲ್ಲಿ ಬಿಟ್ಟುಹೋಗ್ತದೆ.

"ಆದದ್ದರಿಂದ ನಮ್ಮ ವೈರಾಗ್ಯಗಳನ್ನು ನೆಚ್ಚತಕ್ಕದ್ದಲ್ಲ. ಸಾಲ, ಕಷ್ಟ ಎಂದರೆ ವೈರಾಗ್ಯ ಬರುತ್ತದೆ. ಒಳ್ಳೆಯ ಸೀರೇ ನೋಡಿದರೆ ವೈರಾಗ್ಯ ಹಾರಿ ಹೋಗ್ತದೆ ಇದನ್ನು ತಿಳಿದೇ ದೊಡ್ಡ ಗುರುಗಳು (ಶೃಂಗೇರಿ ಸನ್ನಿಧಾನದವರು) ಯಾರಿಗೂ ಸಂನ್ಯಾಸ ಕೊಡುತ್ತಿರಲಿಲ್ಲ. ಯಾರಾದರೂ ಬಂದು ಸಂನ್ಯಾಸ ಬೇಕೆಂದು ಕೇಳಿದರೆ,'ಸಂನ್ಯಾಸಿಗಳ ಹಾಗೆ ಇದ್ದುಬಿಡ್ರಲಾ. ಅದನ್ನು ಕೊಡೋ ದೇನು? ಅದು ಕೊಡುವ ವಸ್ತುವಲ್ಲ. ಮಠದಾಗೆ ಭೋಜನಮಾಡ್ರಿ. ಶಾರದಮ್ಮ ನವರ ಸೇವೆ ಮಾಡ್ರಿ. ಪುರಾಣಶ್ರವಣ ಮಾಡ್ರಿ. ನಿಶ್ಚಿಂತರಾಗಿದ್ದುಬಿಡ್ರಿ. ಅದೇ ತಾನೆ ಸಂನ್ಯಾಸ?' ಎನ್ನುತ್ತಿದ್ದರು. ಇನ್ನೂ ಬಲವಂತವಾಗಿ ಯಾರಾದರೂ ಕೇಳಿದರೆ 'ಬೇಗ ಬಂದ ವೈರಾಗ್ಯವನ್ನು ನಂಬತಕ್ಕದ್ದಲ್ಲ' ಎನ್ನುವರು.

"ಆದದ್ದರಿಂದ ವೈರಾಗ್ಯಕ್ಕಾಗಿ ಆತುರ ಪಡಬಾರದು. ಬಂದ ವೈರಾಗ್ಯ ದೃಢವಾಗಿ ಬಹುಕಾಲ ಇರುತ್ತದೆಯೆ?—ಎಂದು ನೋಡಬೇಕು."

## ಬಿರುದು

ವಿರೂಪಾಕ್ಷಶಾಸ್ತ್ರಿಗಳವರಿಗೆ ಇಂಡಿಯ ಸರಕಾರದವರು 'ಮಹಾಮಹೋಪಾಧ್ಯಾಯ' ಎಂಬ ಬಿರುದನ್ನು ಕೊಟ್ಟರು. ನಮ್ಮ ಮಹಾರಾಜರು 'ವಿದ್ಯಾನಿಧಿ' ಎಂಬ ಬಿರುದನ್ನು ಕೊಟ್ಟರು. ಅದರಿಂದ ನಮಗೆಲ್ಲ ಆಗಿದ್ದ ಸಂತೋಷವನ್ನು ಪ್ರಕಟಪಡಿಸಬೇಕೆಂದು ಸಂಕಲ್ಪಿಸಿ, ಅದಕ್ಕಾಗಿ ಒಂದು ಸತ್ಕಾರ ಸಮಿತಿಯನ್ನು ಮಾಡಿಕೊಂಡೆವು. ಹಿಂದೆ ಸ್ಮರಿಸಿರುವ ಬಿ. ವಿ. ಲಕ್ಷ್ಮಣರಾಯರು ಆ ಸಮಿತಿಯಲ್ಲಿ ಮುಖ್ಯರಾಗಿದ್ದರು. ಬಹುಮಾನ ಸಭೆ ಗೊತ್ತಾಗಿದ್ದದ್ದು ಒಂದು ಭಾನುವಾರ ಮಧ್ಯಾಹ್ನ ಐದು ಘಂಟೆಗೆಂದು.

## ಶಾಸ್ತ್ರಿಗಳ ತಕರಾರು

ಅಂದು ಸುಮಾರು ನಾಲ್ಕು ಘಂಟೆಯ ವೇಳೆಗೆ ನಮ್ಮಲ್ಲಿ ಕೆಲ ಮಂದಿ ಶಂಕರಮಠಕ್ಕೆ ಬಂದೆವು. ಅಲ್ಲಿ ನಡೆಯಬೇಕಾಗಿದ್ದ ಏರ್ಪಾಟುಗಳನ್ನು ನೋಡಿಕೊಂಡು, ಶಾಸ್ತ್ರಿಗಳನ್ನು ಒಂದುಸಲ ಎಚ್ಚರಿಸಿ ಬರೋಣವೆಂದು ಅವರ ಮನೆಗೆ ಹೋದೆವು. ಶಾಸ್ತ್ರಿಗಳೊಡನೆ ನಾವು ಮೊದಲು ಈ ಪ್ರಸ್ತಾವವನ್ನೆತ್ತಿದ್ದಾಗ ನಮ್ಮ ಈ ಸಂಕಲ್ಪಕ್ಕೆ ಅವರು ಒಪ್ಪಿರಲಿಲ್ಲ. ಏನೇನೋ ತಕರಾರು ಹೇಳಿದ್ದರು. ನಾವು ಬಹುವಿಧವಾಗಿ ಒತ್ತಾಯಮಾಡಿದ ಮೇಲೆ "ನೋಡೋಣ" ಎಂದಿದ್ದರು.

ಆದದ್ದರಿಂದ ಆಸಾಮಿಯನ್ನು ಖಾತರಿಮಾಡಿಕೊಳ್ಳೋಣವೆಂದು ನಮ್ಮ ತವಕ.

ಮನೆಯಲ್ಲಿ ಹೋಗಿ ವಿಚಾರಿಸಿದರೆ ಶಾಸ್ತ್ರಿಗಳಿಲ್ಲ. "ಬಹಳ ಹೊತ್ತಾಯಿತು ಹೋಗಿ" ಎಂದರು. ನಾವೇನು ಮಾಡತಕ್ಕದ್ದು? ಎಲ್ಲೆಲ್ಲಿಯೋ ಹುಡುಕಿ ಸುತ್ತಾಡಿದೆವು. ನಾಲ್ಕೂ ಮುಕ್ಕಾಲು ಘಂಟೆಯಾಯಿತು. ಕೊನೆಗೆ ಪತ್ತೆಮಾಡಿದೆವು. ಶಾಸ್ತ್ರಿಗಳು ಗುರುದೇವಾಲಯದ ಪಶ್ಚಿಮ ಭಾಗದಲ್ಲಿ ಚರಂಡಿ ಪಕ್ಕದ ಹುಲ್ಲಿನ ಮೇಲೆ ಕುಳಿತಿದ್ದಾರೆ! ನಾವು ಕೇಳಿದೆವು:

"ಏನು ಇಲ್ಲಿ?"

"ಗುರುಗಳು. ದಯಮಾಡಿಸುತ್ತಾರೆ. ಅದಕ್ಕಾಗಿ."

"ನಮ್ಮ ಗುರುಗಳಿದ್ದಾರಲ್ಲ!" ಎಂದು ನಾವು ಸಮಾಧಾನಪಟ್ಟೆವು. ಹತ್ತು ನಿಮಿಷದ ತರುವಾಯ ಹೊರಕ್ಕೆ ಬಂದು ನೋಡಿದೆವು. ಶಾಸ್ತ್ರಿಗಳಿರಲಿಲ್ಲ. ಮತ್ತೆ ಯೋಚನೆ ಮಾಡಿದೆವು. ಅವರು ತಮ್ಮ ಗುರುಗಳೆಂದು ಹೇಳಿದವರು ಯಾರೆಂಬುದು ನಮಗೆ ತಿಳಿಯಲಿಲ್ಲ. ಆದದ್ದಾಯಿತೆಂದು ಕಾರಿನಲ್ಲಿ ಕುಳಿತು ಚಾಮರಾಜಪೇಟೆಯ ಐದನೆಯ ರಸ್ತೆಯಲ್ಲಿ ತಿರುಗಿದೆವು. ಅಲ್ಲಿ ಅಡ್ಡರಸ್ತೆಯ ಸಮೀಪದಲ್ಲಿ ನಮ್ಮ ಗುರುಗಳು ಬೇಗ ಬೇಗ ಹೆಜ್ಜೆ ಹಾಕುತ್ತಿದ್ದರು. ನಾವು ಕೇಳಿದೆವು :

ನಾ : "ಎಲ್ಲಿಗೆ ಪ್ರಯಾಣ?"

ಶಾ : "ನಮ್ಮ ಗುರುಗಳ ಮನೆಗೆ."

ನಾ : "ಯಾರು ತಮ್ಮ ಗುರುಗಳು?"

ಶಾ : "ವಿದ್ವಾಂಸರು—ನುಗ್ಗೆಹಳ್ಳಿ ತಿರುಮಲಾಚಾರ್ಯರು."

ನಾವು ನುಗ್ಗೇಹಳ್ಳಿ ತಿರುಮಲಾಚಾರ್ಯರವರನ್ನೂ ವಿರೂಪಾಕ್ಷಶಾಸ್ತ್ರಿಗಳವರನ್ನೂ ಗಾಡಿಯಲ್ಲಿ ಕುಳ್ಳಿರಿಸಿಕೊಂಡು ಮಠಕ್ಕೆ ಬಂದೆವು. ಅಲ್ಲಿ ವಿರೂಪಾಕ್ಷ ಶಾಸ್ತ್ರಿಗಳವರಿಗಾಗಿ ಒಂದು ಪೀಠವನ್ನು ಅಣಿಮಾಡಿದ್ದೆವು. ಅದರ ಮೇಲೆ ಒಂದು ಸಣ್ಣ ರತ್ನಗಂಬಳಿ ಹಾಸಿದ್ದೆವು. ವಿರೂಪಾಕ್ಷಶಾಸ್ತ್ರಿಗಳವರು ಆ ಪೀಠದಲ್ಲಿ ನುಗ್ಗೆಹಳ್ಳಿ ತಿರುಮಲಾಚಾರ್ಯರನ್ನು ಕೂಡಿಸಿ ಗುರುವಂದನಕ್ಕೆ ಉಪಕ್ರಮ ಮಾಡಿದರು. ಆ ವಂದನಕ್ರಮವನ್ನು ಹಿಂದೆ ಪ್ರಸ್ತಾವಿಸಿದ್ದೇನೆ (ಪುಟ ೧೧೦). ಆಮೇಲೆ ನಾವು ಮಠದ ಉಗ್ರಾಣದಲ್ಲಿ ಹುಡುಕಿ ಬೇರೊಂದು ಮಣೆ ತರಲು ಕೆಲವು ನಿಮಿಷ ಬೇಕಾಯಿತು. ಶಾಸ್ತ್ರಿಗಳವರು ಆ ಇನ್ನೊಂದು ಮಣೆಯ ಮೇಲೆ ಕುಳಿತರು.

ಆಮೇಲೆ ಭಾಷಣಗಳು ನಡೆದವು.

## ಪ್ರತ್ಯುತ್ತರ

ಶಾಸ್ತ್ರಿಗಳವರು ಪ್ರತ್ಯುತ್ತರ ಹೇಳುವಾಗ ಹೀಗೆಂದರು :

"ತಾವೆಲ್ಲ ಬಹು ಸಂತೋಷಪಟ್ಟಿದ್ದೀರಿ. ನನಗೂ ಬಹು ಸಂತೋಷ. 'ನೀ ವಿದ್ಯಾನಿಧಿ', 'ನೀ ಮಹಾಮಹೋಪಾಧ್ಯಾಯ' ಎಂದರೆ ಯಾರಿಗೆ ತಾನೆ ಸಂತೋಷವಾಗಲಿಕ್ಕಿಲ್ಲ? ಇದನ್ನು ನಮ್ಮ ಮಹಾರಾಜರು ಕೊಟ್ಟಿದ್ದಾರೆ; ಸಾರ್ವಭೌಮ ಸರಕಾರದವರು ಕೊಟ್ಟಿದ್ದಾರೆ. ಇದೆಲ್ಲ ಸಂತೋಷ ಪಡಬೇಕಾದ ವಿಷಯವೇ. ಆದರೆ ಇನ್ನೊಬ್ಬ ಮಹಾರಾಜ ಇದ್ದಾನಲ್ಲ—

ಸಾರ್ವಭೌಮರಿಗಿಂತ ದೊಡ್ಡ ರಾಜ—'ಧರ್ಮರಾಜಃ ಪಿತೃಪತಿಃ' ಎಂದು? ಎಂದೋ ಒಂದು ದಿನ ಅಲ್ಲಿಗೆ ಹೋಗಬೇಕಾಗುತ್ತದಲ್ಲ. ಆಗ ಅವ ಕೇಳ್ತಾನು– 'ಎಲಾ! ಅನ ಕೊಟ್ಟ, ನೀ ತಗೊಂಡಿ! ಯಾವ ವಿದ್ಯಾಕ್ಕೆ ನಿಧಿಯೋ ನೀನು ?'—ಅಂತ ಕೇಳುತಾನಲ್ಲ—ಆಗ ನಾವು ಏನು ಹೇಳಬೇಕು ?"

ಎಲ್ಲ ಮುಗಿದ ಮೇಲೆ ಶಾಸ್ತ್ರಿಗಳನ್ನು ಅವರ ಮನೆಗೆ ಕರೆದುಕೊಂಡಹೋಗಿ ಬಿಡತಕ್ಕದ್ದೆಂದು ನಾವೆಲ್ಲ ಅವರ ಸಂಗಡ ಹೋದೆವು. ಅವರ ಮನೆಯಲ್ಲಿ ಹೆಣ್ಣುಮಕ್ಕಳು ಮನೆಯ ಮುಂದೆ ರಂಗೋಲಿಯಿಟ್ಟು ಶಾಸ್ತ್ರಿಗಳವರಿಗೆ ಆರತಿ ಮಾಡಲು ಸಿದ್ಧಪಡಿಸಿಕೊಂಡಿದ್ದರು. ಶಾಸ್ತ್ರಿಗಳವರು ಆ ಸಮಯದಲ್ಲಿ ತಮ್ಮ ಪಕ್ಕದಲ್ಲಿ ನಿಂತಿದ್ದ ವೈದ್ಯನಾಥಶಾಸ್ತ್ರಿಗಳವರನ್ನು ರಟ್ಟೆಹಿಡಿದು ಸೆಳೆದು ಆ ರಂಗೋಲಿ ಮಣೆಯ ಮೇಲೆ ನಿಲ್ಲಿಸಿದರು. ವೈದ್ಯನಾಥಶಾಸ್ತ್ರಿಗಳವರು ನಗುತ್ತ

ವೈ : "ಒಂದು ಕ್ಷಣ ಹೇಳಿದ ಮಾತು ಕೇಳಬಾರದೆ ? ನಿಮ್ಮ ಹೆಣ್ಣು ಮಕ್ಕಳಲ್ಲವೆ ಅವರು ?"

ವಿ : "ಅವರನ್ನು ನೀವೂ ಹೆಣ್ಣುಮಕ್ಕಳಂತೆ ನೋಡತಕ್ಕವರು ತಾನೆ ?"

ಹೀಗೆ ನಿರ್ಬಂಧದಲ್ಲಿ ನಮ್ಮ ಸತ್ಕಾರಪ್ರಯತ್ನ ಮುಕ್ತಾಯವಾಯಿತು.

## ಮಾಲವೀಯರ ಭೇಟಿ

೧೯೩೬–೩೭ರಲ್ಲಿ ಮಹನೀಯರಾದ ಪಂಡಿತ ಮದನಮೋಹನ ಮಾಲವೀಯರು ಮೈಸೂರಿಗೆ ಅತಿಥಿಯಾಗಿ ಬಂದಿದ್ದರು. ಅವರು ಹಿಂದೂ ಸಮಾಜದಲ್ಲಿ ಅವಶ್ಯವಾಗಿ ನಡೆಯಬೇಕೆಂದು ಭಾವಿಸಿಕೊಂಡಿದ್ದ ಒಂದು ಸುಧಾರಣೆಯನ್ನು ಕುರಿತು ಮೈಸೂರು ವಿದ್ವಾಂಸರಲ್ಲಿ ಸಮಾಲೋಚನೆ ನಡೆಸಬೇಕೆಂದು ಉದ್ದೇಶಿಸಿದ್ದರು. ಅದಕ್ಕಾಗಿ ಒಂದು ದಿನ ಸಂಜೆ ನಾಲ್ಕು ಘಂಟೆಯ ವೇಳೆಗೆ ಶ್ರೀ ಪರಕಾಲಮಠದಲ್ಲಿ ಒಂದು ಮಹಾಸಭೆ ಸೇರಿತು. ಆ ಸಭೆಗೆ ಶ್ರೀ ಸ್ವಾಮಿಗಳವರು ಅಧ್ಯಕ್ಷರಾಗಿದ್ದರು. ವಿರೂಪಾಕ್ಷಶಾಸ್ತ್ರಿಗಳು ಮೊದಲಾದ ಮಹಾವಿದ್ವನ್ಮಂಡಲಿ ಸೇರಿತ್ತು. ಲೌಕಿಕರಲ್ಲಿ ದಿವಾನ್ ಸರ್ ಮಿರ್ಜಾ ಅವರು, ಎ. ಸುಬ್ರಹ್ಮಣ್ಯ ಅಯ್ಯರ್, ವಿ. ಸುಬ್ರಹ್ಮಣ್ಯಯ್ಯರ್ ಮೊದಲಾದ ಗಣ್ಯ ವ್ಯಕ್ತಿಗಳು ಬಹುಮಂದಿ ಇದ್ದರು. ಆ ಸಭೆಯಲ್ಲಿ ಪಂಡಿತ ಮಾಲವೀಯರವರು ಪ್ರತಿಪಾದಿಸಿದ ವಿಷಯ ಹೀಗೆ:

ಹಿಂದೂ ಸಮಾಜ ದುರ್ಬಲವಾಗುತ್ತಿದೆ. ಈ ಪ್ರಜಾಯುಗದಲ್ಲಿ ಸಂಖ್ಯಾ

ಬಲಕ್ಕೆ ಹೆಚ್ಚು ಗಣನೆಯುಂಟು. ರಾಜ್ಯದ ಎಲ್ಲ ವಿಷಯಗಳಲ್ಲಿಯೂ ಸಂಖ್ಯಾಧಿಕ್ಯದಂತೆ ನಿರ್ಣಯಗಳಾಗುತ್ತವೆ. ಹೀಗಿರುವುದರಿಂದ ಹಿಂದೂ ಸಮಾಜವು ತನ್ನ ಸಂಖ್ಯಾಬಲವನ್ನು ಕಾಪಾಡಿಕೊಳ್ಳುವುದು ಅದರ ಯೋಗಕ್ಷೇಮಗಳಿಗೆ ತುಂಬ ಅವಶ್ಯ.

ಆದರೆ ಹಿಂದೂಗಳಲ್ಲಿ ಬಹು ಮಂದಿ ಮುಸಲ್ಮಾನ್, ಕ್ರೈಸ್ತ ಮೊದಲಾದ ಅನ್ಯ ಮತಗಳ ಪ್ರಚಾರಕರ ಪ್ರೋತ್ಸಾಹಕ್ಕೂ ಪ್ರಭಾವಕ್ಕೂ ಸಿಕ್ಕಿ ಮತಾಂತರಗಳನ್ನು ಸೇರುತ್ತಿದ್ದಾರೆ. ಹೀಗೆ ಹಿಂದೂ ಸಮಾಜಕ್ಕೆ ಸಂಖ್ಯಾಬಲ ನಷ್ಟವಾಗುತ್ತಿದೆ. ಹಿಂದೂ ಸಮಾಜವನ್ನು ಬಿಟ್ಟು ಹೋಗುತ್ತಿರುವವರಲ್ಲಿ ಪಂಚಮರೆನಿಸಿಕೊಂಡ (ಹರಿಜನವೆಂಬ) ಜಾತಿಯವರು ಹೆಚ್ಚು. ಆ ಜಾತಿಯ ಜನರಿಗೆ ಉತ್ತಮ ವರ್ಣದವರು ಯಾವ ವಿಧವಾದ ಸಹಾಯವನ್ನೂ ಕೊಡುತ್ತಿಲ್ಲ. ಆ ಜನಕ್ಕೆ ತಮ್ಮ ಮತವೇನೆಂಬುದೇ ತಿಳಿಯದು. ಅವರಿಗೆ ತಿಳಿವಳಿಕೆ ಕೊಡಲು ಬ್ರಾಹ್ಮಣ ಸಂಸ್ಥೆಗಳಲ್ಲಿ ಮಠಗಳಾವುವೂ ಯಾವ ಏರ್ಪಾಟನ್ನೂ ಇಟ್ಟಿಲ್ಲ.

ಹರಿಜನರೇ ಏಕೆ, ಇತರ ವರ್ಣಗಳವರಿಗೂ ನಮ್ಮ ಉತ್ತಮ ವರ್ಣದವರೂ ಮತಸಂಬಂಧವಾದ ಯಾವ ದೀಕ್ಷೆ, ಸಂಸ್ಕಾರಗಳನ್ನೂ ಏರ್ಪಡಿಸಿಲ್ಲ. ಹೀಗೆ ಮತಸಂಸ್ಕಾರವಿಲ್ಲದವರು ಸನಾತನಧರ್ಮದ ಮಹತ್ತ್ವವನ್ನು ಕಾಣದೆ ತಮ್ಮ ಮತದಲ್ಲಿ ಏನೂ ತಿರುಳಿಲ್ಲವೆಂದು ಭ್ರಾಂತಿಪಟ್ಟು ಮತಾಂತರಗಳಿಗೆ ಸೇರುವುದು ಅಪರೂಪವಲ್ಲ.

ಈ ವಿಷಮ ಪರಿಸ್ಥಿತಿಯಲ್ಲಿ ಹಿಂದೂ ಜನರು ತಮ್ಮ ಧರ್ಮವನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ ಕೆಲವು ಏರ್ಪಾಟುಗಳನ್ನು ನಡಸುವುದು ಈಗ ತೀರ ಅವಶ್ಯವಾಗಿದೆ. ಶ್ರೀಮಠದಂಥ ಸಂಸ್ಥೆಗಳವರು ಈ ಕಾರ್ಯವನ್ನು ಕೈಗೊಳ್ಳಬೇಕು.

## ಮಾಲವೀಯರ ಸೂಚನೆಗಳು

೧. ಇಂಥ ಧರ್ಮಪೀಠದಿಂದ ನಿಯುಕ್ತರಾದ ಕೆಲಮಂದಿ ವಿದ್ವಾಂಸರು ಎಲ್ಲ ಬ್ರಾಹ್ಮಣೇತರ ವರ್ಗಗಳಿಗೂ ಒಂದು ಮತಸಂಸ್ಕಾರವನ್ನು ಮಾಡಿಸಿ ದೀಕ್ಷೆ ಕೊಡಲು ಸಿದ್ಧರಾಗಬೇಕು.

೨. ಯಾವ ಹಿಂದೂ ಮನುಷ್ಯ—ಗಂಡಸಾಗಲಿ ಹೆಂಗಸಾಗಲಿ—ಸಂಸ್ಕಾರ ಬೇಕೆಂದು ಬಯಸುತ್ತಾನೋ ಆತನಿಗೆ ಒಂದು ಗೊತ್ತಾದ ಕ್ರಮದಲ್ಲಿ ಸಂಸ್ಕಾರ ಮಾಡಿಸತಕ್ಕದ್ದು.

೩. ಒಂದು ಶುಭದಿನವನ್ನು ಗೊತ್ತುಮಾಡಿ-ಶ್ರೀರಾಮನವಮಿ, ಕೃಷ್ಣಾಷ್ಟಮಿ, ಶಿವರಾತ್ರಿ, ದುರ್ಗಾಷ್ಟಮಿ, ಮಹಾನವಮಿ—ಇಂಥ ಒಂದು ದಿವಸ ಸಂಸ್ಕಾರಾಪೇಕ್ಷಿಗಳು ಒಂದು ಪವಿತ್ರ ಕ್ಷೇತ್ರದಲ್ಲಿ ಸೇರತಕ್ಕದ್ದು.

೪. ಅವರು ಅಂದು ನದಿಯಲ್ಲಿಯೋ ಕೆರೆಯಲ್ಲಿಯೋ ಸ್ನಾನಮಾಡಿ ಮಡಿಬಟ್ಟೆಗಳನ್ನು ಉಟ್ಟು ಅವರ ಮನೆಯ ಸಂಪ್ರದಾಯದಂತೆ ಮತ್ತು ಅವರವರ ಇಷ್ಟದಂತೆ ವಿಭೂತಿಯನ್ನೋ ನಾಮವನ್ನೋ ಧರಿಸಿ ಗೊತ್ತಾದ ಸ್ಥಳಕ್ಕೆ ಬರತಕ್ಕದ್ದು.

೫. ಅಲ್ಲಿ ನಿಯುಕ್ತರಾದವರು ಆ ಭಕ್ತಜನರಿಂದ ಕಲಶವಿಡಿಸಿ ಪೂಜೆ ಮಾಡಿಸಿ ಪ್ರದಕ್ಷಿಣ ನಮಸ್ಕಾರ ಮಾಡಿಸತಕ್ಕದ್ದು.

೬. ಅನಂತರ ಅವರಿಂದ ಹನ್ನೆರಡು ಸೂರ್ಯನಮಸ್ಕಾರಗಳನ್ನು ಮಾಡಿಸತಕ್ಕದ್ದು.

೭. ಇದಾದ ಮೇಲೆ ನಿಯುಕ್ತನಾದ ಬ್ರಾಹ್ಮಣನು ಆ ಜನರನ್ನು ಒಬ್ಬೊಬ್ಬರನ್ನಾಗಿ ಕರೆದು ಅವರಿಗೆ ಶ್ರೀರಾಮತಾರಕಮಂತ್ರವನ್ನೋ ಶಿವಪಂಚಾಕ್ಷರಿಯನ್ನೋ ಶ್ರೀಮನ್ನಾರಾಯಣ ಅಷ್ಟಾಕ್ಷರಿಯನ್ನೋ ಹೇಳಿಕೊಟ್ಟು, ಅವರ ಬಾಯಿಂದ ಮೂರು ಮೂರು ಸಲ ಹೇಳಿಸತಕ್ಕದ್ದು. ಇದೇ ಉಪದೇಶ.

೮. ಇದಾದನಂತರ ಆ ಭಕ್ತರು ತಮ್ಮ ತಮ್ಮ ಕಲಶಗಳನ್ನು ಕೈಯಲ್ಲಿ ಹಿಡಿದು ಊರಿನ ಗುಡಿಗೆ ಹೋಗಿ, ಪ್ರದಕ್ಷಿಣೆಮಾಡಿ ಮಂಗಳಾರತಿ ಮಾಡಿಸಿ ಪ್ರಸಾದ ತೆಗೆದುಕೊಳ್ಳತಕ್ಕದ್ದು.

೯. ಆಮೇಲೆ ಅವರು ಮನೆಗೆ ಹೋಗಿ ಆ ದಿನದ ಮಟ್ಟಿಗಾದರೂ ಮದ್ಯ ಮಾಂಸಗಳನ್ನು ಮುಟ್ಟದೆ ನಿಯಮದಿಂದ ಇರತಕ್ಕದ್ದು.

೧೦. ಬಳಿಕ ಅವರು ಪ್ರತಿ ದಿನವೂ ಬೆಳಗ್ಗೆ ಅಥವಾ ಸಂಜೆ ತಮ್ಮ ಮನೆಯಲ್ಲಿ ದೇವರ ಪಟದ ಮುಂದೆ ದೀಪಹಚ್ಚಿ ಕುಳಿತು, ತಮಗೆ ಉಪದೇಶವಾಗಿದ್ದ ಮಂತ್ರವನ್ನು ಹತ್ತು ಸಲ ಜಪಿಸತಕ್ಕದ್ದು.

ಇಷ್ಟು ಮಾತ್ರದ ಸಂಸ್ಕಾರದೀಕ್ಷೆಯನ್ನಾದರೂ ನಮ್ಮ ಮಠಗಳು ಎಲ್ಲ ಹಿಂದೂ ಜನವರ್ಗಗಳಿಗೂ ಕೊಡಿಸುವ ವ್ಯವಸ್ಥೆ ಮಾಡಿದರೆ ಆಗ ಆ ಜನಕ್ಕೆ ಹಿಂದೂಮತ ತಮ್ಮದೆಂಬ ಅಭಿಮಾನವೂ ಹಿಂದೂ ಸಮಾಜ ತಮ್ಮದೆಂಬ ಮಮತೆಯೂ ಉಂಟಾಗುತ್ತದೆ. ಆಗ ಸಮಾಜದ ಮೇಲ್ದರ್ಜೆಗಳಿಗೂ ಕೆಳದರ್ಜೆಗಳಿಗೂ ಒಂದು ಅಭಿಮಾನದ ಸಂಬಂಧವೇರ್ಪಡುತ್ತದೆ. ಹಾಗಾದ

ಮೇಲೆ ಹಿಂದೂಧರ್ಮದ ವಿಷಯದಲ್ಲಿ ಅನ್ಯಮತಸ್ಥರು ನಡಸುತ್ತಿರುವ ಧಾಳಿ ತಗ್ಗುತ್ತದೆ. ಮೇಲಾಗಿ ಎಲ್ಲ ವರ್ಣಗಳವರಿಗೂ ಒಂದು ಆತ್ಮೋದ್ಧಾರದ ಉಪಾಯ ಲಭ್ಯವಾಗುತ್ತದೆ.

* * *

ಈ ಸುಧಾರಣೆಯನ್ನು ಪಂಡಿತ ಮಾಲವೀಯರು ಲಲಿತವಾದ ಸಂಸ್ಕೃತ ಭಾಷೆಯಲ್ಲಿ ಪ್ರತಿಪಾದನೆ ಮಾಡಿದರು. ಮತ್ತು ತಮ್ಮ ಸೂಚನೆಗಳನ್ನು ಅನುಕೂಲವಾದ ಶ್ರುತಿಸ್ಮೃತಿ ಪುರಾಣವಾಕ್ಯಗಳನ್ನು ಉದಾಹರಿಸಿ ಬಲಪಡಿಸಿದರು. ಆ ಉಪನ್ಯಾಸವು ವಿಷಯದಲ್ಲಿ ಗಂಭೀರವಾಗಿ, ರೀತಿಯಲ್ಲಿ ವಿನಯ ಸಂಪನ್ನವಾಗಿ, ಕ್ರಮದಲ್ಲಿ ಯುಕ್ತಿಯುಕ್ತವಾಗಿ, ಎಲ್ಲರಿಗೂ ಹೃದಯಂಗಮ ವಾಗಿತ್ತು.

ಉಪನ್ಯಾಸವಾದ ಮೇಲೆ ಮಾಲವೀಯರು ನನ್ನ ಕಡೆ ತಿರುಗಿ ತಾವು ಸಂಗ್ರಹಮಾಡಿದ್ದ ಸಂಸ್ಕೃತವಾಕ್ಯಗಳ ಸಂಕಲನವನ್ನು ನಾನು ಕನ್ನಡದಲ್ಲಿ ಪ್ರಕಟಿಸಬೇಕೆಂದು ಸಲಹೆ ಕೊಟ್ಟರು. ಆದರೆ ಆ ವಾಕ್ಯಗಳ ಮೂಲವನ್ನು ಅವರು ನನಗೆ ಕಳುಹಿಸಲಾಗಲಿಲ್ಲ. ಅವರ ನೂರಾರು ಹವ್ಯಾಸಗಳ ಗದ್ದಲ ದಲ್ಲಿ ಈ ಉದ್ದೇಶ ಹಿಂದಕ್ಕೆ ಬಿತ್ತು. ಅದು ಬೇರೆ ವಿಷಯ.

## ವಿವಾದ

ಆ ದಿನ ಭಾಷಣದ ನಂತರ ಪಂಡಿತರುಗಳು ಮಾತನಾಡಿದರು. ಅವರಲ್ಲಿ ವಿರೂಪಾಕ್ಷಶಾಸ್ತ್ರಿಗಳು ಮುಖ್ಯರು. ಇವರು ಮಾಲವೀಯರ ಉಪನ್ಯಾಸ ವನ್ನು ಅವಧಾನವಿಟ್ಟು ಕೇಳಿದರು. ಮಾಲವೀಯರನ್ನೇ ದಿಟ್ಟಿಸಿ ನೋಡು ತ್ತಿದ್ದರು. ಮಾಲವೀಯರು ಎಲ್ಲಿ ಶಾಸ್ತ್ರಸಂಪ್ರದಾಯಗಳಿಗೆ ಧಕ್ಕೆತರುವ ಸುಧಾರಣೆಗಳನ್ನು ಹೇಳಿಯಾರೋ ಎಂದು ಶಾಸ್ತ್ರಿಗಳಿಗೆ ಮನಸ್ಸಿನಲ್ಲಿ ಶಂಕೆ. "ಮಾಲವೀಯರು ಹೇಳಿದ್ದು ದೊಡ್ಡ ವಿಷಯ. ಲೋಕಕಾರುಣ್ಯದ ವಿಷಯ. ಅವರು ಹೇಳಿದ್ದೆಲ್ಲ ವಿಚಾರ ಮಾಡಬೇಕಾದದ್ದು" ಎಂದು ಮುಂತಾಗಿ ಶ್ಲಾಘನೆ ಮಾಡಿದರು. ಸಂಸ್ಕಾರದ ಆವಶ್ಯಕತೆಯನ್ನು ಶಾಸ್ತ್ರಿಗಳು ವಿರೋಧಿಸ ಲಿಲ್ಲ. ಆದರೆ ಮಾಲವೀಯರು ತಮ್ಮ ಉಪನ್ಯಾಸದಲ್ಲಿ

"ಸಂಸ್ಕಾರ ಪಡೆದ ಬ್ರಾಹ್ಮಣೇತರ ಜನರು ಶುಭದಿನಗಳಲ್ಲಿ, ಪುಣ್ಯದಿನ ಗಳಲ್ಲಿ ತಮಗೆ ಬಿಡುವಾದ ದಿನಗಳಲ್ಲಿ, ಭಾನುವಾರ ಅಥವಾ ಸೋಮವಾರ 'ರಾಮಾಯಣ'ವನ್ನೋ 'ಮಹಾಭಾರತ'ವನ್ನೋ—ಓದಬೇಕು, ಅಥವಾ

ಕೇಳಬೇಕು" ಎಂದು ಹೇಳುತ್ತಿದ್ದಾಗ ಶಾಸ್ತ್ರಿಗಳವರು ಅದಕ್ಕೆ ಪ್ರವೇಶಿಸಿ, "ಶ್ರೋತವ್ಯಂ—ಬ್ರಾಹ್ಮಣಮುಖೇನ ಶ್ರೋತವ್ಯಂ" ಎಂದರು. "ಬ್ರಾಹ್ಮಣ ಮುಖೇನ" ಎಂಬ ಮಾತನ್ನು ಒತ್ತೊತ್ತಿ ಹೇಳುತ್ತಿದ್ದರು.

ಅಂದು ಶ್ರೀ ಪರಕಾಲಮಠದ ಸ್ವಾಮಿಗಳವರು ಮೊದಲಿನಿಂದ ಕಡೆಯ ವರೆಗೂ ಪ್ರಸನ್ನರಾಗಿದ್ದರು. ವಿಷಯ ಬಹು ಮುಖ್ಯವಾದದ್ದೆಂದೂ ಅವಶ್ಯ ವಾಗಿ ಪರ್ಯಾಲೋಚನೆ ಪಡೆಯತಕ್ಕದ್ದೆಂದೂ ಸಮಾಧಾನವಚನಗಳನ್ನಾಡಿ ಸಭೆಯನ್ನು ಮುಕ್ತಾಯಮಾಡಿದರು.

## ಸ್ವಸ್ತಿ

ನಮ್ಮ ಶಾಸ್ತ್ರಿಗಳವರಿಗಾದರೋ ಮನಸ್ಸಿನಲ್ಲಿ ಶಂಕೆ ಬಾಧಿಸುತ್ತಿತ್ತು. ಮಾಲವೀಯರು ಪ್ರಭಾವಶಾಲಿಯಾದ ಸಾರ್ವಜನಿಕ ಪುರುಷರು. ಅಂಥ ವರು ಪುರಾತನ ಸಂಪ್ರದಾಯಗಳಿಗೆ ಕುಠಾರಪ್ರಾಯರಾದಾರೇನೋ ಎಂದು ಶಂಕೆ. ಅವರ ಮನಸ್ಸು ಹೀಗೆ ಉದ್ವಿಗ್ನವಾಗಿದ್ದಾಗ ಒಂದು ಪದ್ಯ ಹೇಳಿದರು :

ಮಾಲವ್ಯೋ ಮಹಿತಾನ್ವಯೋ ಮದನಜಿದ್ವರ್ಣಾಶ್ರಮಾಚಾರಯೋ-
ರ್ಭೇತ್ತೇತಿ ಪ್ರಥಿತಿರ್ನವಾಽಸ್ತು ಭುವನೇ ಶ್ರೀದೇಶಿಕಾನುಗ್ರಹಾತ್ ॥
ಯದ್ಯಪ್ಯತ್ರ ಕಲೌ ಬಲೀಯಸಿ ವೃಥಾ ಧರ್ಮಾಚ್ಚ್ಯವಂತೇ ಜನಾಃ
ತಾನಪ್ಯಧ್ವನಿ ಸದ್ಭಿರಾದೃತತಮೇ ಸಂಚಾಲಯತ್ವಸ್ವಹಂ ॥

ಮೇಲಿನ ಅರ್ಧದ ಅರ್ಥ ಹೀಗೆ: "ಮಾಲವೀಯರು ಮಹನೀಯ ವಂಶದಲ್ಲಿ ಹುಟ್ಟಿದವರು ; ಮನ್ಮಥನನು ಗೆದ್ದವರು (ಮದನಮೋಹನ—ಮದನ ಜಿತ್). ಇಂಥವರು ವರ್ಣಾಶ್ರಮಾಚಾರಗಳ ವ್ಯವಸ್ಥೆಯನ್ನು ಒಡೆದರು ಎಂಬ ಅಪಕೀರ್ತಿ ಇವರಿಗೆ ಬಾರದಿರಲಿ—ಸದ್ಗುರುಕೃಪೆಯಿಂದ."

* * *

ವಿರೂಪಾಕ್ಷಶಾಸ್ತ್ರಿಗಳು ಮೈಸೂರು ಸರಕಾರದ ಗೋರಕ್ಷಣ ವಿಚಾರ ಸಮಿತಿಗೆ ವಿಶೇಷಜ್ಞರಾಗಿ ಸಾಕ್ಷ್ಯಕೊಟ್ಟ ಸಂಗತಿಯನ್ನು ಬೇರೆ ಕಡೆ ಸ್ಮರಿಸಿ ದ್ದೇನೆ.

## ಶೈಲಿ

ವಿರೂಪಾಕ್ಷಶಾಸ್ತ್ರಿಗಳವರಿಗೆ ಗ್ರಂಥಕರ್ತನಾಗಬೇಕೆಂಬ ಚಪಲ ಬಂದಿದ್ದಂತೆ ತೋರುವುದಿಲ್ಲ. ನನಗೆ ತಿಳಿದ ಮಟ್ಟಿಗೆ ಅವರು ರಚಿಸಿದ ಪದ್ಯಗಳು ಎರಡೇ. ಈ ಮೇಲಿನದೊಂದು: ಇನ್ನೊಂದು ಅವರು 'ಪೂರ್ವಮೀಮಾಂಸಾಭಾಷ್ಯ'ಕ್ಕೆ

ಬರೆದ ಪೀಠಿಕೆಯಲ್ಲಿನ ಗುರುವಂದನ ಶ್ಲೋಕ. ಜೈಮಿನಿಯ ಸೂತ್ರಗಳ ಮೇಲೆ ಶಬರ ಸ್ವಾಮಿಗಳು ರಚಿಸಿರುವ ಭಾಷ್ಯವನ್ನು ಪುಣೆಯ ಆನಂದಾಶ್ರಮ ದವರು ಪ್ರಕಟಪಡಿಸಿದರು. ಅದು ಬಹುದೊಡ್ಡ ಗ್ರಂಥ. ಅದನ್ನು ಪರಿಷ್ಕಾರ ಪಡಿಸಿ ಟೀಕೆ ಟಿಪ್ಪಣಿಗಳನ್ನೊದಗಿಸಿ ಸಂಪಾದನ ಮಾಡಿದವರು ಹಿಂದೆ ಹೇಳಿದ ಮೀಮಾಂಸಾಕಂಠೀರವ ವೈದ್ಯನಾಥಶಾಸ್ತ್ರಿಗಳು. ಈ ಉದ್ಗ್ರಂಥಕ್ಕೆ ವಿರೂಪಾಕ್ಷಶಾಸ್ತ್ರಿಗಳವರಿಂದ ಒಂದು ಮುನ್ನುಡಿಯನ್ನು ಬರೆಯಿಸಿದರು. ಅದರಲ್ಲಿ ತೋರುತ್ತದೆ ಶಾಸ್ತ್ರಿಗಳ ಗದ್ಯಶೈಲಿ ಎಷ್ಟು ಮನೋಹರವಾದದ್ದೆಂದು.

## ವಿದ್ಯಾರ್ಥಿ ದಶೆಯಲ್ಲಿ

ವಿರೂಪಾಕ್ಷಶಾಸ್ತ್ರಿಗಳವರು ಸ್ವವಿಷಯವನ್ನು ಹೇಳುತ್ತಿದ್ದದ್ದು ತುಂಬ ಅಪರೂಪ. ಅದಕ್ಕೆ ಅವರಿಗೆ ಪುರಸತ್ತೂ ಇರಲಿಲ್ಲ. ಪ್ರಾಸ್ತಾವಿಕವಾಗಿ, ಬಹುಮಟ್ಟಿಗೆ ಉದಾಹರಣೆಗಾಗಿ ಅವಶ್ಯವಾದಾಗ ಒಂದೆರಡು ಮಾತು ಹೇಳುತ್ತಿದ್ದರು.

ವಿದ್ಯಾರ್ಥಿ ದಶೆಯಲ್ಲಿ ಅವರು ಸಿದ್ದಿಕಟ್ಟೆಯಲ್ಲಿ ಪೂರ್ಣಯ್ಯನವರ ಸತ್ರದ ಹತ್ತಿರ ಎಲ್ಲೋ ವಾಸವಾಗಿದ್ದರಂತೆ. ಆಗ ಆ ಪ್ರದೇಶದಲ್ಲಿ ಬ್ರಾಹ್ಮಣರ ಅಗ್ರಹಾರ ಇತ್ತು. ಈಗ ಅದೆಲ್ಲ ಬದಲಾಯಿಸಿಹೋಗಿದೆ. ಹಿಂದಿನ ಕಾಲದಲ್ಲಿ ಪೂರ್ಣಯ್ಯನವರ ಸತ್ರದಲ್ಲಿಯೂ ವಾಸುದೇವಶಾಸ್ತ್ರಿಗಳ ಮನೆಯಲ್ಲಿಯೂ ಬೇರೆ ಒಂದೆರಡು ಕಡೆಯೂ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ಧರ್ಮಾರ್ಥವಾಗಿ ಭೋಜನವಿಡುವ ಏರ್ಪಾಟಿತ್ತು. ಅಂಥ ಒಂದು ಕಡೆ ಶಾಸ್ತ್ರಿಗಳು ಭೋಜನ ಮಾಡಿ ಆ ಸಮೀಪದಲ್ಲಿಯೇ ಒಂದು ಮನೆಯಲ್ಲಿ ವಾಸವಿದ್ದರು. ಆಗ್ಗೆ ಶಾಸ್ತ್ರಿಗಳು ಇನ್ನೂ ಅವಿವಾಹಿತರು. ಅವರು ಇದ್ದ ಮನೆಯಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ಬಾಡಿಗೆ ತಿಂಗಳಿಗೆ ಒಂದು ಪಾವಲಿ. ಎಲೆಕ್ಟ್ರಿಕ್ ದೀಪವೆಂಬುದು ಇನ್ನೂ ಬಂದಿರಲಿಲ್ಲ. ಆಗ ರಾತ್ರಿ ಗ್ರಂಥ ವ್ಯಾಸಂಗಕ್ಕಾಗಿ ಶಾಸ್ತ್ರಿಗಳು ಮಾಡಿಕೊಂಡಿದ್ದ ಏರ್ಪಾಟು ಈಗಿನವರು ಕೇಳಬೇಕಾದದ್ದು.

ಓದಿಗೆ ಕೂಡುವ ಹೊತ್ತಿನಲ್ಲಿ ಒಂದು ಮಣ್ಣಿನ ಹಣತೆಯಲ್ಲಿ ಕೊಂಚ ಎಣ್ಣೆ ಹಾಕಿ ಬತ್ತಿ ನೆನೆಸಿ ಅದನ್ನು ಆ ಮನೆಯೊಳಗಿನ ಮನೆಯವರಿಟ್ಟಿದ್ದ ದೇವರ ನಂದಾದೀಪದಿಂದ ಹೊತ್ತಿಸಿಕೊಳ್ಳುವರು. ಹಾಗೆ ಆದ ಬೆಳಕಿನಲ್ಲಿ

ತಾಳೆಯೋಲೆಯ ಪುಸ್ತಕವನ್ನು ತೆರೆದು ಓಲೆಯ ಒಂದು ಪಕ್ಕವನ್ನು ಎರಡು ಮೂರು ಸಲ ಓದುವರು. ಆಗ ಪ್ರಿಂಟು ಇರಲಿಲ್ಲ. ತಾಳೆಯೋಲೆಯ ಒಂದು ಪಕ್ಕದಲ್ಲಿ ಸುಮಾರು ಎಂಟು ಹತ್ತು ಪಂಕ್ತಿ ಮೋಡಿ ಬರಹ ಇರುತ್ತಿತ್ತು. ಶಾಸ್ತ್ರಿಗಳು ಅಷ್ಟನ್ನು ಮೊದಲಿನಿಂದ ಕಡೆಯವರೆಗೆ ಒಂದು ಬಾರಿ ಓದುವರು. ಆಮೇಲೆ ಇನ್ನೊಂದು ಬಾರಿ. ಆಮೇಲೆ ಬಹುಶಃ ಇನ್ನೂ ಒಂದು ಬಾರಿ. ಹೀಗೆ ಎರಡು ಮೂರು ಸಲ ಓದಿದಷ್ಟರಲ್ಲಿ ಗ್ರಂಥವಾಕ್ಯಗಳು ಬಾಯಿಗೊದಗುತ್ತಿದ್ದವು. ಈಗ ಅವರು ದೀಪವನ್ನು ಆರಿಸುವರು. ಬೀದಿಗೆ ಬಂದು ಗ್ರಂಥವಾಕ್ಯಗಳನ್ನು ಬಾಯಿಂದ ನುಡಿಯುತ್ತ ಈ ಕಡೆಯಿಂದ ಆ ಕಡೆಗೂ ಆ ಕಡೆಯಿಂದ ಈ ಕಡೆಗೂ ಶತಪಥ ತುಳಿಯುವರು. ಆಗ ಅವರ ಮನಸ್ಸಿಗೆ ಗ್ರಂಥ ಸ್ವಾಧೀನವಾಯಿತೆಂದು ದೃಢಪಡುವುದು. ಅದಾದಾಗ ಅವರು ಮತ್ತೆ ತಮ್ಮ ಕೋಣೆಯೊಳಕ್ಕೆ ಹೋಗಿ, ಹಣತೆಯನ್ನು ನಂದಾದೀಪದಿಂದ ಮತ್ತೆ ಹಚ್ಚಿಕೊಂಡು ಬರುವರು. ಎಣ್ಣೆಯ ವೆಚ್ಚವನ್ನೂ ಬೆಂಕಿಕಡ್ಡಿಯ ವೆಚ್ಚವನ್ನೂ ಉಳಿಸುವುದಕ್ಕಾಗಿ ಈ ಏರ್ಪಾಟು. ಈಗ ಓಲೆಯ ಎರಡನೆಯ ಪುಟ. ಅದನ್ನೂ ಹೀಗೆಯೇ ಗಟ್ಟಿಮಾಡುವರು. ಅದೂ ಸ್ವಾಧೀನವಾಯಿತೆಂದರೆ ಆಗ ಮತ್ತೊಂದು ಓಲೆಯ ಮುಂದಿನ ಪುಟ. ಆಮೇಲೆ ಹಿಂದಿನ ಪುಟ. ಹೀಗೆ ಅವರ ಗ್ರಂಥ ವ್ಯಾಸಂಗ.

## ಸ್ವಸಂಬೋಧನೆ

ಒಂದಾನೊಂದು ಪುಟದ ವಿಷಯವನ್ನು ಬಾಯಿಂದ ನುಡಿದುಕೊಂಡು ಶತಪಥ ನಡೆಯುತ್ತಿದ್ದಾಗ ಗ್ರಂಥವಾಕ್ಯ ನೆನಪಿಗೆ ಬರಲಿಲ್ಲವೆನ್ನಿ. ಆಗ ಶಾಸ್ತ್ರಿಗಳವರು ಬಲಗೈಯಿಂದ ತಮ್ಮ ಮೂಗನ್ನು ಹಿಡಿದುಕೊಂಡು ಎರಡು ಕೆನ್ನೆಗಳ ಮೇಲೂ ಫಟೇರೆಂದು ಬಡಿದುಕೊಳ್ಳುವರು. ಗ್ರಂಥವಾಕ್ಯವು ತಪ್ಪದೆ ಸರಾಗವಾಗಿ ಬಾಯಿಗೆ ಬಂದಾಗ ಶಾಸ್ತ್ರಿಗಳವರು,

"ಎಲಾ ವಾಮನ! ಏನು ವಿದ್ವಾಂಸನಾಗಿಬಿಟ್ಯೋ!" ಎಂದು ತಮ್ಮನ್ನು ತಾವೇ ಪ್ರೋತ್ಸಾಹಿಸಿಕೊಳ್ಳುವರು. ಹಾಗಲ್ಲದೆ ಹೋದಾಗ

"ಎಲಾ ವಾಮನ! ಏನು ಮೂರ್ಖ ಹುಟ್ಟಿದೆಯೋ!" ಎಂದು ತಮ್ಮನ್ನು ತಾವೇ ದಂಡಿಸಿಕೊಳ್ಳುವರು.

ಹೇಗೆ ಮನುಷ್ಯನು ತನ್ನೊಳಗಿನ ಮೌಢ್ಯದಿಂದ ತಾನು ತಾನಲ್ಲದೆ ಬೇರೆ

ಯಾರೋ ಎಂಬಂತೆ ನಡೆದುಕೊಳ್ಳುತ್ತಾನೆ ಎಂಬುದನ್ನು ನಿದರ್ಶನಪಡಿಸುವುದಕ್ಕಾಗಿ ವೇದಾಂತ ಪಾಠಕಾಲದಲ್ಲಿ ಹೇಳಿದ ಕಥೆ ಇದು.

## ಸಾಂಪ್ರದಾಯಿಕತೆ

ಶಾಸ್ತ್ರಿಗಳವರು ಶಾಸ್ತ್ರಕರ್ಮ ಸದಾಚಾರಗಳ ವಿಷಯದಲ್ಲಿ ಶ್ರದ್ಧೆಯೇ ಮೂರ್ತೀಭವಿಸಿದಂತೆ ನಡೆದುಕೊಳ್ಳುತ್ತಿದ್ದರು. ದಿನ ದಿನ ಮೂರು ಹೊತ್ತೂ ಮನೆಯಲ್ಲಿ ಪೂಜೆ. ಸೋಮವಾರ ಏಕಾದಶವಾರ ರುದ್ರಾಭಿಷೇಕ. ಭಾನುವಾರ ಸೂರ್ಯನಮಸ್ಕಾರ. ಯಾವಯಾವುದೋ ವ್ರತಗಳು. ಹೀಗಾಗಿ ಅವರಿಗೆ ಬಹುಮಟ್ಟಿಗೆ ಒಪ್ಪೊತ್ತಿನ ಊಟ.

ಒಂದು ದಿನ ಪಾಠಕಾಲದಲ್ಲಿ ಭಾಷ್ಯದ "ಅವಿದ್ಯಾವದ್ವಿಷಯಾನಿ ಶಾಸ್ತ್ರಾಣಿ" ಎಂಬ ವಾಕ್ಯವನ್ನು ಕುರಿತು ಅರ್ಧ ಘಂಟೆಯ ಕಾಲ ಉಪನ್ಯಾಸ ಮಾಡಿದರು. ಆ ಸಮಯದಲ್ಲಿ "ಆತ್ಮವಸ್ತು ಪರಮ ಶುದ್ಧವಾದದ್ದು", "ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವ"ವಾದದ್ದು, "ನ ಶಾಸ್ತ್ರಾನ ಶಾಸ್ತ್ರಂ" ಇತ್ಯಾದಿ ವಾಕ್ಯಗಳನ್ನು ಉದಾಹರಿಸಿ ಪರತತ್ತ್ವದ ಸ್ವರೂಪವನ್ನು ಹೇಳಿ, ಕೇಳಿದವರಿಗೆ ಪುಲಕಾಂಕನವನ್ನುಂಟುಮಾಡಿದರು. ಮಾರನೆಯ ದಿನ ನಾನು ಯಥಾಪ್ರಕಾರ ಪಾಠಕ್ಕಾಗಿ ಹೋದಾಗ ಅವರ ಮನೆಯವರು

"ಶಾಸ್ತ್ರಿಗಳು ನಿನ್ನೆ ರಾತ್ರಿಯೇ ಊರಿಗೆ ಯಜ್ಞಕ್ಕೋಸ್ಕರ ದಯಮಾಡಿಸಿದರು. ಬರಲು ಎರಡು ಮೂರು ದಿನ ಆದೀತು."

—ಎಂದು ಹೇಳಿದರು. ನಾನು ಶಾಸ್ತ್ರಿಗಳವರನ್ನು ಮತ್ತೆ ಕಂಡಾಗ ಈ ವಿಚಾರವನ್ನೆತ್ತಿದೆ. ಅವರು ನಗುಮುಖದಿಂದ ಹೇಳಿದರು :

"ಹೌದು ಹೌದು. ಆ ಹೊತ್ತು ಹೇಳಿದ್ದೆಲ್ಲ ಜ್ಞಾನಿಗಳಿಗೆ ಸಂಬಂಧಪಟ್ಟದ್ದು. ಅದು ಸದಾಶಿವಬ್ರಹ್ಮೇಂದ್ರರಂಥವರಿಗೆ ಅನ್ವಯಿಸತಕ್ಕದ್ದು. ನಾವು ಇನ್ನೂ ಕರ್ಮಪ್ರಪಂಚದಲ್ಲೇ ಇದ್ದೇವಲ್ಲ? ಪುಣ್ಯಕರ್ಮದಿಂದ ಮನಸ್ಸು ಪರಿಪಕ್ವವಾದ ಮೇಲೆ ಬರುವ ಸ್ಥಿತಿ ಅದು. ಈಗ ಕರ್ಮ ಮಾಡೋಣ!"

## ಶ್ರೌತಕರ್ಮನಿಷ್ಠೆ

ಶಾಸ್ತ್ರಿಗಳವರ ಸಮೀಪ ಬಂಧುಗಳೊಬ್ಬರು ಸೋಮಯಾಜಿಗಳು. ಶಾಸ್ತ್ರಿಗಳವರ ಆಶ್ರಯದಲ್ಲಿ ಆ ಬಂಧುಗಳು ಬೆಂಗಳೂರು ಶಂಕರಮಠದ ಆವರಣದಲ್ಲಿ ಒಂದು ಯಾಗ ಮಾಡಿದರು. ನಾನು ಅಲ್ಲಿಗೆ ಹೋಗಿ ನೋಡಿದೆ. ಆ ಯಾಗ

ಪ್ರಾರಂಭಕ್ಕೆ ಹದಿನೈದು ದಿನ ಹಿಂದೆ ಅದಕ್ಕಾಗಿ ದ್ರವ್ಯಸಹಾಯ ಸಂಪಾದಿಸಿ ಕೊಡಬೇಕೆಂದು ನನಗೆ ಶಾಸ್ತ್ರಿಗಳು ಆಜ್ಞೆ ಮಾಡಿದರು. ನಾನು ಹೇಳಿದೆ :

"ನನ್ನ ಸ್ನೇಹಿತರು ದ್ರವ್ಯಸಹಾಯ ಮಾಡಬಲ್ಲವರು ದೇಶಾಂತರ ಸಂಚಾರಮಾಡಿರುವವರು ; ಸಮುದ್ರಯಾನ ಮಾಡಿ ಬಂದವರಾಯಿತಲ್ಲ ?"

ಶಾ : "ಇದರಿಂದ ಆ ಸಮಸ್ತ ಪಾಪಗಳೂ ಪರಿಹಾರವಾಗಿಬಿಡ್ತವೆ."

ಹೀಗೆ ಸಮಾಧಾನ ಹೇಳಿದರು.

"ಈ ಕಾಲದವರದು ಮತ್ತೊಂದು ಶಂಕಾ ಉಂಟಲ್ಲ–ಪ್ರಾಣಿಹಿಂಸೆ ಆಗ್ತದೆ ಇತ್ಯಾದಿಯಾಗಿ. ಅದೂ ಅಸಂಗತಭಾವನಾ. ಪಶುವಿಗೆ ಸ್ವರ್ಗಾದಿಲೋಕ ಪ್ರಾಪ್ತವಾಗ್ತದೆ. ಅದಕ್ಕೆ ಹಿರಣ್ಯಶೃಂಗ ಬರುತ್ತದೆ. ಹಿಂಸೆಗೆ ಬದಲಾಗಿ ಉಪಕಾರವೇ ಆಗ್ತದೆ."

ಅದು ಅವರ ನಂಬಿಕೆ. ನಂಬಿಕೆಯೆಂಬುದು ಪರಮಪೂಜ್ಯವಸ್ತು. ಅನೇಕರು ಸಂದೇಹಪಟ್ಟಿದ್ದನ್ನು ಶಾಸ್ತ್ರಿಗಳು ದೃಢವಾಗಿ ನಂಬಿ ಆ ದಾರ್ಢ್ಯವನ್ನು ತ್ರಿಕರಣಶುದ್ಧಿಯಿಂದ ನಡೆದರಲ್ಲ—ಅದರ ವಿಷಯದಲ್ಲಿ ನನ್ನ ಗೌರವ. ಅದಕ್ಕೆ ಮನ್ನಣೆ.

## ಒಂದು ಪ್ರಕರಣ

ಒಂದು ದಿನ ಮಧ್ಯಾಹ್ನ ಸುಮಾರು ಮೂರು ಘಂಟೆ. ನಾನು ಪಾಠಕ್ಕಾಗಿ ಹೋಗಿ ಶಂಕರಮಠದ ದಕ್ಷಿಣ ಪಾರ್ಶ್ವದಲ್ಲಿರುವ ಸತ್ರದ ಬಳಿ ಪದ್ಧತಿಯಂತೆ ನಿಂತಿದ್ದೆ. ಅಂದು ಮೈಸೂರು ವಿದ್ಯಾ ಇಲಾಖೆಯ ಡೆಪ್ಯುಟಿ ಇನ್‌ಸ್ಪೆಕ್ಟರ್ ಜನರಲ್ ಆಗಿದ್ದ ಬಿ. ದಾಸಪ್ಪನವರು ಮಾರ್ಗವಶಾತ್ ಹೋಗುತ್ತಿದ್ದವರು ನನ್ನನ್ನು ಕಂಡು ಹತ್ತಿರ ಬಂದರು. ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಮಹಾ ವಿದ್ವಾಂಸರು. ನನ್ನ ಬಾಲ್ಯದಿಂದ ನನ್ನನ್ನು ಬಲ್ಲವರು. ಅವರು ಮಹಾರಾಜ ಕಾಲೇಜ್ ಹಾಸ್ಟೆಲಿನ ವಾರ್ಡನ್ ಅಧಿಕಾರಿಯಾಗಿದ್ದಾಗ ನಾನು ಆ ಹಾಸ್ಟೆಲಿನಲ್ಲಿದ್ದೆ. ಅಷ್ಟೇ ಅಲ್ಲದೆ ನನ್ನ ತಂದೆಯ ಅಪೇಕ್ಷೆಯ ಮೇರೆಗೆ ನನಗೆ ಮೈಸೂರಿನಲ್ಲಿ ಗಾರ್ಡಿಯನ್ನಿನಂತೆ ಇದ್ದವರು ದಾಸಪ್ಪನವರು. ಅವರ ಮನೆಗೆ ನಾನು ವಾರ ವಾರವೂ ಹೋಗುತ್ತಿದ್ದೆ. ಅಂದಿನಿಂದ ಅವರಿಗೆ ನನ್ನಲ್ಲಿ ತುಂಬ ವಿಶ್ವಾಸ. ನನ್ನಿಂದ ಷೇಕ್‌ಸ್ಪಿಯರ್, ಗಿಬ್ಬನ್ ಮೊದಲಾದ ಉದ್ಗ್ರಂಥಗಳನ್ನು ಓದಿಸುತ್ತಿದ್ದರು. ಈ ಹಳೆಯ ವಾತ್ಸಲ್ಯದಿಂದ ಅವರು ನನ್ನನ್ನು ಕೇಳಿದರು :

ದಾ: "ಇದೇನು ಇಲ್ಲಿದ್ದೀ ?"

ನಾನು "ಪಾಠಕ್ಕಾಗಿ" ಎಂದು ವಿಷಯವನ್ನು ಕೊಂಚ ಹೇಳಿದೆ. ದಾಸಪ್ಪನವರು "ಸಂತೋಷ, ನಾನು ಶಾಸ್ತ್ರಿಗಳನ್ನು ನೋಡಬೇಕೆಂದು ಕೊಳ್ಳುತ್ತಿದ್ದೆ. ಈಗ ಒಳ್ಳೆಯ ಸಮಯವೇ ಆಯಿತು" ಎಂದು ನಿಂತರು. ಒಂದೆರಡು ನಿಮಿಷಗಳೊಳಗಾಗಿ ಶಾಸ್ತ್ರಿಗಳು ಅಲ್ಲಿಗೆ ಚಿತ್ತೈಸಿದರು. ನಮಸ್ಕಾರ ಪ್ರತಿನಮಸ್ಕಾರಗಳಾದ ಮೇಲೆ ದಾಸಪ್ಪನವರು ಹೇಳಿದರು:

ದಾ: "ಒಂದು ಪದದ ಅರ್ಥವನ್ನು ತಮ್ಮಲ್ಲಿ ಕೇಳಿ ತಿಳಿದುಕೊಳ್ಳ ಬೇಕೆಂದು ಕುತೂಹಲವಿತ್ತು."

ವಿ: "ಏನದು? ಅಪ್ಪಣೆ ಮಾಡೋಣವಾಗಲಿ."

ದಾ: "'ಸುಮೃಡೀಕಾ ಸರಸ್ವತಿ' ಎಂದು ಬರುತ್ತದಲ್ಲ ವೇದದಲ್ಲಿ. 'ಸುಮೃಡೀಕಾ' ಎಂದರೆ ಏನು ಅಭಿಪ್ರಾಯ?"

ವಿ: "ಆಫೀಸಿಗೆ ಹೊರಟಹಾಂಗಡೆ ಯಜಮಾನರು?"

ಹೀಗೆ ಶಾಸ್ತ್ರಿಗಳು ವಿಷಯಾಂತರಕ್ಕೆ ತಿರುಗಿದರು.

ದಾ: "ನಾನು ಹೇಳಿದ್ದು—"

ವಿ: "ಏನು ನಡೆದುಕೊಂಡೇ ಹೋಗ್ತಿರೋಣಾಗ್ಯದಲ್ಲ–ಈ ಬಿಸಿಲಾಗೆ?"

ದಾ: "ಏನೋ ಹೊರಟೆ ಹಾಗೇ ಯೋಚನೆ ಮಾಡುತ್ತ. ಸುಮೃ...."

ವಿ: "ಆಫೀಸಿಗೆ ಹೊತ್ತಾಗ್ತದಲ್ಲ?"

ದಾ: "ಹೊತ್ತು ಸ್ವಲ್ಪ ಸರಿಮಾಡಿಕೊಳ್ಳುತ್ತೇನೆ. ಸುಮೃ...."

ಇಷ್ಟುಹೊತ್ತಿಗೆ ಶಾಸ್ತ್ರಿಗಳ ಸಹನೆ ಮುಗಿದಿತ್ತು. ಅವರು ದಾಸಪ್ಪ ನವರ ಕಡೆ ತಿರುಗಿ ಕೈಬೆಟ್ಟಿನಿಂದ ಅವರ ಕಾಲಕಡೆ ತೋರಿಸಿ ಹೇಳಿದರು:

"ಕಾಲಾಗೆ ಅದು ಇರುವ ಕಾಲಕ್ಕೆ ಬಾಯಾಗೆ ವೇದಾಕ್ಷರ ಬರತಕ್ಕ ದ್ದಲ್ಲ."

ದಾಸಪ್ಪನವರು: "ಇಂಗ್ಲೆಂಡಿನವರೂ ಜರ್ಮನಿಯವರೂ ವೇದವನ್ನೋದಿ ನಮಗೆ ಭಾಷಾಂತರ ಮಾಡಿಕೊಟ್ಟಿದ್ದಾರಲ್ಲ?"

ವಿ: "ಅದು ಇರಬಹುದು. ತಾವೆಲ್ಲ ಬೈಬಲ್ ಮೊದಲಾದ ಅವರ ಗ್ರಂಥಗಳನ್ನು ನೋಡೋಣಾಗ್ತದಲ್ಲ. ವಾಕ್ಯ ಅವರಿಗೆ ಅರ್ಥವಾಗಬಹುದು. ಪೂಜ್ಯ ಬುದ್ಧಿ ಉಂಟೋ? ಆ ಬಿಳಿ ಜನಕ್ಕೆ ನಮ್ಮ ವೇದವಾಕ್ಯದ ಅರ್ಥವಾಗಬಹುದು. ಅಥವಾ ಅರ್ಥವಾಯಿತೆಂಬ ಭ್ರಾಂತಿ ಇರಬಹುದು. ಪೂಜ್ಯಬುದ್ಧಿ ಉಂಟೋ?"

## ಆಚಾರ ಪರಿಪಾಲನೆ

ಶಾಸ್ತ್ರಿಗಳವರು ಕೊಂಚ ಬೆಳಸಿದರು, ಹೀಗೆ:

"ತಾವೆಲ್ಲ ದೊಡ್ಡ ದೊಡ್ಡ ಉದ್ಯೋಗಗಳಲ್ಲಿರೋಣಾಗ್ಯದೆ. ನಾವು ತಮ್ಮಂಥವರನ್ನು ನೋಡಲಿಕ್ಕೆ ಕಛೇರಿಗೆ ಬಂದರೆ ಅದಕ್ಕೆ ಒಂದು ಉಡುಪಿನ ಮರ್ಯಾದಿ, ಎಲ್ಲಿ ಕೂಡಬೇಕು, ಎಲ್ಲಿ ನಿಲ್ಲಬೇಕು—ಎಂಬೀ ಮರ್ಯಾದಿಗಳುಂಟು. ಅರಮನೆಗೆ ಹೋಗುವಾಗ ತಲೆಗೆ ಹೇಗೆ ಶಾಲು ಸುತ್ತಬೇಕು, ಎಂಥ ಧೋತ್ರ ಉಡಬೇಕು—ಇತ್ಯಾದಿ ಮರ್ಯಾದಿಗಳುಂಟು. ಲೌಕಿಕ ವಿಷಯಗಳಲ್ಲೇ ಹೀಗಿರಲಿಕ್ಕಾಗಿ, ಪರಬ್ರಹ್ಮಪ್ರತಿಪಾದಕವಾದ ವೇದಕ್ಕೆ ಮರ್ಯಾದೆ ಬೇಡವೊ? ಆಚಾರ್ಯಸನ್ನಿಧಿಗೆ ದಯಮಾಡಿಸುವಾಗ ಪಾದರಕ್ಷೆ ಮೊದಲಾದವನ್ನು ದೂರದಾಗೆಬಿಡಬೇಕಷ್ಟೆ. ?"

ಹೀಗೆಲ್ಲ ವಾದ ಹೇಳಿದರು. ದಾಸಪ್ಪನವರು ವಿನಯದಿಂದಲೂ ಸಂತೋಷ ದಿಂದಲೂ ಅದನ್ನು ಕೇಳಿ ಅಂಗೀಕರಿಸಿ ತಾವು ಮತ್ತೊಮ್ಮೆ ಮಡಿಯಲ್ಲಿ ಬಂದು ಶಾಸ್ತ್ರಿಗಳವರನ್ನು ಕೇಳುವುದಾಗಿ ಹೇಳಿದರು.

ದಾಸಪ್ಪನವರು ವೇದಶಾಸ್ತ್ರಗಳಲ್ಲಿ ಅತ್ಯಂತ ಶ್ರದ್ಧೆಯುಳ್ಳವರು. ಅವರು ಶೃಂಗೇರಿಯ ಸನ್ನಿಧಾನದಲ್ಲಿ ಅನುಗ್ರಹಕ್ಕೆ ಪಾತ್ರರಾಗಿದ್ದವರು. ಅವರಿಗೆ 'ಶಾಂಕರಭಾಷ್ಯ'ದ ಹತ್ತಾರು ಭಾಗಗಳು ಮುಖಸ್ಥವಾಗಿದ್ದವು. ಸರ್ವದಾ ಪರತತ್ತ್ವಚಿಂತನೆಯಲ್ಲಿ ಮಗ್ನರಾಗಿರುತ್ತಿದ್ದರು. ಅವರು ಪದೇ ಪದೇ ಶೃಂಗೇರಿಗೆ ಹೋಗುತ್ತಿದ್ದ ಕಾರಣದಿಂದಲೂ ಗುರುಗಳ ಕಟಾಕ್ಷಕ್ಕೆ ಪಾತ್ರ ರಾಗಿದ್ದ ಕಾರಣದಿಂದಲೂ ಶಾಸ್ತ್ರಪ್ರಸಂಗದಲ್ಲಿ ಕುತೂಹಲವುಳ್ಳವರಾಗಿದ್ದ ಕಾರಣದಿಂದಲೂ ಅವರಲ್ಲಿ ವಿರೂಪಾಕ್ಷಶಾಸ್ತ್ರಿಗಳವರಿಗೂ ಸ್ನೇಹವಿತ್ತು. ಆ ಸಲುಗೆಯಿಂದ ನಡೆದದ್ದು ಮೇಲಿನ ಮಾತುಕಥೆ.

ಶಾಸ್ತ್ರಿಗಳವರ ದರ್ಶನಕ್ಕಾಗಿ ಬಹುಮಂದಿ ಬರುತ್ತಿದ್ದರು. ಹಾಗೆ ಬಂದ ವರು ಶಾಸ್ತ್ರಿಗಳವರಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಿದ್ದರು. ಆಗ ಶಾಸ್ತ್ರಿ ಗಳವರು ಆಶೀರ್ವಾದ ಮಾಡುತ್ತಿದ್ದದ್ದು ಹೀಗೆ:

"ಭಗವತಿ ವಾಸುದೇವೇ ಅವಿಚ್ಛಿನ್ನಾ ಭಕ್ತಿರಸ್ತು."

೧೧

# ಕೆ. ಪಿ. ಪುಟ್ಟಣ್ಣ ಶೆಟ್ಟರು

ಕೆ. ಪಿ. ಪುಟ್ಟಣ್ಣಶೆಟ್ಟರವರು ೧೯೦೩-೪ರಲ್ಲಿ ಕೋಲಾರದ ಡೆಪ್ಯುಟಿ ಕಮಿಷನರಾಗಿದ್ದರು. ಆಗ ಒಂದು ದಿನ ಕೋಲಾರದ ಕ್ಲಬ್ಬಿನಲ್ಲಿ ಗ್ರಂಥಭಂಡಾರದ ಪ್ರಾರಂಭೋತ್ಸವ ಪುಟ್ಟಣ್ಣಶೆಟ್ಟರವರ ಹಸ್ತದಿಂದ ನಡೆಯಿತು. ಆಗ ಅವರು ಮಾಡಿದ ಭಾಷಣವನ್ನು ನಾನು ಕೇಳಿದೆ. ನಾನು ಹೈಸ್ಕೂಲು ವಿದ್ಯಾರ್ಥಿ. ಯಾರೋ ನನ್ನನ್ನು ಆ ಸಮಾರಂಭಕ್ಕೆ ಕರೆದುಕೊಂಡು ಹೋಗಿದ್ದರು. ಭಾಷಣ ಆದದ್ದು ಐದಾರು ನಿಮಿಷ ಇರಬಹುದು. ಅದು ಇಂಗ್ಲಿಷಿನಲ್ಲಿ. ಅವರು ಉಪಯೋಗಿಸಿದ ಪದಗಳೂ ಅವುಗಳಲ್ಲಿ ಅಡಗಿದ್ದ ಭಾವಗಳೂ ಬಹು ಚೆನ್ನವೆಂದು ನನ್ನ ಮನಸ್ಸಿಗನ್ನಿಸಿತು. ಎಷ್ಟು ಉಚಿತವೋ ಅಷ್ಟೇ ಇತ್ತು; ಸಣ್ಣದಾಗಿ ಸರಳವಾಗಿತ್ತು. ಹೀಗೆ ನನಗೆ ಅವರ ವಿಷಯದಲ್ಲಿ ಮೆಚ್ಚಿಕೆಯೂ ಮನ್ನಣೆಯೂ ಉಂಟಾದವು.

ಅಲ್ಲಿಂದ ಸುಮಾರು ಒಂದು ವರ್ಷ ಕಳೆದ ಬಳಿಕ ಅವರು ಮುಳುಬಾಗಲಿಗೆ ಸರ್ಕೀಟು ಬಂದರು. ಆಗ ನಾನು ಅಲ್ಲಿಯ ಸ್ಕೂಲಿನಲ್ಲಿ ಬದಲಿ ಮೇಷ್ಟರಾಗಿ ಕೆಲಸಮಾಡುತ್ತಿದ್ದೆ. ಆಗ ನಡೆಯಿತು ಒಂದು ಪ್ರಕರಣ. ಇದರಲ್ಲಿ ಕೊಂಚ ಸ್ವಪ್ರಶಂಸೆ ಕಾಣಬಹುದು; ವಾಚಕರು ಮನ್ನಿಸಬೇಕು.

## ಶಾಲೆಯ ತನಿಖೆ

ಪುಟ್ಟಣ್ಣಶೆಟ್ಟರು ಸ್ಕೂಲಿಗೆ ಬಂದು ಎಲ್ಲ ತರಗತಿಗಳನ್ನೂ ಪರೀಕ್ಷೆಮಾಡಿದರು. ಆ ಕಾಲದಲ್ಲಿ ಡೆಪ್ಯುಟಿ ಕಮಿಷನರು ಸರಕಾರದ ಎಲ್ಲ ಇಲಾಖೆಗಳ ಸಂಸ್ಥೆಗಳನ್ನೂ ತನಿಖೆ ಮಾಡುವುದು ಪದ್ಧತಿ. ಅದರಂತೆ ಅವರು ಸ್ಕೂಲಿಗೆ ಬಂದಿದ್ದರು. ನಾನು ನಡಸುತ್ತಿದ್ದ ತರಗತಿಗೆ ಬಂದು ಏನೋ ಒಂದು ಮಾತು ಕೇಳಿದರು. ನಾನು ಏನೋ ಜವಾಬು ಹೇಳಿದೆ. ಸ್ಕೂಲಿನ ತನಿಖೆ ಮುಗಿದ ಮೇಲೆ ನಮ್ಮ ಹೆಡ್‌ಮಾಸ್ಟರು "ವಿಸಿಟರ್ಸ್ ಬುಕ್" ಎಂಬ ಭೇಟಿಗಾರರ ಅಭಿಪ್ರಾಯಗಳ ಪುಸ್ತಕವನ್ನು ಅವರ ಮುಂದಿಟ್ಟರು. ಪುಟ್ಟಣ್ಣಶೆಟ್ಟರು ಆ ಪುಸ್ತಕದಲ್ಲಿ ತಮ್ಮ ಮೆಚ್ಚಿಕೆಯನ್ನು ಒಂದೆರಡು ಮಾತುಗಳಲ್ಲಿ ತಿಳಿಸಿ, ಅದರಲ್ಲಿ

ನನ್ನ ವಿಷಯ ಒಂದೆರಡು ಮಾತು ಬರೆದಿದ್ದರು. ಅದನ್ನು ನೋಡಿ ನಮ್ಮ ಹೆಡ್‌ಮಾಸ್ಟರು ಹಿಗ್ಗಿದರು. ಸಂಜೆಯೊಳಗಾಗಿ ಅದು ಊರೆಲ್ಲೆಲ್ಲಾ ಹರಡಿ ಕೋಲಾಹಲವನ್ನುಂಟುಮಾಡಿತು. ನನಗೆ ಅದರಿಂದ ಆದದ್ದು ಹಿಂಸೆ, ಹೀಗೆ :

ನನ್ನ ತಂದೆ, ಅವರ ಸ್ನೇಹಿತರು ಸೇರಿ ಯೋಚನೆ ಮಾಡಿದರು : ಇದು ಅದೃಷ್ಟಕಾಲ. ಇದನ್ನು ಹಾಗೆಯೇ ಬಿಡಬಾರದು, ಉಪಯೋಗಕ್ಕೆ ತಂದು ಕೊಳ್ಳಬೇಕು. ಎಂದರೆ ಈ ಚಿರಂಜೀವಿಯ ಕೈಯಿಂದ ಚಾಕರಿಗಾಗಿ ಒಂದು ಅರ್ಜಿ ಬರಸಿ ಡೆಪ್ಯುಟಿ ಕಮಿಷನರಿಗೆ ಖುದ್ದು ಒಪ್ಪಿಸತಕ್ಕದ್ದು. ಅರ್ಜಿ ನೋಡಿದ ಕೂಡಲೆ ಚಾಕರಿಯಾಗುವುದು ಖಂಡಿತ ! ಹೀಗೆ ತೀರ್ಮಾನಮಾಡಿ ಅರ್ಜಿ ಬರೆಯಬೇಕೆಂದು ನನ್ನನ್ನು ಒತ್ತಾಯಪಡಿಸಿದರು. ನಾನಾದರೋ ಸರಕಾರಿ ಚಾಕರಿ ಸೇರುವುದಿಲ್ಲವೆಂದು ಹಟ. ರಾತ್ರಿ ಹನ್ನೆರಡು ಘಂಟೆಯವರೆಗೆ ಈ ವಾದಗಳು ನಡೆದವು. ನಾನು ಪೂರ್ವಕಾಲದವನಾದದ್ದರಿಂದ ಹಿರಿಯರ ಮಾತಿಗೆ ತಲೆಬಾಗಲೇಬೇಕೆನ್ನಿಸಿತು. ಒಂದು ಅರ್ಜಿಯನ್ನು ಬರೆದದ್ದೂ ಆಯಿತು. ಮಾರನೆಯ ದಿನ ಮಧ್ಯಾಹ್ನ ಟ್ರಾವಲರ್ಸ್ ಬಂಗಲೆಗೆ ಹೋಗಿ ಅರ್ಜಿ ಒಪ್ಪಿಸತಕ್ಕದ್ದೆಂದು ತೀರ್ಮಾನ.

## ಏರ್ಪಾಟು

ಡೆಪ್ಯುಟಿ ಕಮಿಷನರು ಮಧ್ಯಾಹ್ನ ಮೂರು ಘಂಟೆಯಿಂದ ನಾಲ್ಕರವರೆಗೆ ಅರ್ಜಿಗಳನ್ನು ತೆಗೆದುಕೊಳ್ಳುತ್ತಾರೆ ; ಅವರಿಗೆ ಬೇರೆ ಹೊತ್ತಿಲ್ಲ ; ಆದದ್ದರಿಂದ ನಾನೂ ನನ್ನ ತಂದೆಯೂ ಅವರ ಸ್ನೇಹಿತರು ಮೂವರು ನಾಲ್ವರೂ ಮೂರು ಘಂಟೆಗೆ ಸರಿಯಾಗಿ ಟ್ರಾವಲರ್ಸ್ ಬಂಗಲೆಯಲ್ಲಿರತಕ್ಕದ್ದು—ಅರ್ಜಿಯ ಸಮೇತರಾಗಿ. ಇದು ಏರ್ಪಾಟು.

ಆಗ ಇನ್ನೊಂದು ತಕರಾರು ಹುಟ್ಟಿತು : ನಾನು ರುಮಾಲು ಧರಿಸಿರಬೇಕೆಂದು. ಇದು ದೊಡ್ಡ ಗದ್ದಲಕ್ಕಿಟ್ಟುಕೊಂಡಿತು. ನಾನು ಟೋಪಿ ಧರಿಸುತ್ತಿದ್ದವನು. ರುಮಾಲು ನನಗೆ ಇಷ್ಟವಾಗಲಿಲ್ಲ. ಈ ಚರ್ಚೆ ದೀರ್ಘವಾಗಿ ಬೆಳೆದ ಮೇಲೆ ನನ್ನ ತಂದೆಯ ಸ್ನೇಹಿತ ಸುಬ್ಬಾಭಟ್ಟರು ಮಧ್ಯಸ್ಥಿಕೆ ಮಾಡಿದರು. ನಾನು ರುಮಾಲನ್ನು ಧರಿಸಿಕೊಂಡು ಬೀದಿಯಲ್ಲಿ ನಡೆಯಬೇಕಾದದ್ದಿಲ್ಲ ; ಟೋಪಿಯನ್ನೇ ಹಾಕಿಕೊಂಡು ಬರಬಹುದು—ಬಂಗಲೆಯವರೆಗೂ. ಕಾಂಪೌಂಡ್ ಒಳಹೊಕ್ಕ ಬಳಿಕ ಸಾಹೇಬರನ್ನು ನೋಡುವ ಒಂದು ಕ್ಷಣ ಮಾತ್ರ ತಲೆಗೆ ಸಿಂಬಿಸುತ್ತಿರಬೇಕಾದದ್ದು.

## ನನ್ನ ಅದೃಷ್ಟ ಪರೀಕ್ಷೆ

ಇದಕ್ಕೆ ನಾನು ಒಪ್ಪಿಕೊಂಡೆ, ಗತ್ಯಂತರವಿಲ್ಲದೆ. ರುಮಾಲಿನ ಸುರುಳಿ ಕೈಯಲ್ಲಿ ಹಿಡಿದು ಹಿಂದೆ ನಡೆದೆ. ನನ್ನ ತಂದೆ ಅರ್ಜಿಯನ್ನು ಹಿಡಿದು ಮುಂದೆ ನಡೆದರು. ಈ ಮೆರವಣಿಗೆ ಟ್ರಾವಲರ್ಸ್ ಬಂಗಲೆಯ ಉತ್ತರದ ಕಡೆಯ ಹಿಂಬಾಗಿಲಿನಿಂದ ಒಳಕ್ಕೆ ಹೋಯಿತು. ಈ ವೇಳೆಗೆ ಘಂಟೆ ನಾಲ್ಕಾಗಿ ಬಿಟ್ಟಿತ್ತು.

ನನ್ನ ತಂದೆ ಬಂಗಲೆಯ ಮುಂದುಗಡೆ ಹೋಗಿ ವಿಚಾರಿಸಲು ಅಲ್ಲಿದ್ದ ಗುಮಾಸ್ತರು "ಸಾಹೇಬರು ಈಗ ತಾನೆ ಒಳಕ್ಕೆ ಹೋದರು. ಈಗ ನಿಮಗೆ ಸಿಕ್ಕುವುದಿಲ್ಲ. ನಿಮ್ಮ ಅರ್ಜಿಯನ್ನು ಪೋಸ್ಟಿನಲ್ಲಿ ಕಳುಹಿಸಿ" ಎಂದರು.

ಅಲ್ಲಿಗೆ ಅರ್ಜಿಯ ವಿಚಾರ ಮುಗಿಯಿತು. ಆದರೆ ನನಗೆ ಸಲ್ಲತಕ್ಕದ್ದು ಸಾವಕಾಶವಾಗಿ ಎರಡು ಮೂರು ವಾರ ದಿನದಿನವೂ ಸಲ್ಲುತ್ತಿತ್ತು. "ಹೇಳಿದ ಮಾತನ್ನು ಕೇಳುವವನಲ್ಲ" "ಮಖೇಡಿ" "ದುರಹಂಕಾರಿ." "ದೊಡ್ಡವರ ಮಾತಿನಲ್ಲಿ ಗೌರವವಿಲ್ಲ." "ತಲೆಹೋಕ ಮುಂಡೇದು" "ಪಕ್ವ ಕೆಟ್ಟು ಹೋಯಿತು" "ಪೋಲಿಪುಂಡರ ಸಹವಾಸ"—ಹೀಗೆ. ನನ್ನ ತಂದೆಗೆ ತುಂಬ ನಿರಾಶೆಯಾಯಿತು. ಆ ನಿರಾಶೆಗೆ ತಕ್ಕಂತೆ ನನ್ನ ಮೇಲೆ ಶಬ್ದಪ್ರಯೋಗ. ಕಡೆಗೆ ಮಹಾನುಭಾವ ಸುಬ್ಬಾಭಟ್ಟರು ನನ್ನ ಪರವಾಗಿ ನಿಂತರು. "ಹೋಗಲಿ ಬಿಡಿ. ಅವನ ಅದೃಷ್ಟ ಹೋಯಿತೆ ಇದರಲ್ಲಿ? ದೇವರ ದಯೆಯಿದ್ದರೆ ಯಾವುದೋ ಚಾಕರಿ ಆಗುತ್ತದೆ. ಉಪವಾಸ ಸಾಯುವುದಿಲ್ಲ." ಈ ರೀತಿ ಭರವಸೆ ಹೇಳಿದರು.

ನಾನು ಈ ಸಂಗತಿಯನ್ನು ಬಹು ವರ್ಷಗಳಾದ ಮೇಲೆ ಪುಟ್ಟಣ್ಣ ಶೆಟ್ಟರವರಲ್ಲಿ ಒಂದು ಸಲ ಹೇಳಿದೆ. ಅವರು ಗಟ್ಟಿಯಾಗಿ ಮುಖದ ತುಂಬ ನಕ್ಕರು.

## ನಿತ್ಯ ಹಸನ್ಮುಖತ್ವ

ನಾನು ಬೆಂಗಳೂರಿಗೆ ಬಂದ ಬಳಿಕ (೧೯೦೩-೭) ಅವರ ಪರಿಚಯ ನನಗೆ ಹೇಗಾಯಿತೋ ಈಗ ಜ್ಞಾಪಕವಿಲ್ಲ. ನನ್ನ "ರಂಗಾಚಾರ್ಲು" ಪುಸ್ತಕ ಪ್ರಕಟವಾದ ಮೇಲೆ ಕೆ. ರಾಮಚಂದ್ರರಾಯರವರು ನನ್ನನ್ನು ಪುಟ್ಟಣ್ಣಶೆಟ್ಟರವರಲ್ಲಿಗೆ ಕರೆದುಕೊಂಡು ಹೋಗಿದ್ದದ್ದು ಜ್ಞಾಪಕವಿದೆ. ಪುಟ್ಟಣ್ಣಶೆಟ್ಟರು ನನ್ನನ್ನು ಯಾವಾಗಲೂ ವಿಶ್ವಾಸದಿಂದ ಕಾಣುತ್ತಿದ್ದರೆಂದು ನಾನು ಹೇಳಿದರೆ ಅದರಲ್ಲಿ

ಇತರರಿಗೆ ವಿಶೇಷಾಂಶವೇನೂ ತೋರಲಾರದು. ಪುಟ್ಟಣ್ಣಶೆಟ್ಟರು ಎಲ್ಲರನ್ನೂ ವಿಶ್ವಾಸದಿಂದಲೇ ಕಾಣುತ್ತಿದ್ದರು. ಅವರ ಬಳಿಗೆ ಹೋದವರಾರನ್ನೂ ಅವರು ಮುಖ ಗಂಟುಹಾಕಿಕೊಂಡು ನೋಡಿದವರಲ್ಲ. ಎಲ್ಲರನ್ನೂ ಹಸನ್ಮುಖದಿಂದ ಮಾತಾಡಿಸುತ್ತಿದ್ದರು. ಇದರಲ್ಲೇನು ವಿಶೇಷ?

ನಿತ್ಯಹಸನ್ಮುಖಿತ್ವವೇ ವಿಶೇಷ.

ಪ್ರಶ್ನೆ ಕೇಳುವವರು ಹಾಗೆ ಸರ್ವದಾ ಹಸನ್ಮುಖಿಗಳಾಗಿರುತ್ತಾರೋ? ಯಾರಿಗೆ ನೈಜವಾದ ಒಳ್ಳೆಯತನವೂ ಮನಸ್ಸಿನಲ್ಲಿ ಪ್ರಸನ್ನತೆಯೂ ಇರುತ್ತವೋ ಅವರಿಗೆ ಮಾತ್ರ ಸಾಧ್ಯವಾದದ್ದು ನಿತ್ಯಹಸನ್ಮುಖಿತ್ವ. ಹಾಗಿಲ್ಲದ ಹಸನ್ಮುಖಿತ್ವವು ಬರಿಯ ಕಪಟ. ಪುಟ್ಟಣ್ಣಶೆಟ್ಟರು ಕಪಟಿಗಳೆಂದು ನಾನು ಸರ್ವಥಾ ಒಪ್ಪಿಕೊಳ್ಳಲಾರೆ. ಅವರು ಶ್ರೀರಾಮಚಂದ್ರನ ಒಂದು ಗುಣವನ್ನು ಹೇಗೋ ಸಂಪಾದಿಸಿಕೊಂಡಿದ್ದರು. ಶ್ರೀರಾಮನದು,

ಸ್ಮಿತಪೂರ್ವಾಭಿಭಾಷೀ

"ಮೊದಲು ಮುಗುಳ್ನಗೆ. ಅನಂತರ ಮಾತು" ಎಂದು ವಾಲ್ಮೀಕಿಗಳು ನಮಗೆ ತಿಳಿವಳಿಕೆ ಕೊಟ್ಟಿದ್ದಾರೆ. ಆ ನಿತ್ಯಪ್ರಸನ್ನತೆ ಪುಟ್ಟಣ್ಣಶೆಟ್ಟರಿಗೆ ಬಂದಿತ್ತು. ಇದನ್ನು ನಾನು ನೂರಾರು ಸಾರಿಯ ಅನುಭವದಿಂದ ಕಂಡು ಕೊಂಡಿದ್ದೇನೆ.

## ಪೌರಸಭಾಧ್ಯಕ್ಷತೆ

ಪುಟ್ಟಣ್ಣಶೆಟ್ಟರವರ ಶೀಲಸ್ವಭಾವಗಳು ವಿಶ್ವೇಶ್ವರಯ್ಯನವರಿಗೆ ಮೆಚ್ಚಿಕೆಯಾಗಿದ್ದವು. ವಿಶ್ವೇಶ್ವರಯ್ಯನವರು ಆಗಾಗ ಪುಟ್ಟಣ್ಣಶೆಟ್ಟರವರ ಮನೆಗೆ ಬಂದು ಗೌರವ ತೋರಿಸುತ್ತಿದ್ದರು. ಅಷ್ಟುಮಾತ್ರ ಆಡಳಿತದ ಅನುಭವವನ್ನು ಪಡೆದು ದೇಶದ ವಿದ್ಯಮಾನಗಳನ್ನು ಸ್ವತಃ ಕಂಡು ಬಹುಜನದ ಪ್ರೀತಿಯನ್ನೂ ಮರ್ಯಾದೆಯನ್ನು ಸಹ ಗಳಿಸಿಕೊಂಡಿರುವಂಥ ಮಹನೀಯರಿಂದ ದೇಶೋಪಕಾರಗಳಾದ ಕೆಲಸಗಳು ಎಷ್ಟೋ ನಡೆದಾವು; ಅಂಥವರಿಗೆ ಅವಕಾಶ ಕಲ್ಪಿಸಿ ಪ್ರೋತ್ಸಾಹಕೊಡುವುದು ಸರಕಾರದ ಅವಶ್ಯ ಕರ್ತವ್ಯವೆಂದು ವಿಶ್ವೇಶ್ವರಯ್ಯನವರು ಭಾವಿಸಿದ್ದರು. ಅದರಂತೆ ಅವರ ದಿವಾನಗಿರಿಯ ಹೊಸತಿನಲ್ಲಿಯೇ ಪುಟ್ಟಣ್ಣಶೆಟ್ಟರವರಿಗೆ ಅಂಥ ಅವಕಾಶವನ್ನು ಕೊಟ್ಟರು. ಬೆಂಗಳೂರಿನ ಪೌರಸಭೆಗೆ (ಮ್ಯುನಿಸಿಪಲ್ ಕೌನ್ಸಿಲ್) ಪುಟ್ಟಣ್ಣಶೆಟ್ಟರಂಥ ಘನತೆವೆತ್ತವರು ಅಧ್ಯಕ್ಷರಾಗಿರಬೇಕೆಂದು ವಿಶ್ವೇಶ್ವರಯ್ಯನವರ ತಾತ್ಪರ್ಯ. ಇದನ್ನು ಪುಟ್ಟಣ್ಣ

ಶೆಟ್ಟರವರಿಗೆ ಸೂಚಿಸಿದಾಗ ಶೆಟ್ಟರವರು ಒಂದು ಕರಾರು ಹಾಕಿದರು : "ಕೆಲಸ ಬೇಗ ಬೇಗ ನಡೆಯಬೇಕಾದರೆ ಮ್ಯುನಿಸಿಪಾಲಿಟಿಗೆ ಸರಕಾರದಿಂದ ಬರ ಬೇಕಾದ ಮಂಜೂರಾತಿ ಮೊದಲಾದ ಹುಕುಮುಗಳು ಬೇಗ ಬೇಗ ಬರಬೇಕು. ಇದು ಸಾಧ್ಯವಾಗಬೇಕಾದರೆ ದಿವಾನರು ಬೆಂಗಳೂರು ಮ್ಯುನಿಸಿಪಾಲಿಟಿಯ ದಫ್ತರವನ್ನು (ಪೋರ್ಟ್‌ಫೋಲಿಯೋ) ತಮ್ಮ ಸ್ವಂತ ವಶದಲ್ಲಿಟ್ಟುಕೊಳ್ಳ ಬೇಕಾಗುತ್ತದೆ. ಸರಕಾರದ ಕಡೆಯ ಒಬ್ಬ ಕೌನ್ಸಿಲರಿಗೂ ಮ್ಯುನಿಸಿ ಪಾಲಿಟಿಯ ರಿಟೈರ್ಡ್ ಕೌನ್ಸಿಲರಿಗೂ ನಡುವೆ ತಕರಾರಿಟ್ಟುಕೊಳ್ಳಬಾರದು. ಸರಕಾರದ ಜವಾಬ್ದಾರಿಯನ್ನು ನೀವು ಸ್ವಂತವಾಗಿ ವಹಿಸಿಕೊಳ್ಳುವುದಾದರೆ ನಿಮ್ಮ ಇಷ್ಟದಂತೆ ನಡೆಯುವ ಭಾರವನ್ನು ನಾನು ಹೊತ್ತುಕೊಳ್ಳುತ್ತೇನೆ" ಎಂದರು ; ವಿಶ್ವೇಶ್ವರಯ್ಯನವರು ಸಂತೋಷದಿಂದ ಒಪ್ಪಿದರು.

ಆ ದಿನಗಳಲ್ಲಿ ನನಗೆ ಪುಟ್ಟಣ್ಣಶೆಟ್ಟರವರಲ್ಲಿ ಹೋಗಿಬರುವುದು ರೂಢಿ ಯಾಗಿತ್ತು. ಒಂದು ದಿನ ಮಧ್ಯಾಹ್ನ ಯಾವುದೋ ಮೋಟಾರ್ ಕಂಪೆನಿಯ ಏಜೆಂಟರು ಪುಟ್ಟಣ್ಣ ಶೆಟ್ಟರವರಲ್ಲಿಗೆ ಬಂದು ಒಂದು ಹೊಸ ಕಾರನ್ನು ತೋರಿಸಿ ಅದರಲ್ಲಿ ಅವರು ಬರಬೇಕೆಂದು ಬೇಡಿದರು. ಪುಟ್ಟಣ್ಣ ಶೆಟ್ಟರು ನನ್ನ ಕಡೆಗೆ ತಿರುಗಿ ಹೇಳಿದರು :

"ನಾನು ಇನ್ನೂ ಪ್ರೆಸಿಡೆಂಟ್ ಆಗಿಲ್ಲ. ಅಷ್ಟರೊಳಗೇ ಈ ಮೋಟಾರ್ ಗಿರಾಕಿಗಳ ಅವಾಂತರ!"

ನಾನು ಅವರಲ್ಲಿಗೆ ಹೋದಾಗಲೆಲ್ಲ ಯಾವುದೋ ಒಂದು ಸಾರ್ವಜನಿಕ ವಿಚಾರವನ್ನು ಕುರಿತು, ಅಥವಾ ಪೂರ್ವಚರಿತ್ರೆಯ ಯಾವುದೋ ಸಂಗತಿ ಯನ್ನು ಕುರಿತು, ಅಥವಾ ಒಂದಾನೊಂದು ನೀತಿತತ್ತ್ವವನ್ನು ಕುರಿತು ಮಾತನಾಡುವರು. ಮಾತು ಮಿತ, ಆದರೆ ಸಾರವುಳ್ಳದ್ದು. ಪೊಳ್ಳುಮಾತಿಗೆ ಅವಕಾಶವಿರಲಿಲ್ಲ.

ಅವರು ಪ್ರೆಸಿಡೆಂಟರಾದ ಕೆಲವು ದಿವಸಗಳೊಳಗಾಗಿ ವಿಶ್ವೇಶ್ವರಯ್ಯನವರು ಪುರಾಭಿವೃದ್ಧಿಯ ಏರ್ಪಾಟುಗಳನ್ನು ಆಲೋಚನೆ ಮಾಡಿದರು. ಸಿಟಿ ಮಾರ್ಕೆಟ್ ಚೌಕದಲ್ಲಿ ಒಂದು ಪುರಜನ ಸಭೆಯನ್ನು ಕರೆದಿದ್ದರು. ಬಹಳ ದೊಡ್ಡ ಗುಂಪು ಬಂದಿತ್ತು. ದಿವಾನರು ಏನೋ ವಿಚಾರ ಹೇಳುತ್ತಿದ್ದರು. ನಾನು ಆಗ ಒಂದು ಮಾತನ್ನಾಡಿದೆ. ವಿಶ್ವೇಶ್ವರಯ್ಯನವರು ನನ್ನ ಕಡೆ ತಿರುಗಿ ಹೇಳಿದರು :

"ನೀನು ದೊಡ್ಡ ಆಕ್ಷೇಪಕರ್ತ (Critic). ಬರಿಯ ಆಕ್ಷೇಪಣೆಯಿಂದ

ಏನಾಗುತ್ತದೆ? ಕೆಲಸಕ್ಕಿಳಿದು ನಮ್ಮ ಕಷ್ಟಗಳನ್ನು ತಿಳಿದುಕೊಳ್ಳಬೇಕು."

ನಾನು ಸುಮ್ಮನಿದ್ದೆ.

## ಪೌರಸಭೆಯ ಪುನರ್ವಿರಚನೆ

ಇದಾದ ಎಂಟು ಹತ್ತು ದಿವಸಗಳಲ್ಲಿ ಪೌರಸಭೆಯನ್ನು ಪುನರ್ವಿರಚನೆ ಮಾಡಬೇಕಾದ ಪ್ರಸಂಗ ಬಂದಿತು. ಆ ಬಗೆಗೆ ಕೆಲವರನ್ನು ನಾಮಿನೇಟ್ ಮಾಡಲಿಕ್ಕಾಗಿ ಮ್ಯುನಿಸಿಪಲ್ ಪ್ರೆಸಿಡೆಂಟರ ಕಡೆಯಿಂದ ಸರ್ಕಾರಕ್ಕೆ ಶಿಫಾರಸು ಹೋಯಿತು. ಆ ಶಿಫಾರಸು ಪಟ್ಟಿಯಲ್ಲಿ ದಿವಾನ್ ವಿಶ್ವೇಶ್ವರಯ್ಯ ನವರು ತಾವಾಗಿ ನನ್ನ ಹೆಸರನ್ನು ಸೇರಿಸಿದ್ದರು. ಇದು ಪುಟ್ಟಣ್ಣಶೆಟ್ಟರಿಗೆ ತಿಳಿದಕೂಡಲೆ ಅವರಿಗೆ ಬಹು ಸಂತೋಷವಾಯಿತಂತೆ. ಅವರು ನನಗೆ ಹೇಳಿ ಕಳುಹಿಸಿ, ತಮ್ಮ ಸಂತೋಷವನ್ನು ತಿಳಿಸಿದರು. "ನಾನು ದಿವಾನರಿಗೆ ಕೃತಜ್ಞ ನಾಗಿರುವುದೇನೋ ಸರಿ. ಆದರೆ ಇದು ನನಗೆ ಬೇಕಿಲ್ಲದ ಹುದ್ದೆ. ನಾನು ಮಾಡಿಕೊಂಡಿರುವ ಕೆಲಸ ನನಗೆ ಸಾಕಾಗಿದೆ. ಈ ಕೆಲಸದಿಂದ ನನ್ನ ಮನಸ್ಸಿಗೆ ವಿಕ್ಷೇಪ (Disturbance) ವಾದೀತು" ಎಂದು ನಾನು ಹೇಳಿದೆ. ಅದಕ್ಕೆ ಪ್ರತಿಯಾಗಿ ಪುಟ್ಟಣ್ಣಶೆಟ್ಟರು ಹೇಳಿದರು :

## ಸಭೆಯ ಕಾರ್ಯರೀತಿ

"ದಿವಾನರು ಹೇಳಿದ್ದು ಮನಸ್ಸಿಗೆ ಬರಲಿಲ್ಲವೆ? ನಿಮ್ಮ ಕ್ರಿಟಿಸಿಸ್ಮ (ಆಕ್ಷೇಪಣೆ) ಪ್ರಯೋಜನಕ್ಕೆ ಬರಬೇಕಾದರೆ ಅದರಲ್ಲಿ ತಿಳಿವಳಿಕೆ ಇರಬೇಕು. ಕೆಲಸದ ಒಳಹೊಕ್ಕು ನೋಡದಿದ್ದರೆ ನಿಮಗೆ ತಿಳಿವಳಿಕೆ ಹೇಗೆ ಬರುತ್ತದೆ? ನಿಮ್ಮಂಥ ಚಿಕ್ಕ ವಯಸ್ಸಿನವರು ಈ ಜವಾಬ್ದಾರಿಯನ್ನು ಅಭ್ಯಾಸಮಾಡಿ ಕೊಳ್ಳಬೇಕು."

ನಾಲ್ಕೈದು ವರ್ಷಕಾಲ ಪುಟ್ಟಣ್ಣಶೆಟ್ಟರ ಅಧ್ಯಕ್ಷತೆಯಲ್ಲಿ ನಾನು ಮ್ಯುನಿಸಿಪಲ್ ಕೌನ್ಸಿಲರಾಗಿದ್ದದ್ದು ನನಗೆ ಸಂತೋಷದ ಅನುಭವ ಮತ್ತು ಲೋಕ ಜೀವನದ ಅನುಭವ. ನನ್ನ ಜೊತೆಯಲ್ಲಿ ಕೌನ್ಸಿಲರುಗಳಾಗಿದ್ದ ವರು ಎಲ್ಲ ವರ್ಗಗಳಿಂದಲೂ ಸನ್ಮಾನ್ಯರಾಗಿದ್ದವರು. ರಾವ್ ಬಹದ್ದೂರ್ ಬಿ. ಕೆ. ಗರುಡಾಚಾರ್ಯರು, ಎಸ್. ವೆಂಕಟರಂಗಯ್ಯಂಗಾರ್ಯರು, ಆದೆಪ್ಪ ನವರು, ಚಿನ್ನಸ್ವಾಮಿಶೆಟ್ಟರು, ಉಸ್ಮಾನ್ ಖಾನ್ ಸಾಹೇಬರು, ಕರಣಿಕ ಕೃಷ್ಣಮೂರ್ತಿಗಳು—ಇವರೆಲ್ಲ ಮರ್ಯಾದಸ್ಥರು; ಉಚಾಯಿಸಿ ಮಾತ

ನಾಡುವವರಲ್ಲ. ಹೇಳಬೇಕಾದದ್ದನ್ನು ಗಂಭೀರವಾಗಿ ಹೇಳಿ ತಮ್ಮ ಉದ್ದೇಶವನ್ನು ಸಾಧಿಸಿಕೊಳ್ಳುತ್ತಿದ್ದರು. ರೋಷಾವೇಶಗಳು ಬಂದಾಗ ಅಧ್ಯಕ್ಷರಾದ ಪುಟ್ಟಣ್ಣಶೆಟ್ಟರು ತಡೆಹಾಕಿ ಚರ್ಚೆಯನ್ನು ಹದಕ್ಕೆ ತರುತ್ತಿದ್ದರು. ಒಂದು ಉದಾಹರಣೆಯನ್ನು ಹೇಳುತ್ತೇನೆ.

ಒಂದು ಸಾರಿ ನೀರಿನ ಸರಬರಾಯಿಯನ್ನು ಕುರಿತು ಚರ್ಚೆಯೆದ್ದಿತು. ಆ ವರ್ಷ ಮಳೆ ಬಾರದಿದ್ದ ಕಾರಣದಿಂದಲೋ ಹೇಗೋ, ಹೆಸರುಘಟ್ಟದ ಕೆರೆಯಲ್ಲಿ ನೀರು ತೀರಾ ಕಡಮೆಯಾಗಿತ್ತು. ಇದರ ಮೇಲೆ ಚರ್ಚೆ. ಆ ಅವಸರದಲ್ಲಿ ಉಸ್ಮಾನ್ ಖಾನ್ ಸಾಹೇಬರು ಹೀಗೆ ಹೇಳಿದರು:

"ಸ್ವಾಮಿ, ಒಂದು ಜನ ಇದಾರೆ. ನಲ್ಲಿಯ ಹತ್ತಿರ ಬಂದುಬಿಟ್ಟರೆ ಒಂದು ಘಂಟೆಯಾದರೂ ಹೋಗುವುದೇ ಇಲ್ಲ. ಮೈತಿಕ್ಕಿದ್ದೂ ತಿಕ್ಕಿದ್ದೇ. ಬಟ್ಟೆ ಒಗೆದದ್ದೂ ಒಗೆದದ್ದೇ. ನೀರು ಹೀಗೆ ಹಾಳಾಗಿಹೋಗುತ್ತದೆ ಸ್ವಾಮಿ."

ಕರಣಿಕ ಕೃಷ್ಣಮೂರ್ತಿಗಳು ಎದ್ದು ನಿಂತರು: "ಸ್ವಾಮಿ, ಇವರು ಬ್ರಾಹ್ಮಣರನ್ನು ತಾನೆ ಅನ್ನುತ್ತಿರುವುದು?" ಎನ್ನುತ್ತ ತೋಳುಗಳನ್ನು ಚಾಚಿ ಕೈಜಾಡಿಸಿದರು—ಕುಸ್ತಿಗೆ ಬರುವಂತೆ. ಇನ್ನು ಮೂರು ನಾಲ್ಕು ಮಂದಿ ಮೇಲಕ್ಕೇಳಲು ಸಿದ್ಧರಾದರು. ಪುಟ್ಟಣ್ಣಶೆಟ್ಟರು ಹೇಳಿದರು:

ಪು: "ತಾಳಿ ತಾಳಿ, ಅವರ ಅಭಿಪ್ರಾಯ ಕೇಳೋಣ. ಉಸ್ಮಾನ್ ಖಾನ್ ಸಾಹೇಬರೆ, ಬ್ರಾಹ್ಮಣರು ನೀರನ್ನು ಪೋಲು ಮಾಡುತ್ತಿದ್ದಾರೆಂದು ನಿಮ್ಮ ಅಭಿಪ್ರಾಯವೆ?"

ಉ: "ಎಲ್ಲಾದರೂ ಉಂಟೆ ಸ್ವಾಮಿ? ನನ್ನ ಅಂಗಡಿಗೆ ಬಂದು ಲೆಕ್ಕದ ಪುಸ್ತಕಗಳನ್ನು ನೋಡಲಿ. ನನ್ನ ದೊಡ್ಡ ದೊಡ್ಡ ಜವಳಿ ಗಿರಾಕಿಗಳೆಲ್ಲ ಬ್ರಾಹ್ಮಣರೇ. ಅವರು ಜವಳಿ ಕೊಂಡ ಹಾಗೆ ಇನ್ನು ಯಾರು ಕೊಳ್ಳುತ್ತಾರೆ? ಅವರಿಂದಲೇ ಸ್ವಾಮಿ ನನಗೆ ಅನ್ನ."

ಹೀಗೆ ಕೋಪದಲ್ಲಿ ಪ್ರಾರಂಭವಾದದ್ದು ನಗುವಿನಲ್ಲಿ ಪರ್ಯವಸಾನ.

ಪುಟ್ಟಣ್ಣಶೆಟ್ಟರಲ್ಲಿ ದೊಡ್ಡಮನುಷ್ಯತನವಿದ್ದದ್ದರಿಂದ ಎಲ್ಲರೂ ದೊಡ್ಡ ಮನುಷ್ಯತನವನ್ನು ತೋರಿಸುತ್ತಿದ್ದರು. ಸಭೆಯಲ್ಲಿ ದೊಂಬಿ ಗದ್ದಲಗಳೇಳುತ್ತಿರಲಿಲ್ಲ.

## ಲೌಕಿಕ ವಿವೇಕ

ಪುಟ್ಟಣ್ಣಶೆಟ್ಟರವರ ಬಹು ಮುಖ್ಯ ಗುಣ ಲೌಕಿಕ ವಿವೇಕ. ಅದು ನಯವಿನಯಪೂರ್ವಕವಾದ ವಿವೇಕ. ಯಾವ ನಾಜೂಕನ್ನು ಇಂಗ್ಲಿಷಿನಲ್ಲಿ

Tact ಎಂದು ಕರೆಯುತ್ತಾರೋ ಅದು ಲೋಕದಲ್ಲಿ ಎಷ್ಟು ಅಪರೂಪವಾದ ಗುಣವೋ ಅಷ್ಟು ಬೆಲೆಯುಳ್ಳ ಗುಣ. "ಟ್ಯಾಕ್ಟ್" ಇಲ್ಲದಿದ್ದರೆ ನಮ್ಮ ಜೀವನ ಒರಟಾಟವಾದೀತು. "ಟ್ಯಾಕ್ಟ್", "ನಾಜೂಕು" ಎಂದರೆ ಅಸತ್ಯ, ಸುಳ್ಳು ಎಂದು ಅರ್ಥಮಾಡತಕ್ಕದ್ದಲ್ಲ. ಸತ್ಯವನ್ನು ಕಟುತೆಯಿಲ್ಲದಂತೆ, ಯಾವ ಕಾಲಕ್ಕೆ ಎಷ್ಟು ಆವಶ್ಯಕವೋ ಅಷ್ಟನ್ನು ಮಾತ್ರ, ಅದನ್ನು ಹೇಳುವ ರೀತಿಯಿಂದ ಯಾರಿಗೂ ಹಾನಿಯಾಗದಂತೆ ಹೇಳುವುದು "ಟ್ಯಾಕ್ಟ್".

ಲೋಕದಲ್ಲಿ ಬಹುಜನರು ಸತ್ಯವೆಂಬುದು ಅವಶ್ಯವಾಗಿ ಒರಟು, ಅದರ ಮುಖ ಮುಳ್ಳು ಮುಳ್ಳು, ಅದರ ಧ್ವನಿ ಗಡಸು—ಎಂದು ತಿಳಿದುಕೊಂಡಿರುತ್ತಾರೆ. ಅವರು ಯಾವ ಮಾತನ್ನು ಹೇಳಬೇಕಾದರೂ ಅನಾವಶ್ಯಕವಾದ ಸ್ವರ ಭಾರವನ್ನು (Emphasis) ಹಾಕಿ ವೀರಾವೇಶದ ಧ್ವನಿಯಲ್ಲಿ ಹೇಳುವ ಅಭ್ಯಾಸಮಾಡಿಕೊಂಡಿರುತ್ತಾರೆ. ಇಂಥ ಸತ್ಯವಚನದಿಂದ ಕೇಳುವವರಿಗೆ ಬೋಧೆಯಾಗುವುದು ಸತ್ಯಾಂಶಕ್ಕಿಂತ ಹೆಚ್ಚಾಗಿ ಆವೇಶ. "ನೀರು ಬಿಸಿಯಾಗಿದೆ" ಎಂದು ಹೇಳುವುದಕ್ಕೂ "ನೀರು ಸುಡುತ್ತಿದೆ" ಎಂದು ಹೇಳುವುದಕ್ಕೂ ವ್ಯತ್ಯಾಸವಿದೆಯಲ್ಲವೆ? ಈ ಭೇದಗ್ರಹಣವೇ ಸತ್ಯವಚನದ ಒಂದು ವಿಶೇಷಗುಣ. ವಸ್ತುಸಂಗತಿಯನ್ನು ಅದಕ್ಕೆ ಬಣ್ಣಕಟ್ಟಿ ಹೇಳುವುದು ಕೆಲವರ ವಾಡಿಕೆ. ಇರುವ ಬಣ್ಣವನ್ನು ತೇಲಿಸಿ ಹೇಳುವುದು ಇನ್ನು ಕೆಲವರ ವಾಡಿಕೆ. ಬಣ್ಣ ಹೆಚ್ಚೂ ಇಲ್ಲದೆ ಕಡಮೆಯೂ ಇಲ್ಲದೆ ಹೇಳುವುದು ಮತ್ತೆ ಕೆಲವರ ವಾಡಿಕೆ. ಲೋಕವ್ಯವಹಾರದಲ್ಲಿ ಈ ಮೂರು ಬಗೆಗಳಿಗೂ ಉಚಿತ ಸ್ಥಾನವುಂಟು. ಹಾಗಾದರೆ ಆ ಔಚಿತ್ಯವೆಂಬುದೇನು? ಯಾವ ರೀತಿಯ ಮಾತಿನಿಂದ ಹಿತಸಾಧನೆ ಹೆಚ್ಚಾಗಿ ಅಹಿತ ಕಡಮೆಯಾದೀತೋ ಅದು ಉಚಿತ.

ಯದ್ಭೂತಹಿತಮತ್ಯಂತಂ
. ತತ್ಸತ್ಯಮಿತಿ ಧಾರಣಾ ॥

ಆದದ್ದರಿಂದ ಆಡಿದ ಮಾತೂ ನಡೆದ ನಡವಳಿಕೆಯೂ ಹಿತಪ್ರಯೋಜಕವಾಗಬೇಕು. ಈ ಹಿತಸಿದ್ಧಿಗೋಸ್ಕರ ಕೆಲವು ಸಂದರ್ಭದಲ್ಲಿ ಧ್ವನಿಯನ್ನೆತ್ತಬೇಕಾಗುತ್ತದೆ; ಬಲವಾದ ಮಾತುಗಳನ್ನು ಬಳಸಬೇಕಾಗುತ್ತದೆ. ಇನ್ನು ಕೆಲವು ಸಂದರ್ಭಗಳಲ್ಲಿ ಮಾತುಗಳನ್ನು ಮೃದುಮಾಡಬೇಕಾಗುತ್ತದೆ; ಮೆಲುದನಿಯಲ್ಲಿ ಹೇಳಬೇಕಾಗುತ್ತದೆ. ಧ್ವನಿ ಎಂಥಾದ್ದಾಗಲಿ, ಮಾತು ಎಂಥಾದ್ದಾಗಲಿ, ವಿಷಯವು ಹಿತಕರವಾಗಿ ಕೇಳಿದವರ ಮೇಲೆ ಪರಿಣಾಮ ಮಾಡು

ವುದು ಮುಖ್ಯ. ಎಂದರೆ ಮಾತಿನ ರೀತಿ ಮಾತನಾಡುವವನೊಬ್ಬನನ್ನೇ ಅಲ್ಲ, ಮಾತು ಕೇಳುವವನನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಮಾತೆಂಬುದು ದ್ವಿಪಕ್ಷ ಗ್ರಾಹ್ಯವಾಗಿರಬೇಕು. ಇದನ್ನು ಪೂರ್ವಿಕರು ಬಹು ಚೆನ್ನಾಗಿ ಗ್ರಹಿಸಿದ್ದರು.

ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಶ್ರೋತಾ।
ವಕ್ತಾ ಶ್ರೋತಾ ಚ ದುರ್ಲಭಃ॥

ಹೀಗೆ ಎಲ್ಲ ಸಂವಾದದಲ್ಲಿಯೂ ಮಾತು ಸತ್ಯವನ್ನೊಳಕೊಂಡಿರಬೇಕು; ಮತ್ತು ಕೇಳುವವನ ಯೋಗ್ಯತೆ ಮನೋಧರ್ಮಗಳಿಗೆ ಅನುಕೂಲವಾಗಿರಬೇಕು. ಇದು ಟ್ಯಾಕ್ಟಿನ ಮರ್ಮ.

ಪುಟ್ಟಣ್ಣ ಶೆಟ್ಟರವರು ಈ ತತ್ತ್ವವನ್ನು ಅನುಸರಿಸಿದ್ದವರೆಂದು ನನ್ನ ನಂಬಿಕೆ

ಅನುದ್ವೇಗಕರಂ ವಾಕ್ಯಮ್॥

ಇದು ಅವರ ವ್ರತ.

ಅದು ಬಹುಕಷ್ಟವಾದ ವ್ರತ. ನಮಗೆಲ್ಲ ಕಾಫಿ ಕೊಂಚ ತಣ್ಣವಾಗಿದ್ದರೆ ಕೋಪ ಬಂದುಬಿಡುತ್ತದೆ. ಕೊಂಚ ಬಿಸಿ ಹೆಚ್ಚಾಗಿದ್ದರೆ ಮತ್ತೂ ರೇಗುತ್ತೇವೆ. ನಮ್ಮ ಮನಸ್ಸಿನ ಕಾವುಗಳು ನಮ್ಮ ಹಿಡಿತದಲ್ಲಿರುವುದಿಲ್ಲ.

ಪುಟ್ಟಣ್ಣ ಶೆಟ್ಟರಿಗೆ ಹೇಗೋ ಈ ವಾಙ್ನಿಯಮ ಬಂದಿತ್ತು. ಇದನ್ನೇ ಭಗವದ್ಗೀತೆಯಲ್ಲಿ

ವಾಙ್ಮಯಂ ತಪ ಉಚ್ಯತೇ॥

ಎಂದು ಪ್ರಶಂಸೆ ಮಾಡಿದ್ದಾರೆ.

## ಯಾಚಕರ ಹಾವಳಿ

ಪುಟ್ಟಣ್ಣ ಶೆಟ್ಟರು ದೊಡ್ಡ ಅಧಿಕಾರದಲ್ಲಿದ್ದವರು, ಮತ್ತು ಪ್ರಭಾವಶಾಲಿಗಳು. ಆದದ್ದರಿಂದ ಅವರಲ್ಲಿಗೆ ಯಾಚನಾರ್ಥವಾಗಿ ಬರುತ್ತಿದ್ದವರ ಸಂಖ್ಯೆ ಹೆಚ್ಚಿನದು: ಅವರು ಯಾಚಿಸುತ್ತಿದ್ದದ್ದೆಲ್ಲ ಎಲ್ಲ ಸಂದರ್ಭದಲ್ಲೂ ಸಕಾರಣವಾದದ್ದೆಂದು ಯಾರೂ ಹೇಳರು. ಕಾರ್ಯಸಾಧ್ಯವಲ್ಲದ ಬೇಡಿಕೆಗಳೇ ಹೆಚ್ಚು. ಇಂಥ ಅಸಾಧ್ಯವಾದ ಬೇಡಿಕೆಗಳನ್ನು ಬೇಡಿದವರ ವಿಷಯದಲ್ಲಿ ಪುಟ್ಟಣ್ಣ ಶೆಟ್ಟರು ಅನುಸರಿಸಬೇಕಾಗಿದ್ದ ನೀತಿ ಯಾವುದು? "ನಿಮ್ಮ ಬೇಡಿಕೆ ಅಯುಕ್ತವಾದದ್ದು" ಎಂದರೆ ಬೇಡುವವರ ಮೇಲೆ ಏನು ಪರಿಣಾಮವಾದೀತು? "ಅದನ್ನು ಮಾಡಿಕೊಟ್ಟೇನು" ಎಂದು ಹೇಳಿದರೆ ಏನು ಪರಿಣಾಮ

ವಾದೀತು? ದಿಟ ಹೇಳಿದರೆ ಯಾಚಕರಿಗೆ ನಿರಾಶೆ; ಸಟೆ ಹೇಳುವುದು ಅಂತಸ್ಸಾಕ್ಷಿಗೆ ವಿರೋಧ.

ಪುಟ್ಟಣ್ಣಶೆಟ್ಟರು ದಿನದಿನವೂ ಇಂಥ ಸಂದರ್ಭಗಳಲ್ಲಿ ಸಿಕ್ಕಿ ಸಂಕಟ ಪಡುತ್ತಿದ್ದರು. "ಆಗಲಿ, ನೋಡೋಣ" ಎನ್ನುವರು; "ಯೋಚನೆ ಮಾಡುತ್ತೇನೆ" ಎನ್ನುವರು; "ಹೇಳಿ ನೋಡುತ್ತೇನೆ" ಎನ್ನುವರು. ಬೇಡಿಕೆ ಅಸಾಧ್ಯವಾದದ್ದೆಂಬುದನ್ನು ಅವರು ಸೂಚಿಸಿಯೇ ಸೂಚಿಸುವರು; ಯಾಚಕರು ಅದು ಕಿವಿಗೆ ಬೀಳಲಿಲ್ಲವೆಂಬಂತೆಯೇ ನಡೆಯುವರು. ಬಂದ ಜನಕ್ಕೆ ಮುಖ ಮುರಿಯುವುದು ಒಂದು ದೊಡ್ಡ ವಿಷಯವಲ್ಲ. ಅವರ ಬೇಡಿಕೆ ಅಸಂಗತವೆಂದು ಧ್ವನಿತವಾಗಿ ಹೇಳಿದರೆ ಅವರು ಅದನ್ನು ಗ್ರಹಿಸಿ ನಡೆದುಕೊಂಡಲ್ಲಿ ಕಷ್ಟವೇನೂ ಇಲ್ಲ. ಗ್ರಹಿಸದೆಹೋದರೆ ಆಗ ಏನಾದರೂ ಒಂದು ಲಘುವಾದ ಸಮಾಧಾನದ ಮಾತನ್ನು ಆಡಿ ಅವರನ್ನು ಕಳುಹಿಸಬೇಕಾಗುತ್ತದೆ.

ಇಂಥ ಅಸಾಧ್ಯ ಯಾಚಕರಿಂದ, ಕಾರಣ ವಿಚಾರ ಮಾಡದ ಜನದಿಂದ ಪುಟ್ಟಣ್ಣಶೆಟ್ಟರವರ ಹೆಸರಿಗೆ ಅವರು ಬರಿಯ ಮೇಲ್ನಗುವಿನ ಮನುಷ್ಯರೆಂದು ಅಪಕೀರ್ತಿ ಬಂದಿದೆ. ವಾಸ್ತವವಾಗಿ ಅವರು ಯಾರಿಗೂ ಎಂದೂ ಒಂದು ಅಸಭ್ಯದ ಮಾತನ್ನಾಡಿದವರಲ್ಲ; ಸುಳ್ಳು ವಾಗ್ದಾನ ಮಾಡಿದವರಲ್ಲ.

## ಚಾಮರಾಜಪೇಟೆಯ ಮನೆ

ಪುಟ್ಟಣ್ಣಶೆಟ್ಟರವರ ಮನೆ ಚಾಮರಾಜಪೇಟೆಯ ಐದನೆಯ ರಸ್ತೆಯಲ್ಲಿದ್ದದ್ದು ಎಲ್ಲ ದೃಷ್ಟಿಗಳಿಂದಲೂ ಸೊಗಸಾದದ್ದು. ವಿಶಾಲವಾದ ಪರಿಸರ (ಕಾಂಪೌಂಡು), ಎತ್ತರವಾದ ನಿವೇಶನ, ಗಾಳಿ ಬೆಳಕುಗಳು ಯಥೇಷ್ಟವಾಗಿದ್ದವು. ಎಲ್ಲೆಡೆಯೂ ಹುಲ್ಲು ಬಯಲು, ಅಲ್ಲಲ್ಲಿ ಸಣ್ಣ ಸಣ್ಣ ಮರಗಳು. ಸಂಪಿಗೆ, ನಾಗಲಿಂಗ, ಪಾದರಿ ಇಂಥವು; ಮಲ್ಲಿಗೆ ಮೊದಲಾದ ಹೂಗಿಡಗಳ ಪೊದರುಗಳು. ದಿನದಿನವೂ ಒಣಗೆಲೆ ತರಗು ಕಸ ತೆಗೆದು ಯಾವಾಗಲೂ ಚೊಕ್ಕಟವಾಗಿರುತ್ತಿದ್ದವು. ಈ ವಿಶಾಲವಾದ ಆವರಣದ ನಡುವೆ ಬೈಠಕ್ಕು ಮನೆ. ಅದರ ಹಿಂದೆ ಭೋಜನಶಾಲೆ. ಅದರಿಂದಾಚೆಗೆ ಗಾಡೀಖಾನೆ. ನಾಲ್ಕು ಕಡೆಯೂ ಪ್ರಾಕಾರದ ಗೋಡೆಯ ಬದಿಯಲ್ಲಿ ಕಾಲುದಾರಿಗಳು. ಪುಟ್ಟಣ್ಣಶೆಟ್ಟರ ಬೆಳಗಿನ ಅಂಗವ್ಯಾಯಾಮವು ಈ ಸುಂದರವಾದ ತೋಟದಲ್ಲಿ ಲಘುಸಂಚಾರದಿಂದ.

ಅವರನ್ನು ನೋಡಲು ಬರುತ್ತಿದ್ದ ಜನದಲ್ಲಿ ಮೂರು ನಾಲ್ಕು ದರ್ಜೆ.

ಒಂದು ದರ್ಜೆಯವರು, ಪುಟ್ಟಣ್ಣ ಶೆಟ್ಟರು ವಾಯುಸೇವನೆಗಾಗಿ ಸಂಚಾರ ಮಾಡುತ್ತಿದ್ದಾಗ ಕಾಂಪೌಂಡಿನಲ್ಲಿ ಅವರ ಪಕ್ಕದಲ್ಲಿಯೂ ಹಿಂದೆಯೂ ನಡೆದು ಮಾತು ಮುಗಿಸಿ ಹೋಗುವರು. ಇಂಥವರು ನೂರರಲ್ಲಿ ಐವತ್ತರಷ್ಟು. ಇನ್ನು ಮೂವತ್ತು ಮಂದಿ ಬೈಠಕ್ಕುಮನೆಯ ವರಾಂಡದಲ್ಲಿ. ಇದು ಮಧ್ಯಾಹ್ನ ನಾಲ್ಕು ಘಂಟೆಯವರೆಗೆ. ಭೇಟಿಗಾರರಲ್ಲಿ ಸುಮಾರು ಹತ್ತು ಹದಿನೈದು ಮಂದಿಗೆ ಮಾತ್ರ ಬೈಠಕ್ಕುಖಾನೆಯ ನಡುಮನೆಯೊಳಕ್ಕೆ ಪ್ರವೇಶ. ಅಲ್ಲಿ ಸೋಫಾ, ಮೆತ್ತೆಯ ಕುರ್ಚಿ ಮೊದಲಾದ ಪರಿಕರಗಳು. ಇನ್ನೂ ಅಪರೂಪದ ದರ್ಜೆಯವರು ನೂರಕ್ಕೆ ಐದು ಮಂದಿ. ಇವರನ್ನು ಒಳಗಡೆಯ ಕೊಠಡಿಯೊಳಕ್ಕೆ ಕರೆದುಕೊಂಡು ಹೋಗಿ ಅಂತರಂಗ ಸಂಭಾಷಣೆ.

ಹೀಗೆ ವಿಸಿಟರುಗಳಿಗೆ ಜಾಗ ಗೊತ್ತಾಗಿತ್ತು. ಆದರೆ ಎಲ್ಲೆಲ್ಲಿಯೂ ಮರ್ಯಾದೆಯೇ. ಬೇಕೋಬಿಟ್ಟಿಯೆಂಬುದಿಲ್ಲ. ಎಲ್ಲೆಲ್ಲಿಯೂ ಚೊಕ್ಕಟ, ಎಲ್ಲೆಲ್ಲಿಯೂ ಅಚ್ಚುಕಟ್ಟು. ಎಲ್ಲಿಯೂ ಒಂದು ಧೂಳಿನ ಕಣವಿಲ್ಲ; ಎಲ್ಲಿಯೂ ಮಾಸಲು ಮುರುಕಲು ಇಲ್ಲ. ಎಂಥವರಿಗೂ ಆಪ್ಯಾಯನಕಾರಿಯಾದ ವಾತಾವರಣ. ಶೇಷಾದ್ರಿ ಅಯ್ಯರವರ ಮನೆಯ ಡೌಲಿಲ್ಲ; ಆನಂದರಾಯರ ಮನೆಯ ಇಕ್ಕಟ್ಟಿಲ್ಲ. ಪುಟ್ಟಣ್ಣ ಶೆಟ್ಟರ ಮನೆಯು ನೆಮ್ಮದಿಯ ಅಂದವೂ ಅನುಕೂಲವೂ ಸೇರಿದ್ದದ್ದು.

## ಹಿತವಾದ

ಒಂದು ದಿನ ಮಧ್ಯಾಹ್ನ ಒಬ್ಬ ವಕೀಲರು ಪುಟ್ಟಣ್ಣ ಶೆಟ್ಟರವರಲ್ಲಿಗೆ ಬಂದರು. ಅವರನ್ನು ಒಂದು ಬುದ್ಧಿವಾದ ಕೇಳಿದರು, ಹೀಗೆ:

ವ: "ಸರಕಾರದವರು ನನಗೆ ಇದೇನೋ ಒಂದು ಕಾಗದ ಕಳಿಸಿದ್ದಾರೆ. ಇದಕ್ಕೆ ಏನು ಜವಾಬು ಬರೆಯಬೇಕೋ ಅಪ್ಪಣೆಯಾಗಬೇಕು."

ಪು: "ಅದೇನು ಕಾಗದ?"

ವಕೀಲರು ಕೊಟ್ಟ ಕಾಗದವನ್ನು ನೋಡಿದರು. ಅದರಲ್ಲಿ ಆ ವಕೀಲರಿಗೆ ಸಬ್‌ಜಡ್ಜಿ ಕೆಲಸವನ್ನು ಕೊಡಲಿರುವುದಾಗಿಯೂ ಅವರು ತಮ್ಮ ಉತ್ತರ ಕಳಿಸಬೇಕೆಂಬುದಾಗಿಯೂ ಇತ್ತು. ಪುಟ್ಟಣ್ಣ ಶೆಟ್ಟರು ಕೊಂಚ ಮುಗುಳ್ನಗೆ ನಕ್ಕು ವಕೀಲರನ್ನು ಕುರಿತು ಕೇಳಿದರು:

ಪು: "ಬಹಳ ಸಂತೋಷ. ನೀವು ಈಗ ಎಷ್ಟು ಇನ್‌ಕಮ್ ಟ್ಯಾಕ್ಸ್ ಕೊಡುತ್ತಿದ್ದೀರೋ?"

ವಕೀಲರು ಜವಾಬು ಹೇಳಲು ಕೊಂಚ ಹಿಂತೆಗೆದು ಮೆಲ್ಲಗೆ ಹೇಳಿದರು :

ವ : "ಈಗ ಸದ್ಯ ಏನೂ ಕೊಡುತ್ತಿಲ್ಲ."

ಪು : "ಹಾಗಾದರೆ ಇನ್ನೊಬ್ಬರನ್ನು ಕೇಳಬೇಕಾದದ್ದೇ ಇಲ್ಲವಲ್ಲ ? ಅಗತ್ಯವಾಗಿ ಒಪ್ಪಿಕೊಳ್ಳಿ. ಅದರಿಂದ ನಿಮಗೆ ಒಳ್ಳೆಯದಾಗುತ್ತದೆ."

## ಲೆಕ್ಕಾಚಾರ

ಇನ್ನೊಂದು ಪ್ರಕರಣ :

ಒಂದು ದಿನ ಮಧ್ಯಾಹ್ನ ಹಯವದನರಾಯರವರು ದಯಮಾಡಿಸಿ ಶೆಟ್ಟರವರ ಎದುರಿಗೆ ಕುಳಿತಿದ್ದರು. ನಾನೂ ಅಲ್ಲಿದ್ದೆ. ಆಗ ಇನ್ನೊಬ್ಬಾತ ಬೀದಿಯಿಂದ ಒಳಕ್ಕೆ ಬಂದು ಯಜಮಾನರಿಗೆ ಕೈಮುಗಿದರು. ಅವರು ಪುಟ್ಟಣ್ಣ ಶೆಟ್ಟರವರ ಮನೆಯ ಯಾವುದೋ ರಿಪೇರಿ ಕೆಲಸವನ್ನು ಮಾಡಿಸಿದ್ದರಂತೆ. ಆ ಕಂಟ್ರಾಕ್ಟರು ವರಾಂಡದಿಂದ ಹೊರಗಡೆ ನಿಂತುಕೊಂಡರು. ಶೆಟ್ಟರವರು "ಏನ್ರಿ ?" ಎಂದು ವಿಚಾರಿಸಿದರು. ಆತ "ನನ್ನ ಬಿಲ್ಲು...." ಎಂದರು. ಅಷ್ಟರೊಳಗಾಗಿ ಹಯವದನರಾಯರು ಆತನ ಕಡೆಗೆ ತಿರುಗಿ "ನಿಮ್ಮ ಬಿಲ್ ಸೆಟ್ಲ್ ಆಗಿದೆಯಪ್ಪ. ನನ್ನ ಆಫೀಸಿಗೆ ಬಂದುಬಿಡಿ. ಚೆಕ್ ಬರೆದು ಇಟ್ಟಿರುತ್ತೀನೆ" ಎಂದರು. ಹಯವದನರಾಯರು ಇಂಥ ಹಣಕಾಸಿನ ವಿಷಯಗಳಲ್ಲಿ ಪುಟ್ಟಣ್ಣಶೆಟ್ಟರವರಿಗೆ ಆಪ್ತ ಸಹಾಯಕರಾಗಿದ್ದರು. ಕಂಟ್ರಾಕ್ಟರು "ಯಾವಾಗ ಬರಬೇಕೆಂದು ಅಪ್ಪಣೆಯಾಗುತ್ತದೆ ?" ಎಂದರು. ಹಯವದನರಾಯರು "ನಾಳೆಯೇ ಬನ್ನಿ, ಸಂಜೆ. ಮುನ್ನೂರ ಎಂಭತ್ತಕ್ಕೆ ಬರೆದಿಟ್ಟಿರುತ್ತೀನೆ" ಎಂದರು. ಕಂಟ್ರಾಕ್ಟರು "ತಮ್ಮಿಷ್ಟ" ಎಂದರು.

ಪುಟ್ಟಣ್ಣಶೆಟ್ಟರು "ಬಿಲ್ಲಿನ ಮೊಬಲಗು ಎಷ್ಟು ?" ಎಂದರು. ಹಯವದನರಾಯರು "ಮುನ್ನೂರೆಂಭತ್ತೈದು ರೂಪಾಯಿ, ಆರಾಣೆ, ಎಂಟು ಕಾಸು" ಎಂದರು. ಕೆಲಸ ಮುಗಿದು ಅಜಮಾಯಿಷಿಯಾದ ಮೇಲೆ ತೀರ್ಮಾನವಾಗಿದ್ದದ್ದು ಆ ಮೊಬಲಗು. ಶೆಟ್ಟರವರು ಹಯವದನರಾಯರನ್ನು "ಐದೂ ಚಿಲ್ಲರೆ ಯಾಕೆ ಕತ್ತರಿಸುತ್ತೀರಿ ?" ಎಂದರು. ರಾಯರು "ಅದೇನು ಜುಜುಬಿ" ಎಂದರು. ಶೆಟ್ಟರು "ಜುಜುಬಿಯಾದರೆ ಕೊಟ್ಟುಬಿಡಬಹುದಲ್ಲ !" ಎಂದರು.

ಇದು ಅವರ ಸ್ವಭಾವ.

ಒಟ್ಟಿನ ಮೇಲೆ ಲೆಕ್ಕಾಚಾರದ ಸ್ವಭಾವ. ಲೆಕ್ಕಾಚಾರ ನಡೆದ ಮೇಲೆ ಔದಾರ್ಯವೂ ಉಂಟು.

## ಪಾಂಡಿತ್ಯವೆ ?

ಪುಟ್ಟಣ್ಣ ಶೆಟ್ಟರವರು ಲೋಕನಿರ್ವಾಹದಲ್ಲಿ ಜಯಶಾಲಿಯಾದದ್ದು ಬರಿಯ ನವ್ರುರು ಉಪಾಯ ಇಷ್ಟರಿಂದಲೇನೋ, ಅವರ ಬುದ್ಧಿಶಕ್ತಿಯೂ ದೊಡ್ಡದೋ? ಈ ಪ್ರಶ್ನೆಯನ್ನು ಬಹು ಜನ ನನ್ನೊಡನೆ ಎತ್ತಿದ್ದಾರೆ. ಪುಟ್ಟಣ್ಣ ಶೆಟ್ಟರವರಿಗೆ ಮೈಸೂರು ವಿಶ್ವವಿದ್ಯಾನಿಲಯವು ಎಲ್‌ಎಲ್. ಡಿ. ಪ್ರಶಸ್ತಿಯನ್ನು ಕೊಟ್ಟಾಗ ಆ ಪ್ರಶ್ನೆ ಪ್ರಬಲವಾಗಿತ್ತು. ಈ ಪ್ರಶ್ನೆಗೆ ಯಾವ ಪರೀಕ್ಷೆಯನ್ನೂ ಪ್ಯಾಸ್ ಮಾಡದ ನನ್ನಂಥವನು ಉತ್ತರ ಕೊಡ ಹೊರಡುವುದು ಅಧಿಕಪ್ರಸಂಗಿತನವಾದೀತೋ ಏನೋ.

ಪುಟ್ಟಣ್ಣ ಶೆಟ್ಟರವರು ಯಾವ ಪರೀಕ್ಷೆಯನ್ನೂ ಪ್ಯಾಸ್ ಮಾಡಿದವರಲ್ಲ. ತಾವು ಪಂಡಿತರೆಂದು ಹೇಳಿಕೊಳ್ಳಲು ಆಸೆಪಟ್ಟವರೂ ಅಲ್ಲ. ಯಾವ ಶಾಸ್ತ್ರವನ್ನೂ ಅಭ್ಯಾಸಮಾಡಿದವರೂ ಅಲ್ಲ. ಅವರಿಗಿದ್ದ ಬಂಡವಾಳ ಅವರ ನೈಜವಾದ ಲೌಕಿಕ ವಿವೇಕ, ಕಾಮನ್‌ಸೆನ್ಸ್ (Common sense).

ಅನಪೇಕ್ಷಿತಗುರುವಚನಾ
ಸರ್ವಾನ್ ಗ್ರಂಥೀನ್ ವಿಭೇದಯತಿ ಸಮ್ಯಕ್ ।
ವಿಘಟಯತಿ ಪರರಹಸ್ಯಂ
ವಿಮರ್ಶಶಕ್ತಿರ್ನಿಜಾ ಜಯತಿ ॥

ನನ್ನ ಒಂದು ಅನುಭವವನ್ನು ಹೇಳುತ್ತೇನೆ. ಮೊದಲನೆಯ ಪ್ರಪಂಚ ಯುದ್ಧದ ಕಾಲದಲ್ಲಿ—ಸುಮಾರು ೧೯೧೫ರಲ್ಲಿ—ಬ್ರಿಟಿಷ್ ಸೈನ್ಯದ ಒಂದು ತುಕಡಿ ಬೆಂಗಳೂರಿನಲ್ಲಿ ತಂಗಿತ್ತು. ಅದು ಟೆರಿಟೋರಿಯಲ್ಸ್ (Territorials) ಎಂಬ ದಳ. ಆ ದಳದಲ್ಲಿದ್ದ ಜನ ವಿದ್ಯಾವಂತರು. ಇಂಗ್ಲೆಂಡಿನ ಆಕ್ಸ್‌ಫರ್ಡ್, ಕೇಂಬ್ರಿಡ್ಜ್ ಮೊದಲಾದ ಪ್ರಸಿದ್ಧ ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಥಿಗಳಾಗಿದ್ದ ಯುವಕರು. ಕೇವಲ ಸ್ವದೇಶಾಭಿಮಾನದ ಕಾರಣದಿಂದ ಈ ಟೆರಿಟೋರಿಯಲ್ಸ್ ದಳದಲ್ಲಿ ಸೇರಿದ್ದವರು. ಇಂಥ ವಿದ್ವಜ್ಜನ ನಮ್ಮ ದೇಶಕ್ಕೆ ಬಂದು ಇಲ್ಲಿ ತಂಗಿರುವಾಗ ಅವರಿಗೆ ಇಂಡಿಯದೇಶದ ಚರಿತ್ರೆ, ಸಾಹಿತ್ಯ, ಸಮಾಜ ಸಂಪ್ರದಾಯ ಮುಂತಾದ ಮುಖ್ಯ ಮುಖ್ಯ ವಿಷಯಗಳನ್ನು ಪರಿಚಯ ಮಾಡಿಸಿದರೆ ಅದರಿಂದ ಇಂಗ್ಲೆಂಡ್, ಇಂಡಿಯ ಎರಡು ದೇಶಗಳಿಗೂ ಒಳ್ಳೆಯದಾಗಬಹುದೆಂದು ಆಗಿನ ಬ್ರಿಟಿಷ್ ರೆಸಿಡೆಂಟ್ ಸರ್ ಹ್ಯೂ ಡಾಲಿ ಅವರು ಆಲೋಚಿಸಿದರು. ಆ ಆಲೋಚನೆಯ ಮೇರೆಗೆ ಮೈಸೂರಿನ ಆಡಳಿತವನ್ನೂ ಚರಿತ್ರೆಯನ್ನೂ ಕುರಿತು ಉಪನ್ಯಾಸ ಮಾಡಬೇಕೆಂದು

ಪುಟ್ಟಣ್ಣಶೆಟ್ಟರವರನ್ನು ಕೇಳಿಕೊಂಡಿದ್ದರಂತೆ. ಉಪನ್ಯಾಸ ನಲವತ್ತು ನಲವತ್ತೈದು ನಿಮಿಷಗಳಿಗೆ ಮೀರಿರಬಾರದು. ಪುಟ್ಟಣ್ಣಶೆಟ್ಟರವರು ಒಪ್ಪಿಕೊಂಡಿದ್ದರು. ನನಗೆ ಈ ವಿಷಯ ಗೊತ್ತಿರಲಿಲ್ಲ. ಆದರೆ ಒಂದು ದಿನ ಮಧ್ಯಾಹ್ನ ನಾನು ಅವರ ಮನೆಗೆ ಹೋಗಬೇಕೆಂದು ಕರೆ ಬಂದಿತ್ತು. ಅದರಂತೆ ನಾನು ಸುಮಾರು ಮಧ್ಯಾಹ್ನ ಎರಡೂವರೆ ಘಂಟೆಗೆ ಅವರ ಮನೆಗೆ ಹೋದೆ. ಪುಟ್ಟಣ್ಣಶೆಟ್ಟರವರು ನನಗೆ ಹೇಳಿದರು :

"ನೀವು ಇಲ್ಲಿ (ವರಾಂಡದಲ್ಲಿ) ಈ ಕುರ್ಚಿಯ ಮೇಲೆ ಕುಳಿತುಕೊಳ್ಳಿ. ನಾನು ಈ ಕೋಣೆಯಲ್ಲಿ ಮೇಜಿನ ಮುಂದೆ ಕುಳಿತು ಬರೆಯುತ್ತೇನೆ. ಹಾಳೆ ಹಾಳೆಯಾಗಿ ಬರೆದು ಬರೆದಂತೆ, ಅದನ್ನು ನಿಮ್ಮ ಕೈಗೆ ಕೊಡುತ್ತೇನೆ. ನೀವು ಓದಿ ನೋಡಿ ತಿದ್ದುವುದೇನಾದರೂ ಇದ್ದರೆ ಹೇಳಿ."

ಅದರಂತೆ ನಡೆಯಿತು. ಯಾವುದೋ ಹಳೆಯ ಕ್ಯಾಲೆಂಡರಿನ ಹಾಳೆಗಳ ಹಿಂಭಾಗದ ಮೇಲೆ ಅವರು ಬರೆದು ಬರೆದು ನನ್ನ ಕೈಗೆ ಕೊಡುತ್ತಿದ್ದರು. ಆ ಬರವಣಿಗೆ ನಾನು ಮೇಲೆ ಹೇಳಿದ ವಿಷಯವನ್ನು ಕುರಿತದ್ದು—ಆಧುನಿಕ ಮೈಸೂರಿನ ಚರಿತ್ರೆ ಮತ್ತು ಆಡಳಿತ—ನಾನು ಪ್ರತಿಯೊಂದು ಹಾಳೆಯನ್ನೂ ಸಾವಧಾನವಾಗಿ ಓದಿದೆ. ಸುಮಾರು ಒಂದು ಘಂಟೆಯೊಳಗಾಗಿ ಇಷ್ಟುದೊಡ್ಡ ವಿಷಯವನ್ನು ಕುರಿತು ಇಷ್ಟು ಸಂಗ್ರಹವಾಗಿ, ಇಷ್ಟು ವಿಶದವಾಗಿ ಮತ್ತು ಇಷ್ಟು ಪ್ರಮಾಣವತ್ತಾಗಿ ಬರೆಯಬಲ್ಲವರು ಯಾವ ಪರೀಕ್ಷೆಯನ್ನು ಪ್ಯಾಸ್ ಮಾಡದಿದ್ದರೂ ಪಂಡಿತರೇ, ಶಕ್ತಿವಂತರೇ—ಎಂದು ನನಗನ್ನಿಸಿತು.

## ಸಂತೋಷಜನಕತ್ವ

ಅವರ ಬುದ್ಧಿಗುಣಗಳಲ್ಲಿ ಮುಖ್ಯವಾದದ್ದು ಯುಕ್ತಾಯುಕ್ತ ವಿವೇಕ ಮತ್ತು ನಯವಿನಯ ಎಂದು ಹೇಳಿದೆ. ಅವರ ನೀತಿಗುಣಗಳಲ್ಲಿ ಮುಖ್ಯವಾದದ್ದು ಸಂತೋಷಪ್ರದಾಯಕತ್ವ. ಅವರು ಎಲ್ಲರೊಡನೆಯೂ ಹಿತಕರವಾದ ರೀತಿಯಲ್ಲಿ ವರ್ತಿಸಬೇಕೆಂದಿದ್ದವರು. ಯಾರೊಡನೆಯೂ ಒಂದು ಕಠಿನವಾದ ಮಾತನ್ನಾಗಲಿ ಮಾನಹಾಸಿಕರವಾದ ಮಾತನ್ನಾಗಲಿ ಆಡಿದವರಲ್ಲ; ಮತ್ತು ಎಲ್ಲರಿಗೂ ಕೂಡಿದಷ್ಟು ಸಂತೋಷವನ್ನುಂಟುಮಾಡಬೇಕೆಂಬುದು ಅವರ ತಾತ್ಪರ್ಯ.

ಸಂತೋಷಂ ಜನಯೇತ್ ಪ್ರಾಜ್ಞಃ
ತದೇವೇಶ್ವರಪೂಜನಮ್ ॥

ಅವರು ಬಹುಮಂದಿಗೆ ಉಪಕಾರಿಗಳಾಗಿದ್ದರು. ಉದಾರಿಗಳಾಗಿದ್ದರು. ೧೯೩೭ರ ಸುಮಾರಿನಲ್ಲಿ ಹಳೆಯ ಅಠಾರಾ ಕಛೇರಿಯ ಪೂರ್ವಭಾಗದಲ್ಲಿ, ಮ್ಯೂಸಿಯಮ್ಮಿಗೆ ಎದುರಾಗಿ ಒಂದು ಸೋಪಾನ ವೇದಿಕೆಯನ್ನು ಶ್ರೀಮನ್ ಮಹಾರಾಜರ ಅಪ್ಪಣೆಯ ಮೇರೆಗೆ ಕಟ್ಟಲಾಗುತ್ತಿತ್ತು ; ಅರಮನೆಯ ಓಲಗ ಮೊದಲಾದವನ್ನು ಜನ ಕುಳಿತು ಕೇಳುವುದಕ್ಕಾಗಿ. ಆ ಕೆಲಸ ನಡೆಯುತ್ತಿದ್ದಾಗ ಒಂದು ದಿನ ಸಂಜೆ ನಾನು ತಂಗಾಳಿಗೋಸ್ಕರವೆಂದು ಅಲ್ಲಿಗೆ ಹೋದೆ. ಅದು ಬೇಸಗೆಯ ಕಾಲ. ಪುಟ್ಟಣ್ಣ ಶೆಟ್ಟರು ಅಲ್ಲಿಗೆ ಆ ವೇಳೆಗೆ ಬಂದಿದ್ದರು. ಆಗ ಅವರು ನನಗೆ ಹೇಳಿದರು, ಮಾರನೆಯ ದಿನ ನಾನು ಅವರ ಮನೆಗೆ ಹೋಗತಕ್ಕದ್ದೆಂದು.

ನನ್ನನ್ನು ಮನೆಯ ಒಳಗಡೆ ಒಂದು ಕೋಣೆಗೆ ಕರೆದುಕೊಂಡು ಹೋಗಿ ಅಲ್ಲಿ ಕುಳಿತು ಪುಟ್ಟಣ್ಣ ಶೆಟ್ಟರು ತಮ್ಮ ಆಲೋಚನೆಯೊಂದನ್ನು ಹೇಳಿದರು :

"ನನಗೆ ವಯಸ್ಸಾಗುತ್ತ ಬಂತು. ದೇವರು ಕೊಟ್ಟದ್ದನ್ನು ಧರ್ಮಕಾರ್ಯಕ್ಕೆ ಕೊಡಬೇಕೆಂದು ತೋಚಿತು. ಕೊಂಚ ಹಣವನ್ನು ಪುರಭವನಕ್ಕಾಗಿ (Town Hall) ಕೊಟ್ಟದ್ದೇನೆ. ಕೊಂಚವನ್ನು ವಿಕ್ಟೋರಿಯ ಆಸ್ಪತ್ರೆಗೋಸ್ಕರ ಕೊಟ್ಟಿದ್ದೇನೆ. ಇನ್ನು ಕೊಂಚ ಹಣವನ್ನು ಒಂದು ಧರ್ಮಾರ್ಥವಾದ ವಿದ್ಯಾರ್ಥಿನಿಲಯಕ್ಕೆ (Students' Hostel) ವಿನಿಯೋಗಿಸಬೇಕೆಂದು ಯೋಚನೆ. ನಿಮ್ಮ ಅಭಿಪ್ರಾಯವೇನು? ಆ ವಿದ್ಯಾರ್ಥಿನಿಲಯದಲ್ಲಿ ಎಲ್ಲ ಹಿಂದೂ ಜನರಿಗೂ ಅವಕಾಶ ಇರಬೇಕು. ಬ್ರಾಹ್ಮಣರು ಅವಶ್ಯವಾಗಿ ಅಲ್ಲಿರಬೇಕು. ಹದಿನೈದಿಪ್ಪತ್ತು ಮಂದಿಯಾದರೂ ಬ್ರಾಹ್ಮಣರಿರಬೇಕು. ಲಿಂಗಾಯತ ಮತದವರೂ ಇರಬೇಕು: ಇವರ ಸಂಖ್ಯೆ ಕೊಂಚ ಹೆಚ್ಚಾಗಿದ್ದರೂ ಇರಬಹುದು. ಹೇಗಿದೆ ಈ ಯೋಚನೆ?"

ನನಗೆ ಅತ್ಯಂತ ಸಂತೋಷವಾಯಿತು. "ಅದು ತುಂಬ ದೊಡ್ಡಮನಸ್ಸಿನ ಆಲೋಚನೆ. ಔದಾರ್ಯವನ್ನು ತೋರಿಸುವುದು ಮಾತ್ರವಲ್ಲದೆ ದೂರದೃಷ್ಟಿಯನ್ನೂ ತೋರಿಸುತ್ತದೆ. ತುಂಬ ಒಳ್ಳೆಯದು" ಎಂದೆ. ಅವರು "ಸಂತೋಷ" ಎಂದು ಹೇಳಿ "ಆದರೆ ವಿವರಗಳು (Details) ಇನ್ನೂ ನಿಶ್ಚಯವಾಗಿಲ್ಲ; ಇನ್ನೂ ಒಬ್ಬಿಬ್ಬರನ್ನು ನಾನು ಕೇಳಬೇಕಾಗಿದೆ. ಯೋಚನೆ ಪೂರ್ತಿಯಾದ ಮೇಲೆ ಮತ್ತೆ ಮಾತನಾಡೋಣ" ಎಂದರು.

ಆಮೇಲೆ ಬಹುಶಃ ಒಂದು ತಿಂಗಳು ಕಳೆಯಿತೆಂದು ತೋರುತ್ತದೆ. ಆಗ ಅವರು ನನ್ನನ್ನು ಕಂಡಾಗ "ಆ ಆಲೋಚನೆ ಈಗ ಸದ್ಯ ನಡೆಯುವ ಹಾಗಿಲ್ಲ.

ಅದಕ್ಕೆ ಬಹು ಕಡೆಯಿಂದ ಅಡ್ಡಿ ಬಂದಿದೆ. ಈಗ ಮೊದಲು ಲಿಂಗಾಯತ ಜನಕ್ಕೆ ಮಾತ್ರ ಆ ವಿದ್ಯಾರ್ಥಿನಿಲಯದ ಉಪಯೋಗ. ಆದರೆ ಒಂದು ಸರ್ವ ಜಾತೀಯವಾದ (Cosmopolitan) ವಿದ್ಯಾರ್ಥಿನಿಲಯದ ಯೋಚನೆಯನ್ನು ನಾನು ಬಿಟ್ಟಿಲ್ಲ. ಕಾಲ ಕಳೆದ ಮೇಲೆ ಆ ಯೋಚನೆಯನ್ನು ರೂಪಗೊಳಿಸುವುದು ಸಾಧ್ಯವಾದೀತು" ಎಂದರು.

ಇದಾದ ಒಂದು ವಾರದೊಳಗಾಗಿ ಬುಲ್‌ಟೆಂಪಲ್ ರಸ್ತೆಯಲ್ಲಿರುವ ವೀರಶೈವ ವಿದ್ಯಾರ್ಥಿನಿಲಯ ಪ್ರಾರಂಭವಾಯಿತು. ಮಿರ್ಜಾ ಸಾಹೇಬರು ಆ ದಿನದ ಉತ್ಸವವನ್ನು ನಡಸಿದರು. ಉತ್ತಮವಾದ ಉಪನ್ಯಾಸಗಳಾದುವು. ಅದಾದ ಕೊಂಚ ಕಾಲದೊಳಗಾಗಿ ಪುಟ್ಟಣ್ಣಶೆಟ್ಟರ ಆಯುಸ್ಸು ಮುಗಿಯಿತು. ಆಗ ಅವರ ವಯಸ್ಸು ೮೩.

## ಆಡಳಿತ ವಿಚಕ್ಷಣೆ

ಪುಟ್ಟಣ್ಣಶೆಟ್ಟರವರ ಅಧ್ಯಕ್ಷತೆಯಲ್ಲಿ ವಿಚಕ್ಷಣೆಯೂ ಜನಸಮಾಧಾನವೂ ಎರಡೂ ಮಿಳಿತವಾಗಿದ್ದುವು. ಅವರ ಕಾಲದಲ್ಲಿ ಮ್ಯುನಿಸಿಪಲ್ ಸಭೆಯಲ್ಲಿ ಬಹುಮಂದಿ ಸದಸ್ಯರು ವ್ಯಾಪಾರಸ್ಥರು, ಪಿಂಛನ್‌ದಾರರು—ಇಂಥವರು. ಅವರೆಲ್ಲ ನಿಧಾನಸ್ಥರು. ಆದರೂ ತಕರಾರು ಆಸಾಮಿಗಳೂ ಕೆಲವರಿದ್ದರು.

ಪುಟ್ಟಣ್ಣಶೆಟ್ಟರು ಎಲ್ಲರನ್ನೂ ಒಟ್ಟುಗಟ್ಟಿಕೊಂಡು ಎಲ್ಲರಿಗೂ ಸಮಜಾಯಿಷಿ ಹೇಳಿಕೊಂಡು ಸುಸೂತ್ರವಾಗಿ ಕಾರ್ಯ ನಡಸಿದರು. ಸಭೆಯಲ್ಲಿ ನಡೆದ ಒಂದೆರಡು ಪ್ರಸಂಗಗಳನ್ನು ಹಿಂದೆ ಸ್ಮರಿಸಿದ್ದೇನೆ.

## ಆರ್. ಸುಬ್ಬರಾಯರು

ಪುಟ್ಟಣ್ಣಶೆಟ್ಟರವರು ಎಲ್ಲರಲ್ಲಿಯೂ ತಾಳ್ಮೆಯಿಂದಲೂ ಗೌರವಬುದ್ಧಿಯಿಂದಲೂ ನಡೆಯುತ್ತಿದ್ದದ್ದು ಅವರ ಯಶಸ್ಸಿಗೆ ಒಂದು ಮುಖ್ಯ ಕಾರಣ. ಇನ್ನೊಂದು ಕಾರಣ ಅವರು ಸಹಾಯಕರನ್ನು ಆರಿಸಿಕೊಂಡದ್ದರಲ್ಲಿ ತೋರಿಸಿದ ವಿವೇಕ ಜಾಗರೂಕತೆಗಳು. ಇಂಥ ಸಹಾಯಕರಲ್ಲಿ ಬಹು ಮುಖ್ಯರಾದವರು ಡಾ. ಆರ್. ಸುಬ್ಬರಾಯರು. ಸುಬ್ಬರಾಯರು ಎಂ.ಬಿ.ಬಿ.ಎಸ್. ವೈದ್ಯ ಪದವಿಯನ್ನು ಸಂಪಾದಿಸಿ ಹೆಲ್ತ್ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದರು. ಅವರ ತಮ್ಮಂದಿರೇ ಮೈಸೂರು ಸರಕಾರದ ಚೀಫ್ ಸೆಕ್ರೆಟರಿಯಾಗಿದ್ದ ಆರ್. ರಂಗರಾಯರು. ಪುಟ್ಟಣ್ಣಶೆಟ್ಟರು ಡಾ. ಆರ್. ಸುಬ್ಬರಾಯರನ್ನು ಮೊದಲು

ಹೆಲ್ತ್ ಆಫೀಸರ್ ಹುದ್ದೆಗೆ ತಂದರು. ಸುಬ್ಬರಾಯರು ಮೇಧಾವಿಗಳು. ಬರವಣಿಗೆಯಲ್ಲಿ ನಿಪುಣರು. ಪುರನಿರ್ಮಲತೆಯ ವಿಷಯದಲ್ಲಿ ನೈಜವಾದ ಶ್ರದ್ಧೆಯುಳ್ಳವರು ಮತ್ತು ಸ್ನೇಹತತ್ಪರರು. ಅವರು ಖುದ್ದಾಗಿ ಪರೀಕ್ಷಿಸದಿದ್ದ ಗಲ್ಲಿಯಿಲ್ಲ.

ಪ್ರತಿದಿನವೂ ಬೆಳಗ್ಗೆ ಏಳು ಘಂಟೆಗೆ ಮುಂಚೆ ತಮ್ಮ ಟೂ ಸೀಟರ್ ಕಾರಿನಲ್ಲಿ ಹೊರಡುವರು. ಎಷ್ಟೋ ಸಾರಿ ನಾನು ಅವರ ಪಕ್ಕದಲ್ಲಿರುತ್ತಿದ್ದೆ. ಅವರೇ ಡ್ರೈವ್ ಮಾಡುವರು. ಬಳೇಪೇಟೆ ಅರಳೇಪೇಟೆಯ ಸಂದಿಗಳು, ಚಿಕ್ಕಪೇಟೆ ದೊಡ್ಡಪೇಟೆಯ ಸಂದಿಗೊಂದಿಗಳು,—ಇಂಥ ಎಲ್ಲ ಕಡೆಯೂ ಹೋಗಿ ಹೇಸಿಗೆಯ ಮುಕ್ಕರಿಗಳು ಸಾಗಿವೆಯೆ ಇಲ್ಲವೆ ಎಂದು ಅಜಮಾಯಿಷಿ ಮಾಡುವರು. ಬೆಳಗ್ಗೆ ಏಳೂವರೆ ಎಂಟರ ಒಳಗಾಗಿ ಸಿಟಿಯ ಎಲ್ಲ ಭಾಗಗಳಲ್ಲೂ ಆ ಕೆಲಸ ಮುಗಿದಿರಬೇಕೆಂದು ಅವರ ಕಟ್ಟುನಿಟ್ಟಾದ ಏರ್ಪಾಟು. ಈ ತನಿಖೆಯ ವಿಷಯದಲ್ಲಿ ಅವರು ಒಂದು ದಿನವೂ ಪಾಲುಮಾರಿದವರಲ್ಲ. ಇದು ಅವರ ಸ್ವಭಾವಕ್ಕೆ ಒಂದು ದೃಷ್ಟಾಂತ.

## ರೋಗಿಗಳಿಗಾಗಿ ಉತ್ಸವ ಸಮಾರಂಭ

ಸರಕಾರಿ ಕೆಲಸಕ್ಕೆ ಸೇರುವುದಕ್ಕೆ ಮುಂಚೆ ಅವರು ವೈದ್ಯವೃತ್ತಿಯನ್ನು ಅವಲಂಬಿಸಿದ್ದರು—ಬಳ್ಳಾರಿಯಲ್ಲಿ, ಜನಪ್ರಿಯರಾಗಿದ್ದರು; ಒಳ್ಳೆಯ ಸಂಪಾದನೆಯಿತ್ತು. ಅವರ ತಂದೆತಾಯಿಗಳ ನಿರ್ಬಂಧದ ಕಾರಣದಿಂದ ಅವರು ಸರಕಾರಿ ಉದ್ಯೋಗಕ್ಕೆ ಸೇರಬೇಕಾಯಿತು.

ಬೆಂಗಳೂರಿಗೆ ಅವರು ಹೆಲ್ತ್ ಆಫೀಸರಾಗಿ ಬಂದದ್ದು ಜನಕ್ಕೆ ಅನುಕೂಲವಾಯಿತು. ಊರಿನ ನೈರ್ಮಲ್ಯ ಉತ್ತಮಪಟ್ಟದ್ದಲ್ಲದೆ ಅನೇಕ ಸಮಾಜ ಸೇವಾಕಾರ್ಯಗಳು ನಡೆದವು. ಮಾಗಡಿ ರಸ್ತೆಯಲ್ಲಿರುವ ಸಾಂಕ್ರಾಮಿಕ ವ್ಯಾಧಿಗಳ ಆಸ್ಪತ್ರೆ ಮತ್ತು ಕುಷ್ಠರ ಆಸ್ಪತ್ರೆಗಳಲ್ಲಿ ಯುಗಾದಿ ದೀವಳಿಗೆಗಳ ಉತ್ಸವಕಾಲದಲ್ಲಿ, ಸಿಹಿ ತಿಂಡಿ ಹಣ್ಣು ಹೂವು, ಗಂಡಸರಿಗೂ ಹೆಂಗಸರಿಗೂ ಬಟ್ಟೆ ಮೊದಲಾದವನ್ನು ಧರ್ಮಾರ್ಥವಾಗಿ ಹಂಚಿ ಕೊಂಚ ಸಂಗೀತವಿಟ್ಟು, ಹಬ್ಬದ ಅನುಭವವನ್ನು ಆ ರೋಗಿಗಳಿಗೆ ಕೊಂಚವಾದರೂ ಮಾಡಿಕೊಡಬೇಕೆಂಬ ಯೋಚನೆ ಡಾ. ಸುಬ್ಬರಾಯರದು. ಆ ಯೋಚನೆಗೆ ಪುಟ್ಟಣ್ಣಶೆಟ್ಟರ ಪ್ರೋತ್ಸಾಹವೂ ಬೆಂಬಲವೂ ಸಂಪೂರ್ಣವಾಗಿತ್ತು. ಸುಬ್ಬರಾಯರಿಗೆ ಪೇಟೆಯಲ್ಲಿ ತುಂಬ ಪ್ರಭಾವವಿದ್ದ ಕಾರಣ ಆ ಧರ್ಮಕಾರ್ಯವು ಸಾಧ್ಯ

ವಾಯಿತು. ಹಣವನ್ನೂ ತಿಂಡಿಯನ್ನೂ ಬಟ್ಟೆಯನ್ನೂ ಎಷ್ಟೋ ಜನ ದಾನವಾಗಿ ಕೊಡುತ್ತಿದ್ದರು. ಈ ಧರ್ಮದ ಏರ್ಪಾಟನ್ನು ಆಮೇಲೆ ಎಂ. ಜಿ. ವರದಾಚಾರ್, ಮೋಕ್ಷಗುಂಡಂ ಕೃಷ್ಣಮೂರ್ತಿ ಮೊದಲಾದ ಮಿತ್ರಗೋಷ್ಠಿ ಸುಬ್ಬರಾಯರ ಕೈಯಿಂದ ವಹಿಸಿಕೊಂಡಿತು. ಅನಂತರ ಗೋಖಲೆ ಎಜುಕೇಷನ್ ಲೀಗ್ ಎಂಬ ಸಂಸ್ಥೆ ಅದನ್ನು ಕೊಂಚ ಕಾಲ ನಡಸಿತು. ಡಾ. ಸುಬ್ಬರಾಯರ ಹೃದಯ ಎಂಥಾದ್ದೆಂಬುದನ್ನು ಅವರು ಮಾಡಿದ ಯೋಚನೆ ತೋರಿಸುತ್ತದೆ.

## ಸಹಕಾರ ಸಂಘ

ಡಾ. ಸುಬ್ಬರಾಯರು ಮ್ಯುನಿಸಿಪಾಲಿಟಿಯ ಕೆಳದರ್ಜೆಯ ನೌಕರರ ಪ್ರಯೋಜನಕ್ಕಾಗಿ ಒಂದು ಕೋ-ಆಪರೇಟಿವ್ ಸಂಘವನ್ನೂ ಅದರ ಆಶ್ರಯದಲ್ಲಿ ವಿದ್ಯೆ ವಿನೋದಗಳ ಏರ್ಪಾಟನ್ನೂ ಸ್ಥಾಪನೆಮಾಡಿಸಿದರು. ಕೋಟೆಯಲ್ಲಿ ಈಗ ಡೆಂಟಲ್ ಕಾಲೇಜ್ ಇರುವ ಜಾಗದ ಸುಮಾರಿನಲ್ಲಿ, ಹಳೆಯ ಕೋಟೆ ಗೋಡೆಯ ಪಕ್ಕದಲ್ಲಿ ಈ ಕೆಲಸ ಪ್ರಾರಂಭವಾದದ್ದು. ಆಗ ಅಲ್ಲಿ ಒಂದು ಕಾರಂಜಿ (ವಾಟರ್ ಫೌಂಟನ್) ಇತ್ತು. ಅದರ ಮಧ್ಯದಲ್ಲಿ ಸುಂದರವಾದ ಪಾರ್ವತೀಪರಮೇಶ್ವರ ವಿಗ್ರಹವೊಂದನ್ನು ಇರಿಸಿದ್ದರು. ನೀರಿನ ಬುಗ್ಗೆ ಶಿವಮಸ್ತಕದಿಂದ ಮೇಲಕ್ಕೆದ್ದು ಅಭಿಷೇಕಮಾಡುತ್ತಿತ್ತು. ಅಲ್ಲಿ ವರ್ಷಕ್ಕೆ ಎರಡು ಮೂರು ಸಲ ಒಳ್ಳೆಯ ಓಲಗ, ಗ್ರಾಮಫೋನ್ ಸಂಗೀತ, ಕೊಂಚ ತಿಂಡಿ, ಬಡಬಗ್ಗರಿಗೆ ದಾನ—ಇದೆಲ್ಲ ನಡೆಯುತ್ತಿತ್ತು. ನಾನು ಅದನ್ನು ಮೂರು ನಾಲ್ಕು ಸಲ ಕಂಡಿದ್ದೇನೆ. ಝಾಡಮಾಲಿಗಳೂ ಆ ಸಮಾರಂಭದಲ್ಲಿ ಸೇರಿ ಸಂತೋಷಪಡುತ್ತಿದ್ದರು.

ಪುಟ್ಟಣ್ಣಶೆಟ್ಟರವರು ಈ ಏರ್ಪಾಟಿಗೂ ಪ್ರೋತ್ಸಾಹ ಕೊಡುತ್ತಿದ್ದರು.

## ಇನ್‌ಫ್ಲುಯೆಂಜಾ

ಡಾ. ಸುಬ್ಬರಾಯರ ಪ್ರಜೋಪಕಾರಗಳಲ್ಲಿ ಬಹು ದೊಡ್ಡದೆಂದರೆ ೧೯೧೭–೧೮ರಲ್ಲಿ ಇನ್‌ಫ್ಲುಯೆಂಜಾ ವ್ಯಾಧಿ ಹರಡಿದ್ದಾಗ ಅವರು ಮಾಡಿಸಿದ್ದ ರಿಲೀಫ್ ಏರ್ಪಾಟುಗಳು. ಈ ಏರ್ಪಾಟುಗಳಲ್ಲಿ ಶ್ರೀಮಾನ್. ಪಿ. ಕೋದಂಡರಾಯರೂ ಬಿ. ಕೆ. ರಾಮಪ್ರಸಾದ್ ಅವರೂ ಕೆ. ಎಸ್. ಕೃಷ್ಣಯ್ಯರ್ ಅವರೂ ನನ್ನ ಇತರ ಸ್ನೇಹಿತರೂ ನಾನೂ ಬಹುಮಂದಿ ಸೇರಿದ್ದೆವು: ನಾವು ಹದಿನೈದಿಪ್ಪತ್ತು

ತಂಡಗಳಾಗಿ ಒಂದೊಂದು ತಂಡಗಳಲ್ಲಿ ಇಬ್ಬರು ಅಥವಾ ಮೂವರು ಕೈಯಲ್ಲಿ ಬಿಸಿಬಿಸಿ ಗಂಜಿಯನ್ನೂ, ಔಷಧಿಯನ್ನೂ ಅದರ ಜೊತೆಗೆ 'ಅಜಮಲ್' ಎಂಬ ವಾಮದ ದ್ರಾವಕವನ್ನೂ ತೆಗೆದುಕೊಂಡು ಹೋಗಿ ರೋಗಿಗಳ ಮನೆಯಲ್ಲಿ ಅದನ್ನು ಹಂಚಿ, ಅವರಿಗೆ ಏನು ಸಹಾಯಬೇಕೆಂದು ವಿಚಾರಿಸಿ ಆ ಸಹಾಯಕ್ಕಾಗಿ ಏರ್ಪಾಟು ಮಾಡತಕ್ಕದ್ದು.

ಹೀಗೆ ಕೆಲವು ತಿಂಗಳು ಮಾಡಿದೆವು. ನೂರಾರು ಗಲ್ಲಿಗಳಲ್ಲಿ ನೂರಾರು ಮನೆಗಳನ್ನು ನೋಡಿದೆವು. ಕೆಲವು ಕಡೆ ಬಹು ಘೋರವಾಗಿತ್ತು. ಅರಳೇಪೇಟೆಗೂ ಅಕ್ಕಿಪೇಟೆಗೂ ಮಧ್ಯೆ ಯಾವುದೋ ಸಂದಿಯಲ್ಲಿ ಒಂದು ಮನೆ. ತಲೆಬಾಗಿಲ ಹತ್ತಿರ ಎರಡು ಮೂರು ವರ್ಷದ ಒಂದು ಮಗು ಏನೋ ಹಾಡಿಕೊಂಡು ಆಟವಾಡುತ್ತಿತ್ತು. ನಾವು "ಯಾರಾದರೂ ಕಾಯಿಲೆ ಇದ್ದಾರೆಯೆ?" ಎಂದು ಕೇಳಿದೆವು. ಮಗುವಿಗೆ ಉತ್ತರ ಹೇಳಲು ಬರಲಿಲ್ಲ. ನಮ್ಮ ಪ್ರಶ್ನೆ ಅರ್ಥವಾಯಿತೋ ಇಲ್ಲವೋ. ಒಳಗೆ ಹೋದೆವು. ಹಾಸಿಗೆಯ ಮೇಲೆ ಒಬ್ಬಾತ ನರಳುತ್ತಿದ್ದ. ಕೈಕಾಲು ಬಿಗಿದುಕೊಂಡಿತ್ತು. ಆತ ಬಹುಶಃ ಆ ಮಗುವಿನ ತಂದೆ. ಆತನನ್ನು ಮಾತನಾಡಿಸಿದಾಗ "ನನ್ನನ್ನೇನು ನೋಡುತ್ತೀರಿ? ನನ್ನ ಕಥೆ ಮುಗಿಯಿತು. ಆ ಕಡೆ ನನ್ನ ಹೆಂಡತಿ ಮಲಗಿದ್ದಾಳೆ. ಮಗುವಿಗೆ ಈ ತಾಯಿಯನ್ನಾದರೂ ಉಳಿಸಿಕೊಡಿ" ಎಂದ. ನಾವು ಆಕೆಯನ್ನು ನೋಡಿದೆವು. ಆಕೆ ಸತ್ತು ಹೆಣವಾಗಿದ್ದಳು. ಮಾರನೆಯ ದಿವಸ ನಮಗೆ ತಿಳಿಯಿತು. ಆ ಮನುಷ್ಯನೂ ತೀರಿಕೊಂಡನೆಂದು.

ಇಂಥ ದೃಶ್ಯಗಳನ್ನು ಸುಬ್ಬರಾಯರು ನೂರಾರು ನೋಡಿದ್ದರು. ಅಂಥ ಮಹಾನುಭಾವರು ರಿಲೀಫ್ ಯತ್ನ ಮಾಡಿದ್ದರಿಂದ ಎರಡು ತಿಂಗಳೊಳಗಾಗಿ ಉಪದ್ರವ ಹತೋಟಿಗೆ ಬಂದಿತು. ಇನ್ನೆರಡು ವಾರದೊಳಗಾಗಿ ಊರು ತನ್ನ ಹಿಂದಿನ ಸಮಾಧಾನಕ್ಕೆ ಬಂದಿತು.

## ನಿರೋಧನೀಯ ವ್ಯಾಧಿಗಳು

ಡಾ. ಸುಬ್ಬರಾಯರು ಕನ್ನಡ ಸಾಹಿತ್ಯದ ವಿಷಯದಲ್ಲಿ ತುಂಬ ಉತ್ಸಾಹಿಗಳು. ಅವರು 'ಪಂಪರಾಮಾಯಣ'ದ ಕೆಲವು ಭಾಗಗಳನ್ನು ನನ್ನ ಜೊತೆಯಲ್ಲಿ ಓದಿ ಆನಂದಪಟ್ಟದ್ದು ನನಗೆ ಜ್ಞಾಪಕದಲ್ಲಿದೆ. ಅವರು ಒಂದು ಅಮೂಲ್ಯವಾದ ಗ್ರಂಥವನ್ನು ಬರೆದರು : "ನಿರೋಧನೀಯ ವ್ಯಾಧಿಗಳು" (Preventable diseases). ಇದಕ್ಕಾಗಿ ಬಹು ಶ್ರಮಪಟ್ಟರು. ಚಿತ್ರಗಳನ್ನು ಬರೆಯಿಸಿ

ಅವನ್ನು ವರ್ಣರಂಜಿತವಾಗಿ ಮುದ್ರಣ ಮಾಡಿಸಲು ಬಹು ಪ್ರಯಾಸ ಪಟ್ಟರು. ಗ್ರಂಥವು ಸರಕಾರಿ ಮುದ್ರಣಾಲಯದಲ್ಲಿ ಮುದ್ರಿತವಾಯಿತು. ಚಿತ್ರಗಳು ಜರ್ಮನಿಯಿಂದ ಬಂದವು. ಆ ಪುಸ್ತಕಕ್ಕಾಗಿ ನಾನೂ ಏನೋ ಕೆಲಸಮಾಡಿದೆನೆಂದು ಜ್ಞಾಪಕ. ಅಂಥ ಪುಸ್ತಕ ಜನದಲ್ಲಿ ಪ್ರಚಾರಕ್ಕೆ ಬರ ಬೇಕಾದದ್ದು. ಅದು ಹಾಗೆ ಪ್ರಚಾರಕ್ಕೆ ಬಾರದೆ ಸರಕಾರದ ಪ್ರಕಟನ ಶಾಖೆಯ ಯಾವುದೋ ಕೋಣೆಯಲ್ಲಿ ಬಹುಕಾಲ ಕೇಳುವವರಿಲ್ಲದೆ ಬಿದ್ದಿತ್ತು. ಅದು ಈಗ ದೊರೆಯಬಹುದೋ ಇಲ್ಲವೋ ನಾನು ಕಾಣೆ. ಅದರ ಜ್ಞಾಪಕ ಮಾತ್ರ ನನಗೆ ಒಂದು ದೊಡ್ಡ ವಸ್ತುವಾಗಿದೆ.

ಈ ಎಲ್ಲ ಏರ್ಪಾಟುಗಳಲ್ಲಿಯೂ ಪುಟ್ಟಣ್ಣಶೆಟ್ಟರವರ ಜನಪ್ರೀತಿ ಮಾತ್ರ ವಲ್ಲದೆ ಅವರ ಕಾರ್ಯಶ್ರದ್ಧೆ, ಮೇಲ್ವಿಚಾರಣೆಯ ಜಾಗರೂಕತೆ ಮತ್ತು ಪ್ರೋತ್ಸಾಹಶೀಲತೆ ಎದ್ದುಕಾಣುತ್ತಿದ್ದವು.

## ಸಂಯಮ

ಪುಟ್ಟಣ್ಣಶೆಟ್ಟರವರ ಕಡೆಕಡೆಯ ದಿನಗಳು ಅಷ್ಟೇನೂ ಸುಖಮಯವಾಗಿರ ಲಿಲ್ಲ. ಗೃಹಕೃತ್ಯದಲ್ಲಿ ಏನೇನೋ ಚಿಂತೆಗಳೂ ತೊಡಕುಗಳೂ ಬಂದವು. ಒಂದು ದಿನ ನನ್ನನ್ನು ಬರಹೇಳಿದರು. ಅಂದು ಅವರ ಮನಸ್ಸು ಏನೋ ತುಂಬ ನೊಂದಿತ್ತು. ಮನೆಯ ಒಳಗಿನ ಒಳಕೋಣೆಗೆ ನನ್ನನ್ನು ಕರೆದು ಕೊಂಡು ಹೋದರು. ನಾನು "ಮೈಯಲ್ಲಿ ಸ್ವಸ್ಥವಿಲ್ಲವೆ ?" ಎಂದು ಕೇಳಿದೆ. ಅವರು "ಈ ವಯಸ್ಸಿಗೆ ಮೈ ಇನ್ನು ಹೇಗಿರುತ್ತದೆ ? ಮೈಗಿಂತ ಮನಸ್ಸೆ ಮುಖ್ಯವಾದದ್ದು. ನೋಡಿ, ಮುಖದ ಮೇಲ್ಕೆ, ಹಿಂದೆ ತುಂಬಿಕೊಂಡಿದ್ದದ್ದು ಈಗ ಗುಳಿ ಗುಳಿಯಾಗಿದೆ. ಕಣ್ಣು ಕೆಳಗಿನ ಎಲುಬುಗಳು ಮುಂದಕ್ಕೆ ಚಾಚಿ ಕೊಂಡಿವೆ. ಮನಸ್ಸಿನ ವಿಚಾರಗಳೂ ಹೀಗೆಯೇ ತಾನೆ ? ವಯಸ್ಸಾದಂತೆಲ್ಲ ದೇಹದ ವಿಕಾರಗಳು ಮೇಲಕ್ಕೆ ಬರುತ್ತವೆ. ಮನಸ್ಸಿನ ವಿಕಾರಗಳೂ ಹಾಗೆಯೇ ಅಲ್ಲವೆ ? ನಾನು ಕೋಪತಾಪಗಳನ್ನು ಮೊದಮೊದಲು ಅಣಗಿಸಿಟ್ಟಿದ್ದೆ. ಈಗ ಹಾಗೆ ಅಣಗಿಸಲಾರೆ. ಕೋಪ ಈಗ ಬೇಗ ಹೊರಕ್ಕೆ ಬರುತ್ತದೆ....ನೋಡಿ, ಶಿವ ನನಗೆ ಈ ವಯಸ್ಸಿನಲ್ಲಿ ಏನೇನಿಟ್ಟಿದ್ದಾನೆ ! ಇದನ್ನೆಲ್ಲ ಸಹಿಸುವ ಶಕ್ತಿ ಈಗ ಇಲ್ಲವಲ್ಲ ? ಏನೇನು ಶಿವನ ಪರೀಕ್ಷೆ !" ಎಂದರು.

ಮನಸ್ಸಿನ ಯಾವುದೋ ಒಂದು ಉಮ್ಮಳವನ್ನು ಹೊರಗೆ ಹಾಕಿ ಕಳೆದು ಕೊಳ್ಳುವುದಕ್ಕಾಗಿ ಅವರು ಈ ಮಾತನ್ನಾಡಿರಬೇಕು. ಒಂದು ಕ್ಷಣದೊಳ

ಗಾಗಿ ಅವರು ತಾಳ್ಮೆ ತಂದುಕೊಂಡರು. ಮತ್ತೆ ನಗುಮುಖದಿಂದ ಮಾತ ನಾಡಿದರು.

ಪುಟ್ಟಣ್ಣಶೆಟ್ಟರು ತ್ರಿಕರಣಪೂರ್ವಕವಾಗಿ ಪರಮೇಶ್ವರನ ಭಕ್ತರು. ಅವರು ಒಂದು ಬೆಳ್ಳಿಯ ಪಾರ್ವತೀಪರಮೇಶ್ವರ ವಿಗ್ರಹವನ್ನು ಮಾಡಿಸಿಟ್ಟುಕೊಂಡು ಪ್ರತಿದಿನವೂ ಪೂಜೆಮಾಡುತ್ತಿದ್ದರು. ನಡವಳಿಕೆಯಲ್ಲಿ ಲೇಶಮಾತ್ರವೂ ಕಳಂಕವಿಲ್ಲದವರು. ಕೈ, ಬಾಯಿ, ಮೈ ಎಲ್ಲ ಕೊಳಕಿಲ್ಲದ್ದು. ಅವರ ಮನಸ್ಸು ಯಾವಾಗಲೂ ದೊಡ್ಡ ದೊಡ್ಡ ವಿಚಾರಗಳನ್ನು ಹಿಡಿದು ದೊಡ್ಡ ದಾರಿಗಳಲ್ಲಿ ಹೋಗುತ್ತಿತ್ತು.

ಸಾರ್ವಜನಿಕದಲ್ಲಿ ಅವರು ಅನುಕರಣೀಯರು. ಹಿಂದೂಗಳೂ ಮುಸಲ್ಮಾನರೂ, ಸ್ವದೇಶೀಯರೂ ವಿದೇಶೀಯರೂ ಬೆಳಗ್ಗೆ ಏಳರಿಂದ ರಾತ್ರಿ ಒಂಭತ್ತೂವರೆಯವರೆಗೂ ಅವರ ಬಳಿಗೆ ತಂಡತಂಡವಾಗಿ ಬರುತ್ತಿದ್ದರು. ಬೇಡಿಕೆ ಬೇಡುವುದಕ್ಕಾಗಿ, ಸಲಹೆ ಪಡೆಯುವುದಕ್ಕಾಗಿ, ಹಿಗ್ಗು ಹೇಳಿಕೊಳ್ಳುವುದಕ್ಕಾಗಿ, ಗೌರವ ತೋರಿಸುವುದಕ್ಕಾಗಿ, ಹೀಗೆ ಯಾವಯಾವುದೋ ಕಾರಣದಿಂದ ಅವರಿಗೆ ಬಿಡುವು ಕೊಡದೆ ಜನ ಬರುತ್ತಿದ್ದರು. ಅವರ ಬಳಿಗೆ ಜನ ಹೋದಂತೆ ಇನ್ನಾರ ಬಳಿಗೂ—ಮೈಸೂರಿನ ವೆಂಕಟಕೃಷ್ಣಯ್ಯನವರ ವಿನಾ—ಜನ ಹೋದದ್ದನ್ನು ನಾನು ನೋಡಿಲ್ಲ. ವಿದ್ವಾಂಸರು, ವಿರಕ್ತರು, ವರ್ತಕರು, ಹುದ್ದೆದಾರರು, ಯಾಚಕರು, ಸಾಮಾನ್ಯರು—ಎಲ್ಲರೂ ಅವರನ್ನು ಕಂಡು ಸಂತೋಷಪಟ್ಟು ಬರುತ್ತಿದ್ದರು.

ಸಾರ್ವಜನಿಕ ಜೀವನದಲ್ಲಿ ಪುಟ್ಟಣ್ಣಶೆಟ್ಟರವರು ಅನುಸರಿಸಿದ್ದ ನೀತಿಯನ್ನು ಜನದ ಜ್ಞಾಪಕಕ್ಕೆ ತರುವುದು ಈಗ ಅವಶ್ಯವಾಗಿದೆಯೆಂದು ತೋರುತ್ತದೆ.

ನೀಚಾಃ ಕಲಹಮಿಚ್ಛನ್ತಿ
ಸಂಧಿಮಿಚ್ಛನ್ತಿ ಸಾಧವಃ ॥

ಪುಟ್ಟಣ್ಣಶೆಟ್ಟರವರು ಜನರನ್ನು ಒಟ್ಟುಗೂಡಿಸುವುದರಲ್ಲಿ ತಾತ್ಪರ್ಯವುಳ್ಳವರು; ಜನವನ್ನು ಒಡೆದು ಸಂತೋಷಪಡುವವರಲ್ಲ. ಅಂಥ ಸಾರ್ವಜನಿಕರನ್ನು ಈಗ ನಾನು ಒಬ್ಬರನ್ನೂ ಕಾಣೆ.

## ಸಾರ್ವಜನಿಕ ಸಾಧನೆ

ಪುಟ್ಟಣ್ಣಶೆಟ್ಟರವರು ಎಷ್ಟು ಸಾರ್ವಜನಿಕ ಸಂಸ್ಥೆಗಳಲ್ಲಿ ಆಸಕ್ತಿ ಇಟ್ಟು

ಕೊಂಡಿದ್ದರೆಂಬುದನ್ನು ಸಂಪೂರ್ಣವಾಗಿ ಪಟ್ಟಿ ಮಾಡುವುದು ಅಸಾಧ್ಯ. ಬಹುಶಃ ಅವರ ಸಂಬಂಧ ಇಲ್ಲದಿದ್ದ ಸಂಸ್ಥೆ ಯಾವುದೂ ಇಲ್ಲವೆನಿಸುತ್ತದೆ. ನನಗೆ ಜ್ಞಾಪಕಕ್ಕೆ ಬಂದ ಕೆಲವು ಹೆಸರುಗಳನ್ನು ಹೇಳುತ್ತೇನೆ :

೧. ಮೈಸೂರು ಬ್ಯಾಂಕು. ಬ್ಯಾಂಕಿಗೆ ಪುಟ್ಟಣ್ಣಶೆಟ್ಟರವರೇ ಮೂಲಕರ್ತ ರೆಂದು ಹೇಳಬಹುದು. ಅವರ ಪ್ರಭಾವದಿಂದಲೇ ಜನಕ್ಕೆ ನಂಬಿಕೆ ಹುಟ್ಟಿ ಆ ಸಂಸ್ಥೆ ಪ್ರಾರಂಭವಾದದ್ದು.

೨. ಮೈಸೂರು ಕೃಷ್ಣರಾಜೇಂದ್ರ ಮಿಲ್ಸ್. ಈ ವಿಷಯದಲ್ಲಿ ಅವರು ತೋರಿದ ಉತ್ಸಾಹವೂ ಪಟ್ಟ ಶ್ರಮವೂ ಅಷ್ಟಿಷ್ಟಲ್ಲ.

೩. ಕನ್ನಡ ಸಾಹಿತ್ಯ ಪರಿಷತ್ತು. ಚಿಕ್ಕಮಗಳೂರಿನಲ್ಲಿ ನಡೆದ ಸಮ್ಮೇಳನಕ್ಕೆ ಪುಟ್ಟಣ್ಣಶೆಟ್ಟರವರು ಅಧ್ಯಕ್ಷರಾಗಿದ್ದರು. ಮತ್ತು ಪರಿಷನ್ಮಂದಿರದಲ್ಲಿ ಅನೇಕ ಸಭೆಗಳಿಗೆ ದಯಮಾಡಿಸಿದ್ದರು.

೪. ವಿದ್ಯಾಭ್ಯಾಸ ಕ್ರಮವನ್ನು ಸುಧಾರಣೆ ಮಾಡುವ ಅನೇಕ ಸಾರ್ವ ಜನಿಕ ಪ್ರಯತ್ನಗಳಿಗೆ ಅಧ್ಯಕ್ಷರಾಗಿದ್ದರು.

೫. ಚಿಕ್ಕಬಳ್ಳಾಪುರ ಲೈಟ್ ರೈಲ್ವೆ ಕಂಪೆನಿಯ ಅಧ್ಯಕ್ಷರು.

೬. ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕಿನ ಅಧ್ಯಕ್ಷರು.

೭. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಅರ್ಧ ಶತಮಾನೋತ್ಸವದ ಜೂಬಿಲಿ ಸಭೆಗೆ ಅಧ್ಯಕ್ಷರಾಗಿದ್ದರು. ಆಗ ಸಭಾಸದರಾಗಿದ್ದವರಲ್ಲಿ ಮಿರ್ಜಾ ಸಾಹೇಬರು ಮುಖ್ಯರು.

೮. ತೋಟದಪ್ಪನವರ ಧರ್ಮನಿಧಿ, ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್ ಧರ್ಮನಿಧಿ ಮುಂತಾದ ಎಷ್ಟೋ ಧರ್ಮಸಂಸ್ಥೆಗಳಿಗೆ ನ್ಯಾಸ ಪಾಲಕ (ಟ್ರಸ್ಟಿ)ರಾಗಿದ್ದರು.

೯. ಬೆಂಗಳೂರಿನಲ್ಲಿ ನಡೆದ ವೀರಶೈವ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿದ್ದರು.

೧೦. ಮೆಡಿಕಲ್ ಕಾಲೇಜನ್ನು ಬೆಂಗಳೂರಿನಿಂದ ಮೈಸೂರಿಗೆ ವರ್ಗಾಯಿಸಬಾರದೆಂದು ಬೇಡಿಕೊಳ್ಳಲು ಏರ್ಪಟ್ಟಿದ್ದ ನಿಯೋಗಗೋಷ್ಠಿಗೆ ಅಧ್ಯಕ್ಷರಾಗಿದ್ದರು.

೧೧. ಬೆಂಗಳೂರು ಕಂಟೋನ್ಮೆಂಟಿನ ಹೆಚ್ಚು ವರಮಾನವು ಮೈಸೂರಿಗೆ ಸಲ್ಲತಕ್ಕದ್ದೆಂದೂ ಬ್ರಿಟಿಷ್ ಸರ್ಕಾರಕ್ಕೆ ಕಂಟೋನ್ಮೆಂಟಿನ ಮೇಲೆ ಸ್ವಾಮ್ಯ

ವಿಲ್ಲವೆಂದೂ ಮೈಸೂರಿನ ಪ್ರೊಗದಿಯನ್ನು ಪೂರ್ತಿ ವಜಾಮಾಡಬೇಕೆಂದೂ ಹೊರಟ ಪ್ರಜಾಸಮಾರಂಭಗಳಿಗೆ ಪುಟ್ಟಣ್ಣಶೆಟ್ಟರು ಮುಂದಾಳಾಗಿದ್ದರು.

೧೨. ಅಮೆಚ್ಯೂರ್ ನಾಟಕಸಂಸ್ಥೆಗೆ ಪ್ರೋತ್ಸಾಹಕರ್ತರಾಗಿದ್ದರು. ಆ ಸಂಸ್ಥೆ ಷೇಕ್ಸ್ಪಿಯರಿನ "ರೋಮಿಯೋ ಅಂಡ್ ಜುಲಿಯೆಟ್" ನಾಟಕ ವಾಡಿದಾಗ ಅದರಲ್ಲಿ ಬಳ್ಳಾರಿ ರಾಘವಾಚಾರ್ಯರೂ ಬೆಂಗಳೂರಿನ ವೆಂಕಟಾಚಾರ್ಯರೂ ಮೆಡಿಕಲ್ ಇಲಾಖೆಯ ಶಿವರಾಯರೂ ಬಹುಶಃ ಕೆ. ಗುರುದತ್ ಅವರೂ ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ಪುಟ್ಟಣ್ಣ ಶೆಟ್ಟರು ಮಾಡಿದ ಭಾಷಣ ಸೊಗಸಾಗಿತ್ತು.

## ಸಮಾಧಾನ ಪ್ರವೃತ್ತಿ

ಹೀಗೆ ಇನ್ನೂ ಎಷ್ಟೋ ಸಮಿತಿ ಸಮಾರಂಭಗಳಿಗೆ ಅವರು ಅಧ್ಯಕ್ಷರಾಗಿ ಬಲ ಕೊಟ್ಟರು. ಸಾಮಾನ್ಯವಾಗಿ ಬೆಂಗಳೂರಿನಲ್ಲಿ ಯಾವ ಸಾರ್ವಜನಿಕ ಸಮಾರಂಭವೂ ಪುಟ್ಟಣ್ಣ ಶೆಟ್ಟರ ಅನುಮೋದನೆ ಬೆಂಬಲಗಳಿಲ್ಲದೆ ನಡೆದದ್ದಲ್ಲ. ಅದರಲ್ಲಿಯೂ ಕೋಮುವಾರು ತಕರಾರುಗಳಾಗಲಿ ಬೇರೆ ವೈಷಮ್ಯವಾಗಲಿ ಮೇಲಕ್ಕೇಳಬಹುದೆಂಬ ಭೀತಿ ತೋರಿದಾಗ ಅಧ್ಯಕ್ಷ ಸ್ಥಾನಕ್ಕೆ ಪುಟ್ಟಣ್ಣ ಶೆಟ್ಟರನ್ನು ಆಹ್ವಾನಿಸಲು ಎಲ್ಲ ಪಕ್ಷದವರದೂ ಒಪ್ಪಿಗೆ. ಅವರ ನಿಷ್ಪಕ್ಷಪಾತ ದಲ್ಲಿಯೂ ಸಮಾಧಾನಪ್ರವೃತ್ತಿಯಲ್ಲಿಯೂ ಸರ್ವಜನಹಿತದೃಷ್ಟಿಯಲ್ಲಿಯೂ ಎಲ್ಲ ವರ್ಗಗಳವರಿಗೂ ನಂಬಿಕೆ ಅಷ್ಟು ಆಳವಾಗಿ ದೃಢವಾಗಿತ್ತು.

"ನಮ್ಮ ದೂರುಗಳನ್ನೂ ಕಷ್ಟಗಳನ್ನೂ ಅವರಲ್ಲಿ ಹೇಳೋಣ. ಅವರು ಹಿತ ಚಿಂತನೆ ಹೇಳಿದಂತೆ ನಡೆದುಕೊಳ್ಳೋಣ" ಎಂಬ ವಿಶ್ವಾಸ ಸರ್ವಜನವರ್ಗ ದಲ್ಲಿಯೂ ಸಾಮಾನ್ಯವಾಗಿತ್ತು. ಇಂಥ ನಂಬಿಕೆಯನ್ನು ಸಂಪಾದಿಸಿಕೊಂಡಿ ದ್ದದ್ದು ಒಂದು ಮಹಾ ಸಿದ್ಧಿಯೆಂದು ಎಲ್ಲರೂ ಒಪ್ಪಿಕೊಂಡಾರು. ಅಂಥ ಜನ ಈಹೊತ್ತು ಒಬ್ಬರೂ ಇಲ್ಲವಲ್ಲಾ ಎಂದು ನಾವು ಕೊರತೆಪಡುತ್ತಿರುವುದು ಪುಟ್ಟಣ್ಣ ಶೆಟ್ಟರ ದೊಡ್ಡತನಕ್ಕೆ ಗುರುತು. ಅವರು ಏನು ಮಾಡಲಿ ಏನು ಮಾಡದಿರಲಿ, ಅವರು ಪಂಡಿತರಾಗಿರಲಿ ಬಹುಸಾಮಾನ್ಯರೇ ಆಗಿರಲಿ ; ಯಾರ ಮಾತಿನಲ್ಲಿ ಸಮಸ್ತ ಜನರಿಗೂ ನೈಜವಾದ ನಂಬಿಕೆಯೂ ವಿಶ್ವಾಸವೂ ಇರುತ್ತದೆಯೋ ಅಂಥ ಜನವೇ ಆ ಸಮಾಜದ ಸತ್ತ್ವ. ಅಂಥವರಿಂದಲೇ ಸಮಾಜಕ್ಕೆ ಕ್ಷೇಮ.

# ಜೀವನದ ಮೈಲಿಗಲ್ಲುಗಳು

೧೮೫೬, ಏಪ್ರಿಲ್ ೨೯ ಜನನ (ಬೆಂಗಳೂರು ಬಳಿಯ ಕೃಷ್ಣರಾಜಪುರದಲ್ಲಿ)

೧೮೭೫ ಮೈಸೂರು ಸರಕಾರದಲ್ಲಿ ಉದ್ಯೋಗಾರಂಭ

೧೮೮೬ ಅಸಿಟ್ಟೆಂಟ್ ಕಮಿಷನರ್

೧೮೯೮ ಡೆಪ್ಯುಟಿ ಕಮಿಷನರ್

೧೯೦೫ – ೧೯೨೭ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ

೧೯೧೧ ಫಸ್ಟ್ ಮೆಂಬರ್ ಆಫ್ ಕೌನ್ಸಿಲ್; ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರಿಂದ "ರಾಜಸಭಾಭೂಷಣ" ಪ್ರಶಸ್ತಿ.

೧೯೧೨ ಸರಕಾರದಿಂದ ನಿವೃತ್ತಿ. ಮೈಸೂರು ಬ್ಯಾಂಕಿನ ಅಧ್ಯಕ್ಷ

೧೯೧೩–೨೦ ಪೌರಸಭಾಧ್ಯಕ್ಷ

೧೯೧೪ "ಕೈಜರ್-ಇ-ಹಿಂದ್" ಪದಕ

೧೯೧೫–೧೯೨೨ ಬೆಂಗಳೂರು ನಗರಾಭಿವೃದ್ಧಿ ಸಮಿತಿಯ ಅಧ್ಯಕ್ಷ

೧೯೧೭ "ಸಿ. ಐ. ಇ." ಸನ್ಮಾನ

೧೯೨೧ ಚಿಕ್ಕಮಗಳೂರು ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ

೧೯೨೪ ನ್ಯಾಯವಿಧಾಯಕ ಸಭೆಯ (ಚುನಾಯಿತ) ಸದಸ್ಯ

೧೯೨೫ "ಸರ್" ಪ್ರಶಸ್ತಿ

೧೯೨೭ ನಾಲ್ವಡಿ ಕೃಷ್ಣರಾಜ ಒಡೆಯರ್ ರಜತೋತ್ಸವ ಸಮಿತಿಯ ಅಧ್ಯಕ್ಷ

೧೯೩೬ ಮೈಸೂರು ವಿಶ್ವವಿದ್ಯಾನಿಲಯದಿಂದ "ಎಲ್.ಎಲ್.ಡಿ."; ಹಂಪೆಯ ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಅಧ್ಯಕ್ಷ

೧೯೩೮ ಬೆಂಗಳೂರು ವೀರಶೈವ ವಿದ್ಯಾರ್ಥಿನಿಲಯದ ಸ್ಥಾಪನೆ

೧೯೩೮, ಜುಲೈ ೨೩ ನಿಧನ

## ೧೩

# ಮಿರ್ಜಾರವರ ಸ್ನೇಹಪರತೆ

ಮಿರ್ಜಾರವರು ಸಭಾವಾಗ್ಮಿಯೆಂದು ನಾನು ಹೇಳಲಾರೆ. ಅವರು ಸಭೆಯಲ್ಲಿ ಹೇಳಬೇಕೆನಿಸಿದ್ದನ್ನು ಬರೆದುಕೊಂಡು ಬಂದು ಓದುತ್ತಿದ್ದರು.

ಆದರೆ ಅವರ ಇಂಗ್ಲಿಷ್ ಬರವಣಿಗೆಯ ಶೈಲಿ ಸುಂದರವಾದದ್ದು; ಇಂಗ್ಲಿಷ್ ಭಾಷಾಮರ್ಯಾದೆ ಒಪ್ಪುವಂಥದು. ವಾಕ್ಯಗಳು ಸಣ್ಣಸಣ್ಣವಾಗಿ ಸರಳವಾಗಿರುತ್ತಿದ್ದವು. ಅವರು ಲಲಿತವೂ ರಸವತ್ತೂ ಆದ ಮಾತುಗಳನ್ನು ಆರಿಸಿಕೊಳ್ಳುತ್ತಿದ್ದರು. ಅವರು ಸ್ನೇಹಿತರಿಗೆ ಬರೆದ ಕಾಗದಗಳಲ್ಲಿ ಲಘುಹಾಸ್ಯವಿರುತ್ತಿತ್ತು.

ಇತರರು ತಯಾರುಮಾಡಿಕೊಟ್ಟ ಇಂಗ್ಲಿಷ್ ಕರಡನ್ನು ಅವರು ಅಲ್ಲಲ್ಲಿ ತಿದ್ದಿ ಸೊಗಸುಗೊಳಿಸುತ್ತಿದ್ದರು.

ಮಿತ್ರಗೋಷ್ಠಿಯಲ್ಲಿ ಅವರು ಮಾತನಾಡುತ್ತಿದ್ದದ್ದು ಸ್ವಲ್ಪ. ಆದರೆ ಆ ಸ್ವಲ್ಪವು ಬಹು ಸ್ವಾರಸ್ಯವಾಗಿರುತ್ತಿತ್ತು.

ಅವರು ಅಶ್ಲೀಲ ಪದಗಳನ್ನು ಎಂದೂ ಉಪಯೋಗಿಸುತ್ತಿರಲಿಲ್ಲ. ಅವರ ಮುಖಭಾವ ಅಂಗಭಾವಗಳು ಗಂಭೀರವಾದವು. ಬೀದಿಯ ಮಟ್ಟಕ್ಕೆ ಎಂದೂ ಇಳಿಯುತ್ತಿರಲಿಲ್ಲ. ಅವರ ಹಾಸ್ಯವೂ ಹಾಗೆಯೇ ಮಧುರ ಲಘು; ಅಟ್ಟಹಾಸದ ಬಗೆಯದಲ್ಲ.

## ಹಾಸ್ಯಪ್ರವೃತ್ತಿ

ಪ್ರಜಾಪ್ರತಿನಿಧಿಸಭೆಯಲ್ಲಿ ಒಬ್ಬ ಸದಸ್ಯರು ಮಾತಿನ ರಭಸದಲ್ಲಿ "ಅದನ್ನು ಹೀಗೆ ಮಾಡಿಕೊಂಡು ಇದನ್ನು ಹಾಗೆ ಮಾಡಿದರೆ ಅದದಕ್ಕೆ ಸರಿಹೋಗುತ್ತದೆ"—ಎಂದರು. ಮಿರ್ಜಾರವರು ಕೇಳಿದರು: "ಯಾವುದನ್ನುಯಾವುದಕ್ಕೆ ಹೇಗೆ ಮಾಡಬೇಕು?"

1947ರಲ್ಲಿ ಇಂಡಿಯದ ಹೊಸ ಸರ್ಕಾರಗಳು ನಿರ್ಮಾಣವಾದಾಗ ಮಿರ್ಜಾರವರ ಮನೆಗೆ ಒಬ್ಬ ಸ್ನೇಹಿತರು ಹೋಗಿ "ನಿಮಗೆ ಗವರ್ನರ್ ಪದವಿ

ಕೊಟ್ಟಿದ್ದಾರಂತೆ, ಬಹು ಸಂತೋಷ"—ಎಂದರು. ಮಿರ್ಜಾ ಹೇಳಿದರು: "ಹೌದು. I am the Governor of No. 2, Ali Asker Road. ಇದನ್ನು 'ಅವರು' ಕೊಡಲಿಲ್ಲ—ನಮ್ಮಪ್ಪ ನನಗೆ ಕೊಟ್ಟದ್ದು."

ಮಿರ್ಜಾರವರಿಗೆ ಮೇಷ್ಟರಾಗಿದ್ದ ಒಬ್ಬರನ್ನು ಕುರಿತು ಒಬ್ಬ ಸ್ನೇಹಿತರು ಹೇಳಿದರು: "ನಿಮ್ಮ ಉಪಾಧ್ಯಾಯರು ಈಗ ಪೂರ್ವಕಾಲದ ಶಾಸ್ತ್ರಾಚಾರಗಳನ್ನು ಅಭ್ಯಾಸ ಮಾಡುತ್ತಿದ್ದಾರೆ. ಅವರು ತಾವು ಹಿಂದೆ ಕಲಿಸುತ್ತಿದ್ದ 'ಭೂಮಿ ಗುಂಡಾಗಿದೆ' ಎಂಬ ತತ್ತ್ವವನ್ನು ಹೇಳುತ್ತಿದ್ದಾರೆ." ಮಿರ್ಜಾ: "ಹೌದು ಹೌದು. ವಯಸ್ಸಾಗುತ್ತಾ ಆಗುತ್ತಾ, ಆರಡಿ ಉದ್ದ ಮೂರಡಿ ಅಗಲ ಇರುವ ಚಪ್ಪಟೆಯ ಭೂಮಿಯನ್ನು ಎಲ್ಲರೂ ಹುಡುಕಬೇಕಾದದ್ದೇ!"

## ಸನ್ಮಾನ

ಮಿರ್ಜಾ ಸಾಹೇಬರಿಗೆ ಎಷ್ಟೋ ಸನ್ಮಾನ ಸಮಾರಂಭಗಳು ನಡೆದವು. ಮೈಸೂರು ಇಂಡಿಯ ಸರಕಾರಕ್ಕೆ ಸಲ್ಲಿಸಬೇಕಾಗಿದ್ದ ವಾರ್ಷಿಕ ಪೊಗದಿಯು ಮಿರ್ಜಾರವರ ಪ್ರಯತ್ನದಿಂದ ಕಡಮೆಯಾದ ಸಂದರ್ಭದಲ್ಲಿ ಕೆಲವರು ಮಿತ್ರರು ಮ್ಯೂಸಿಯಂ ಬಳಿಯ ಬ್ಯಾಂಬೂ ಐಲೆಂಡ್ ಪ್ರದೇಶದಲ್ಲಿ ಒಂದು ಸಂತೋಷಕೂಟವನ್ನು ಸೇರಿಸಿದ್ದೆವು.

ಅದಕ್ಕಿಂತ ಬಹುಭಾರಿಯಾದದ್ದು ಲಾಲ್‌ಬಾಗಿನಲ್ಲಿ ನಡೆದ ಸಂತೋಷೋತ್ಸವ. ಸಂಸ್ಥಾನದ ಎಲ್ಲ ಭಾಗಗಳಿಂದಲೂ ಪ್ರತಿನಿಧಿಗಳು ಬಂದಿದ್ದರು. ಅಂದು ಮುಖ್ಯ ಅತಿಥಿಯಾದ ಮಿರ್ಜಾರವರು ಲಾಲ್‌ಬಾಗ್ ಗೇಟಿನ ಬಳಿ ಬಂದ ಕೂಡಲೇ ಆತಿಥೇಯರು (Hosts) ಅವರನ್ನು ಸ್ವಾಗತಿಸಿ ಮೆರೆವಣಿಗೆಗೆ ಕರೆದುಕೊಂಡು ಹೋದರು. ಆಗ ಮಿರ್ಜಾರವರ ಪಕ್ಕದಲ್ಲಿ ಬ್ರಿಟಿಷ್ ರೆಸಿಡೆಂಟ್ ಫ್ರೇಸರ್ ಎಂಬಾತ ಇದ್ದ. ಮೆರೆವಣಿಗೆ ಉತ್ತರಪಾರ್ಶ್ವದ ಸಣ್ಣರಸ್ತೆಯಲ್ಲಿ ಪೂರ್ವಾಭಿಮುಖವಾಗಿ ಹೊರಟು ಮೂಲೆಯಲ್ಲಿ ದಕ್ಷಿಣಕ್ಕೆ ತಿರುಗಿತು. ಆಗ ಅಲ್ಲಿ ಮಿರ್ಜಾರವರು ನನ್ನ ಕಡೆಗೆ ತಿರುಗಿ ಹೇಳಿದರು:

"ಈ ದಿವಸ ನನ್ನ ಜೀವಮಾನದ ಶಿಖರವನ್ನೇರಿದ್ದೇನೆ. ಈಗ ನಾನು ಅಧಿಕಾರದಿಂದ ನಿವೃತ್ತನಾಗಲು ಸರಿಯಾದ ಕಾಲ. ಜನದ ಮೆಚ್ಚಿಕೆ ಇಷ್ಟು ದೊರೆತ ಮೇಲೆ ಇನ್ನು ಹೆಚ್ಚು ಆಶೆಪಡಬಾರದು. ಆದರೆ ಮಹಾರಾಜರು ಒಪ್ಪುತ್ತಿಲ್ಲವಲ್ಲ? ನನ್ನನ್ನು ಬಿಟ್ಟುಕೊಡಿ ಎಂದು ಕೇಳಿಕೊಂಡಿದ್ದೇನೆ. ಅವರು ಬೇಡವೆನ್ನುತ್ತಾರೆ. ಇದನ್ನು ನಾನು ಹೇಗೆ ಸಹಿಸುವುದು?"

ಹೀಗೆ ತಮ್ಮ ಹೃದಯಭಾವವನ್ನು ವ್ಯಕ್ತಪಡಿಸಿದರು. ಮೆರೆವಣಿಗೆ ಮುಗಿದ ಮೇಲೆ ಸಭಾಕಾರ್ಯ.

## ಪ್ರೀತಿ ವಾತ್ಸಲ್ಯ

ನನ್ನ ಸ್ವಂತಕ್ಕೆ ಸೇರಿದ ಒಂದು ಸಂಗತಿಯನ್ನು ಇಲ್ಲಿ ಬಿನ್ನಯಿಸಲು ಅಪ್ಪಣೆ ಬೇಡುತ್ತೇನೆ. ನಾನು ಒಂದು ಸಾರಿ ತುಂಬಾ ಕಾಯಿಲೆ ಮಲಗಿದ್ದಾಗ ಮಿರ್ಜಾರವರು ನನ್ನ ಮನೆಗೆ ದಯಮಾಡಿಸಿದರು. ನನಗೆ ಕೆಮ್ಮಲು ಬಲವಾಗಿದ್ದದರಿಂದ ಆಹಾರ ಏನೂ ಬೇಡವೆಂದು ಉಪವಾಸ ಮಲಗಿದ್ದೆ.

ಮಿರ್ಜಾರವರು ಬಂದು ಮಂಚದ ಮೇಲೆ ನನ್ನ ಹಾಸಿಗೆಯ ಮೇಲೆ ಕುಳಿತು ಯೋಗಕ್ಷೇಮ ತಿಳಿದುಕೊಂಡು, ನಾನು ಆಹಾರ ತೆಗೆದುಕೊಂಡಿಲ್ಲವೆಂದು ಅಲ್ಲಿದ್ದ ಇತರರಿಂದ ಕೇಳಿ, "ಮನೆಯಲ್ಲಿ ಹಾಲು ಇದೆಯೆ ? ಇದ್ದರೆ ಕೊಂಚ ಬಿಸಿಮಾಡಿ ತೆಗೆದುಕೊಂಡು ಬನ್ನಿ" ಎಂದರು. ಮನೆಯೊಳಗಿನಿಂದ ಒಂದು ಬಟ್ಟಲು ಹಾಲು ತಂದರು. ಮಿರ್ಜಾರವರು ಅದನ್ನು ಕೈಗೆ ತೆಗೆದುಕೊಂಡು ನನ್ನ ಬಾಯ ಬಳಿ ಹಿಡಿದು ಹೇಳಿದರು :

ಮಿರ್ಜಾ : "ನೀನು ಇದನ್ನು ಕುಡಿಯಬೇಕು."

ನಾನು : "ನನಗೆ ಸೇರುವುದಿಲ್ಲ."

ಮಿರ್ಜಾ : "ಈ ಬಟ್ಟಲು ಹಾಲು ನಿನ್ನ ಹೊಟ್ಟೆಗೆ ಸೇರುವವರೆಗೆ ನಾನು ಇಲ್ಲಿಂದ ಹೊರಡುವುದಿಲ್ಲ. ಇದಿಷ್ಟನ್ನು ನೀನು ಕುಡಿದು ನಿದ್ದೆ ಹೋಗಬೇಕು."

ಹೀಗೆ ಹೇಳಿ ಹಾಲಿನ ಬಟ್ಟಲನ್ನು ನನ್ನ ತುಟಿಗೆ ಅದುಮಿದರು. ಇಂಥಾದ್ದು ಅವರು ನನ್ನಲ್ಲಿಟ್ಟಿದ್ದ ಪ್ರೀತಿ.

## ಪ್ರಥಮ ಪರಿಚಯ

ನನಗೆ ಮಿರ್ಜಾ ಸಾಹೇಬರ ಪರಿಚಯವಾದದ್ದು ಬಹುಶಃ 1915ರಲ್ಲಿ. ಅದಕ್ಕೆ ಮುಂಚೆಯೇ ವಿಶ್ವೇಶ್ವರಯ್ಯನವರು ನಾನು ಮಿರ್ಜಾರವರನ್ನು ಕಂಡರೆ ಅವರು ಸಂತೋಷಪಟ್ಟಾರೆಂದು ಸೂಚಿಸಿದ್ದರು. ಆದರೆ ನನಗೆ ಮಿರ್ಜಾರವರಲ್ಲಿ ಕೆಲಸವೇನೂ ಇಲ್ಲವೆಂದು ಹೇಳಿ ಕ್ಷಮೆ ಬೇಡಿದ್ದೆ. ಆಮೇಲೆ ಮೈಸೂರು ವಿಶ್ವವಿದ್ಯಾನಿಲಯ ಪ್ರಾರಂಭವಾದ ಹೊಸತಿನಲ್ಲಿ ಪ್ರೊಫೆಸರ್ ಬಿ. ವೆಂಕಟನಾರಣಪ್ಪನವರು ಒಂದು ದಿನ ನನ್ನ ಮನೆಗೆ ಬಂದು ಹೇಳಿದರು :

"ಮೊನ್ನೆ ನಾನು ಮೈಸೂರಿಗೆ ಹೋಗಿದ್ದೆ, ಸೆನೆಟ್ ಸಭೆಯ ಅಧಿವೇಶನಕ್ಕೆ.

ಅಲ್ಲಿಗೆ ಮಿರ್ಜಾರವರು ಬಂದಿದ್ದರು. ಅವರೂ ನನ್ನಂತೆ ಸೆನೆಟ್ ಸದಸ್ಯರು. ಹಿಂದೆ ಅವರು ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ನಾನು ಅಲ್ಲಿ ಮೇಷ್ಟರಾಗಿದ್ದೆ. ಆಗಿನಿಂದ ನನ್ನಲ್ಲಿ ಅವರಿಗೆ ಅಭಿಮಾನವಿದೆ. ಮಿರ್ಜಾರವರು ನನ್ನ ಬಳಿಗೆ ಬಂದು 'ನೀವು ಕರ್ಣಾಟಕ ಪತ್ರಿಕೆ ನಡೆಸುತ್ತಿರುವ ಮನುಷ್ಯ ನನ್ನು ಬಲ್ಲಿರಾ?' ಎಂದು ಕೇಳಿದರು. ನಾನು 'ಚೆನ್ನಾಗಿ ಬಲ್ಲೆ' ಎಂದೆ. ಮಿರ್ಜಾರವರು 'ಅವರು ಒಳ್ಳೆಯ ಇಂಗ್ಲಿಷ್ ಬರೆಯುತ್ತಾರೆ. ಚಿಕ್ಕವರಂತೆ. ಅವರನ್ನು ನೋಡಬೇಕೆಂದು ಅಪೇಕ್ಷೆಯಿದೆ. ನೀವು ಅದಕ್ಕೆ ಏರ್ಪಾಟು ಮಾಡಲಾಗುತ್ತದೆಯೆ?' ಎಂದು ಕೇಳಿದರು. ನಾನು 'ಸಂತೋಷದಿಂದ ಮಾಡುತ್ತೇನೆ' ಎಂದು ಭರವಸೆಕೊಟ್ಟೆ. ನನ್ನ ಮಾತನ್ನು ನೀವು ನಡಸಿಕೊಡ ಬೇಕು. ತಕರಾರು ಹೇಳಬೇಡಿ."

ನಾನು ಒಪ್ಪಿಕೊಂಡು ಅವರು ಹೇಳಿದ ದಿವಸ ಮಿರ್ಜಾರವರ ಮನೆಗೆ ಹೋದೆ. ಅವರ ಮನೆ ರಿಚ್‌ಮಂಡ್ ಟೌನ್ ಪ್ರದೇಶದಲ್ಲಿ. 'ಸಿಲ್ವರ್ ಓಕ್ ಲಾಡ್ಜ್' ಎಂದು ಮನೆಯ ಹೆಸರು. ಆ ಮನೆಯ ಪ್ರಾಕಾರದಲ್ಲಿಯೂ ಆ ಬೀದಿಯಲ್ಲಿಯೂ ಸಿಲ್ವರ್ ಓಕ್ ಮರಗಳು ಹೆಚ್ಚಾಗಿವೆ. ಆ ಮನೆ ಮಿರ್ಜಾ ರವರ ಪೂರ್ವಿಕರದು.

ಅಲ್ಲಿ ನಡೆದ ಭೇಟಿಯಿಂದ ನನಗೆ ತುಂಬ ಸಂತೋಷವಾಯಿತು. ಮಾತಿಗೆ ವಿಷಯ ಗಹನವಾದದ್ದೇನೂ ಇರಲಿಲ್ಲ. ರಾಜಕೀಯವೂ ಇರಲಿಲ್ಲ. ಬರಿಯ ಲೋಕಾಭಿರಾಮದ ಮಾತು. ಆದರೆ ಅವರ ಮಾತಿನ ಸರಳವಾದ ರೀತಿ, ಅದ ರಲ್ಲಿ ತುಂಬಿದ್ದ ಸ್ನೇಹ, ಎಷ್ಟೋ ಕಾಲದಿಂದ ಬೆಳದಿದ್ದದ್ದೇನೋ ಎನ್ನಿಸುವಂಥ ಸಲಿಗೆ, ಕೊಂಚ ಕೊಂಚ ಲಘುಹಾಸ್ಯ—ಇವೆಲ್ಲ ನನಗೆ ಸಂತೋಷವುಂಟು ಮಾಡಿತು. ಮಿರ್ಜಾರವರು ದಿವಾನರಾದಾರೆಂಬ ಕಲ್ಪನೆ ಆಗ ನನ್ನ ಮನಸ್ಸಿಗೆ ಬರಲಿಲ್ಲ. ಯಾವುದೋ ಎರಡು ಪುಸ್ತಕಗಳನ್ನು ಅವರು ನನಗೆ ಆಗ ಕೊಟ್ಟ ರೆಂದು ಜ್ಞಾಪಕ. ಬಹುಶಃ ಅದು ಲಾರ್ಡ್ ಬ್ರೈಸ್ ಎಂಬ ಪ್ರಸಿದ್ಧ ರಾಜ ನಿಪುಣ ಬರೆದಿದ್ದ "ಮಾಡರ್ನ್ ಡೆಮಾಕ್ರಸೀಸ್" ಎಂಬ ಗ್ರಂಥದ ಎರಡು ಸಂಪುಟ.

ಇದಾದ ಮೇಲೆ ಮಿರ್ಜಾರವರು ನನಗೂ ನಾನು ಅವರಿಗೂ ಹದಿನೈದಿ ಪ್ಪತ್ತು ದಿವಸಕ್ಕೊಮ್ಮೆ ಕಾಗದ ಬರೆಯುವುದು ರೂಢಿಗೆ ಬಂತು. ಆ ಕಾಗದ ಗಳಲ್ಲಿ ಸಾಹಿತ್ಯ, ದೇಶಚರಿತ್ರೆ, ಮತಚಾರ, ಚಿತ್ರಕಲೆ ಮೊದಲಾದ ವಿಷಯ ಗಳು ಲಘುಲಘುವಾಗಿ ಪ್ರಸ್ತಾವಕ್ಕೆ ಬರುತ್ತಿದ್ದವು.

ನಾನು ಮೈಸೂರಿಗೆ ಹೋದಾಗ ಕೆಲವು ವೇಳೆ ಮಿರ್ಜಾರವರ ಮನೆಗೆ ಹೋಗಿ ಅವರನ್ನು ಕಾಣುತ್ತಿದ್ದೆ.

ಹೀಗೆ ಬೆಳೆಯಿತು ನಮ್ಮ ಮೈತ್ರಿ.

## ದಿವಾನ್ ಪದವಿ

ಮಿರ್ಜಾರವರು ದಿವಾನರಾದದ್ದು 1926ರಲ್ಲಿ. ಆ ಪದವೀನಿಯಾಮಕವನ್ನು ಬಹುಜನ ನಿರೀಕ್ಷಿಸಿಕೊಂಡೇ ಇದ್ದರು. ನಾನು ಹಾಗೆ ನಿರೀಕ್ಷಿಸಿದವನಲ್ಲದಿದ್ದರೂ, ಅದರಿಂದ ನನಗೆ ಆಶ್ಚರ್ಯವೇನೂ ಆಗಲಿಲ್ಲ. ನಾನು ಅವರಿಗೆ ಒಂದು ಅಭಿನಂದನ ಪತ್ರವನ್ನು ಬರೆದೆ. ಅದರ ಪ್ರಾರಂಭದಲ್ಲಿ "Dear and Respected Sir...." ಎಂದು ಬರೆದಿದ್ದೆ. ಈಗ ದೊಡ್ಡ ಪದವಿಗೆ ಬಂದಿದ್ದಾರೆ; ಹಿಂದಿನ ಸಲಿಗೆಯಿಂದ ಬರೆದರೆ ತಪ್ಪಾದೀತೋ ಏನೋ—ಎಂದು ಶಂಕೆಪಟ್ಟಿದ್ದೆ.

ಒಂದೆರಡು ವಾರ ಬಿಟ್ಟು, ನಾನು ಮೈಸೂರಿಗೆ ಹೋಗಬೇಕಾದ ಸಂದರ್ಭ ಬಂದಾಗ ಮಿರ್ಜಾರವರಲ್ಲಿಗೆ ಹೋದೆ. ಅವರು ನನ್ನನ್ನು ತಮ್ಮ ಕೊಠಡಿಯೊಳಕ್ಕೆ ಕರೆದೊಯ್ದರು. ನಾನು ಅವರಿಗೆ ಬರೆದಿದ್ದ ಕಾಗದವನ್ನು ನನ್ನ ಮುಂದಿರಿಸಿ "Respected" ಎಂಬ ಮಾತಿಗೂ "Sir" ಎಂಬುದಕ್ಕೂ ಕೆಂಪುಶಾಯಿಯಿಂದ ಬಳೆಯ ಗುರುತುಹಾಕಿದ್ದದ್ದನ್ನು ತೋರಿಸಿ ಹೇಳಿದರು:

"I have now a bone to pick with you. What a thing to do with a Brahmin!" ಇಂಗ್ಲಿಷಿನಲ್ಲಿ "to pick a bone" ಎಂದರೆ ಜಗಳವಾಡುವುದು ಎಂದರ್ಥ. ಇದೊಂದು ಇಂಗ್ಲೀಷಿನ ಸಂಕೇತ. Bone ಎಂದರೆ ಮೂಳೆ. ಬ್ರಾಹ್ಮಣನೊಡನೆ ಮೂಳೆಯ ವಿಷಯವೆ!

ಇದು ಅವರ ಹಾಸ್ಯದ ಒಂದು ಮಾದರಿ.

ಅವರು ಹೇಳಿದರು:

"ನೀನು ದಿಢೀರೆಂದು ನನ್ನ ಸ್ಥಾನ ಬದಲಾಯಿಸಿದ್ದು ನನ್ನ ಮನಸ್ಸಿಗೆ ಅಳುಕಾಯಿತು. ಈ Respected, Sir, ಈ ಮಾತುಗಳನ್ನು ನೀನು ನನ್ನ ವಿಷಯದಲ್ಲಿ ಉಪಯೋಗಿಸತಕ್ಕದ್ದಲ್ಲ. ನೀನು ಹಿಂದಿನಂತೆಯೇ ನನ್ನ ಹೆಸರನ್ನು ನೇರವಾಗಿ ಬರೆಯಲು ಏನು ಅಡ್ಡಿ?"

## ವಿರಸ

ನಲವತ್ತು ನಲವತ್ತೈದು ವರ್ಷ ನಮ್ಮಿಬ್ಬರ ಸ್ನೇಹ ಮುಂದುವರಿಯಿತು. ಆದರೆ ಈ ಸ್ನೇಹದ ಕಥೆಯಲ್ಲಿ ಕಹಿ ಹುಳಿಗಳ ಭಾಗ ಕಡಮೆಯೇನೂ ಇರಲಿಲ್ಲ. ಬೆಂಗಳೂರಿನ ಹಿಂದೂ-ಮುಸಲ್ಮಾನ್ ಗಲಾಟೆಗಳಿಂದ ನಮ್ಮಿಬ್ಬರಲ್ಲಿ ವಿರಸ ಬಂದಿತ್ತು. ಕೆಲವು ತಿಂಗಳ ಕಾಲ ಸ್ನೇಹ ಮುರಿದುಹೋದಂತೆಯೇ ಇತ್ತು. ಒಂದೆರಡು ಸಾರಿ ಅವರು ಬೇರೆ ಮಿತ್ರರಿಂದ ನನಗೆ ಹೇಳಿಕಳುಹಿಸಿದರು. ದಿವಂಗತ ನವರತ್ನ ರಾಮರಾಯರೂ ಅವರಲ್ಲೊಬ್ಬರು. ಬೊಂಬಾಯಿಂದ ಮಿರ್ಜಾರವರು ಬಂದಾಗ "ಮಕ್ಕಳಿಗಾಗಿ ಆಟದ ಸಾಮಾನುಗಳನ್ನು ತಂದಿದ್ದಾರೆ, ಅದನ್ನಾದರೂ ನೀನು ತೆಗೆದುಕೊಳ್ಳಬಾರದೇನಯ್ಯ ?"— ಎಂದರು ನವರತ್ನ ರಾಮರಾಯರು. ಆದರೆ ನನ್ನ ಮನಸ್ಸು ಏಕೋ ಸೆಟೆದುಕೊಂಡಿತ್ತು.

ಹೀಗಿದ್ದಾಗ ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳು ಬೆಂಗಳೂರಿಗೆ ಬಂದರು. ಅವರಿಗೆ ಗಲಭೆಗಳ ವಿಚಾರವೂ ಮಿರ್ಜಾರವರಿಗೂ ನನಗೂ ನಡುವೆ ಉಂಟಾಗಿದ್ದ ವಿರಸದ ವಿಚಾರವೂ ತಿಳಿಯಿತು. ಅವರು ನನ್ನೊಡನೆ ಈ ಮಾತನ್ನೆತ್ತಲಿಲ್ಲ.

ಅಷ್ಟರಲ್ಲಿ ಶಾಸ್ತ್ರಿಗಳ ಷಷ್ಟ್ಯಬ್ದಿ ಉತ್ಸವ ಬಂದಿತು. ಅದಕ್ಕಾಗಿ ಶಾಸ್ತ್ರಿಗಳ ಬಂಧುಗಳೂ ಇಷ್ಟಮಿತ್ರರೂ ಮದರಾಸು ಮಾಯವರಂ ಮೊದಲಾದ ಕಡೆಗಳಿಂದ ಬಂದಿದ್ದರು. ಉತ್ಸವದ ದಿವಸ ಸಂಜೆ ಮಿರ್ಜಾರವರು ಬರುವುದಾಗಿ ಹೇಳಿಕಳುಹಿಸಿದ್ದರಂತೆ. ಸುಮಾರು ಐದು ಗಂಟೆಗೆ ಅವರು ಶಾಸ್ತ್ರಿಗಳ ಮನೆಗೆ ಬಂದರು. ಅಲ್ಲಿ ಹಾಕಿದ್ದ ಡೇರಾದಲ್ಲಿ ಅವರೂ ಮಿತ್ರರೂ ಸೇರಿ ಸಂತೋಷದ ಮಾತುಕಥೆಯಾಡುತ್ತಿದ್ದರು. ಆ ಹೊತ್ತಿನಲ್ಲಿ ನಾನು ಮನೆಯ ಒಳಗಡೆ ಬೇರೆ ಮಿತ್ರರ ಗೋಷ್ಠಿಯಲ್ಲಿ ಸೇರಿದ್ದೆ.

ಶಾಸ್ತ್ರಿಗಳು ತಾವಿದ್ದ ಕಡೆಯಿಂದ ನನ್ನ ಹೆಸರನ್ನು ಹೇಳಿ ಗಟ್ಟಿಯಾಗಿ ಕೂಗಿ "ಅಯ್ಯಾ, ಇಲ್ಲಿ ಬಾ. ನಿನ್ನನ್ನು ನೋಡಬೇಕೆಂದು ಯಾರೋ ಬಂದಿದ್ದಾರೆ" ಎಂದರು. ಅವರು ಎರಡುಮೂರು ಸಲ ಕೂಗಿದ ಮೇಲೆ ಅಲ್ಲಿಗೆ ಹೋದೆ. ಎಷ್ಟೋ ತಿಂಗಳ ತರುವಾಯ ಆಗಲೇ ಮಿರ್ಜಾರವರೂ ನಾನೂ ಒಬ್ಬರನ್ನೊಬ್ಬರು ನೋಡಿದ್ದು. ನೋಡಿದರೂ ಆಗ ಬಿಗಿದುಕೊಂಡೇ ಇದ್ದೆವು.

ಆ ದಿನ ರಾತ್ರಿ ಸೆಂಚುರಿ ಕ್ಲಬ್ಬಿನಲ್ಲಿ ಶಾಸ್ತ್ರಿಗಳ ಗೌರವಾರ್ಥವಾಗಿ

ಭೋಜನಕೂಟ ಏರ್ಪಾಟಾಗಿತ್ತು. ಆಗ ಶಾಸ್ತ್ರಿಗಳು ಭಾಷಣ ಮಾಡ ಬೇಕೆಂದು ಎಲ್ಲರೂ ಕೇಳಿದರು. ಶಾಸ್ತ್ರಿಗಳು ಸ್ನೇಹಧರ್ಮವನ್ನು ಕುರಿತು ನಾಲ್ಕು ಮಾತನ್ನಾಡಿದರು. ಅದು ನನ್ನನ್ನೇ ಉದ್ದೇಶಿಸಿ ಹೇಳಿದಂತೆ ನನಗೆ ತೋರಿತು. "ಈ ಪ್ರಪಂಚದಲ್ಲಿ ಸ್ನೇಹವೆಂಬುದು ಬಹು ದೊಡ್ಡ ವಸ್ತು. ಮನುಷ್ಯಸಂಬಂಧಗಳಲ್ಲಿ ಯಾವುದೋ ಕಾರಣದಿಂದ ಸ್ನೇಹಕ್ಕೆ ಬಾಧೆ ತಗಲುವುದುಂಟು. ರಾಜಕೀಯವಂತೂ ಕತ್ತಿಯಂತೆಯೇ: ಯಾವುದಕ್ಕೆ ತಗಲಿದರೂ ಅದನ್ನು ಕಡಿಯುತ್ತದೆ. ಸ್ನೇಹಿತರಾಗಿದ್ದವರು ಒಬ್ಬರನ್ನೊಬ್ಬರು ಸರಿಯಾಗಿ ಅರ್ಥಮಾಡಿಕೊಳ್ಳದೆ, ರೋಷದಿಂದಲೋ ಆವೇಶದಿಂದಲೋ ಹಟದಿಂದಲೋ ಸ್ನೇಹಕ್ಕೆ ಭಂಗತಂದುಕೊಂಡು, ದೊಡ್ಡವಸ್ತುವನ್ನು ಕಳೆದು ಕೊಳ್ಳುತ್ತಾರೆ. ನಮ್ಮ ದೇಶದ ರಾಜಕೀಯಜೀವನ ಅಸ್ತವ್ಯಸ್ತ ಸ್ಥಿತಿಯ ಲ್ಲಿದೆ. ಯಾವುದೂ ಹದಕ್ಕೆ ಬಂದಿಲ್ಲ. ನಮ್ಮ ಅರ್ಧಮರ್ಧ ಪಕ್ವವಾದ ಅಭಿಪ್ರಾಯಗಳನ್ನೂ ಉಸುರಿ ಇನ್ನೊಬ್ಬರು ತಪ್ಪು ತಿಳಿದುಕೊಳ್ಳುವಂತೆ ಮಾಡಿಬಿಡುತ್ತೇವೆ. ಸ್ನೇಹಿತರಲ್ಲಿ ಭಿನ್ನಾಭಿಪ್ರಾಯ ಬಂದರೆ ಭೇದವನ್ನು ವಿಚಾರಕ್ಕಾಗಿ ಬೇರೆ ತೆಗೆದಿಟ್ಟು ಸ್ನೇಹವನ್ನು ಉಳಿಸಿಕೊಳ್ಳಬೇಕು. ಸರಕಾರ ನಡಸುವವರು ನಾಲ್ಕಾರು ಹೊರಗಣ ಕಾರಣಗಳಿಗೆ ಮನ್ನಣೆ ತೋರಬೇಕಾ ಗುತ್ತದೆ. ಅವರು ಯಾರನ್ನೂ ಕಳೆದುಕೊಳ್ಳಬಾರದು. ತಾಳ್ಮೆ, ಸಹನೆ— ಇವು ಸರಕಾರ ನಡಸುವವರಿಗೂ ಅವರ ಸ್ನೇಹಿತರಿಗೂ ಸಮಾನವಾದ ಕರ್ತವ್ಯ."

ಈ ಧಾಟಿಯಲ್ಲಿ ಹೇಳಿದರು.

ಕ್ಲಬ್ಬಿನಿಂದ ಹಿಂದಿರುಗುವಾಗ ದಾರಿಯಲ್ಲಿ ನನ್ನನ್ನು ಕೇಳಿದರು:

"ಏನಯ್ಯ? ನನ್ನ ಮಾತು ನಿನಗೆ ಸರಿತೋರಲಿಲ್ಲವೆ?"

ಹೀಗೆ ಮಿರ್ಜಾರವರಿಗೂ ನನಗೂ ಬಂದಿದ್ದ ಕಹಿ ಪ್ರಕರಣ ಅಗ್ಗಿ ಕೊನೆ ಗೊಂಡಿತು.

## ಅಭಿಪ್ರಾಯಭೇದ

ಇಂಥ ಪ್ರಕರಣಗಳು ಆಮೇಲೂ ಬಂದವು. ಜವಾಬ್ದಾರಿ ಸರಕಾರದ ವಿಷಯದಲ್ಲಿ ಅವರೂ ನಾನೂ ಪೂರ್ವ–ಪಶ್ಚಿಮಗಳಂತೆ ಇದ್ದೆವು. ಅವರು ಅಧಿಕಾರವಹಿಸಿಕೊಂಡು ಕೆಲವು ತಿಂಗಳಾದ ಮೇಲೆ ಒಬ್ಬ ಆಪ್ತಮಿತ್ರರ ಮೂಲಕ ನನಗೆ ಹೀಗೆ ಹೇಳಿ ಕಳುಹಿಸಿದರು: "ಜವಾಬ್ದಾರಿ ಸರಕಾರದ

ಹುಚ್ಚನ್ನು ಆತ ತಲೆಗೆ ಅಂಟಿಸಿಕೊಂಡು ಪ್ರಯಾಸಪಡುತ್ತಿದ್ದಾನೆ. ನಾನು ಇಲ್ಲಿರುವವರೆಗೂ ಅದು ನಡೆಯಲಾರದು. ನಮ್ಮ ದೇಶಕ್ಕೆ ಅದು ಹೊಂದ ಲಾರದು. ಈತ ಈ ಡೆಮಾಕ್ರಸಿ ಹುಚ್ಚನ್ನು ಬಿಟ್ಟು ಸಾಹಿತ್ಯ ಸಾಮಾಜಿಕ ಕಾರ್ಯಗಳನ್ನು ಯಥೇಷ್ಟವಾಗಿ ನಡಸಲಿ. ಅದಕ್ಕೆ ನಾನು ಒತ್ತಾಸೆ ಕೊಟ್ಟೇನು."

ಹುಚ್ಚು ಅಷ್ಟು ಸುಲಭವಾಗಿ ಬಿಡುತ್ತದೆಯೆ ? ನನ್ನ ದಾರಿಯಲ್ಲಿ ನಾನು ಪಟ್ಟಾಗಿ ನಿಂತೆ. ಅವರಿಗೆ ತುಂಬ ಅಸಮಾಧಾನವಾಯಿತು. ಒಂದು ದಿನ ತಮ್ಮ ಕಛೇರಿಗೆ ನನ್ನನ್ನು ಬರಹೇಳಿದರು. ಸುಮಾರು ಸಂಜೆ ನಾಲ್ಕು ಘಂಟೆ. ನಾನು ಕೊಠಡಿಯೊಳಕ್ಕೆ ಹೋಗುತ್ತಲೇ ನನ್ನನ್ನು ಕೂಡಹೇಳಿ "ನೀನು ಈ ಕಾಗದದ ಕಟ್ಟನ್ನು ನೋಡುತ್ತಿರು. ಹತ್ತು ನಿಮಿಷಗಳೊಳಗಾಗಿ ನಾನು ಕೆಲವು ಜರೂರಾದ ಕಾಗದಗಳಿಗೆ ಸಹಿಹಾಕಿ ಬರುತ್ತೇನೆ. ಆಮೇಲೆ ಮಾತ ನಾಡೋಣ" ಎಂದರು.

ನಾನು ಆ ಫೈಲನ್ನು ಓದಿದೆ. ಅದು ಬಹು ಮುಖ್ಯವಾದ ಒಂದು ಮ್ಯುನಿಸಿ ಪಲ್ ಸಂಸ್ಥೆಯ ಯಾವುದೋ ವ್ಯವಹಾರಕ್ಕೆ ಸಂಬಂಧಪಟ್ಟದ್ದು. ಮಿರ್ಜಾ ರವರು ತುರ್ತು ಕಾಗದಗಳಿಗೆ ರುಜುಹಾಕಿದ ಮೇಲೆ, ಗುಮಾಸ್ತನು ಹೊರಟು ಹೋದ ಬಳಿಕ ನನ್ನ ಕಡೆ ತಿರುಗಿ ಕೇಳಿದರು :

ಮಿರ್ಜಾ : "ನಿನಗೆ ಇನ್ನೂ ಡೆಮಾಕ್ರಸಿ ಬೇಕೆನ್ನಿಸುತ್ತದೆಯೆ ?"

ನಾನು : "ಅದರಲ್ಲಿ ಅಸಂಗತವೇನು ?"

ಮಿರ್ಜಾ : "ಈ ಫೈಲನ್ನು ನೋಡಿದ ಮೇಲೆ ಡೆಮಾಕ್ರಸಿ ಪದ್ಧತಿ ನಮ್ಮ ಜನಕ್ಕೆ ಸರಿಹೋಗುತ್ತದೆಂದು ನಿನಗನಿಸಿದೆಯೆ ?"

ನಾನು : "ಯಾರೋ ಒಬ್ಬರು ಕೆಟ್ಟರೆ, ಅಥವಾ ಯಾವುದೋ ಒಂದು ಸಂಸ್ಥೆ ಹಾಳಾದರೆ, ಆದರಿಂದ ಡೆಮಾಕ್ರಸಿ ತತ್ತ್ವವೇ ಕೆಟ್ಟದ್ದೆಂದು ಹೇಳ ಬಹುದೆ ?"

ಹೀಗೆ ವಾದ ಮುಂಬರಿಯಿತು.

## ಸೂಕ್ಷ್ಮಗ್ರಹಣ

ವಾದದಲ್ಲಿ ಮಿರ್ಜಾರವರು ದೊಡ್ಡ ಗಂಟಲನ್ನೆತ್ತುತ್ತಿರಲಿಲ್ಲ. ದಪ್ಪ ದಪ್ಪ ಮಾತುಗಳನ್ನು ಆಡುತ್ತಿರಲಿಲ್ಲ. ತಮ್ಮ ಮನೋಗತನನ್ನು ಒಂದು ಮಾತಿನಲ್ಲಿ ಸೂಚಿಸುವರು. ಅದನ್ನು ಪ್ರತಿಕಕ್ಷಿ ಅಂಗೀಕರಿಸಿದ್ದರೆ ವಾದವು

ಪ್ರಯೋಜನಕ್ಕೆ ಬಾರದೆಂದು ಅದನ್ನು ಅಲ್ಲಿಗೇ ಕೈಬಿಡುವರು.

ಲೆಜಿಸ್ಲೆಟಿವ್ ಕೌನ್ಸಿಲಿನಲ್ಲಿ ಭಾಷಣ ಮಾಡುತ್ತ ನಾನು ಯಾವುದಾದರೊಂದು ಅಂಶವನ್ನು ಪ್ರಸ್ತಾವಿಸಿದಾಗ, ಮಿರ್ಜಾರವರು ಅದಕ್ಕೆ ಗಮನ ಕೊಟ್ಟು ಒಂದು ಮಾತು ನುಡಿಯುವರು. ಆ ಕೂಡಲೇ ನನ್ನ ಪಕ್ಕದಲ್ಲಿ ಕುಳಿತಿದ್ದ ಬಿ. ಕೆ. ಗರುಡಾಚಾರ್ಯರು ನನ್ನ ಕೋಟಿನ ಬಾಲವನ್ನು ಜಗ್ಗಿ "ಉಕ್ಕಾರ್, ಉಕ್ಕಾರ್" ಎಂದು ಕೂಡಿಸುವರು. ನಾನು ಅದೇಕೆಂದು ಕೇಳಿ, "ನಾನು ಹೇಳಬೇಕಾದದ್ದು ಇನ್ನೂ ಇತ್ತು. ನೀವು ತಡೆದಿರಿ" ಎಂದದ್ದಕ್ಕೆ ಗರುಡಾಚಾರ್ಯರು ತಮಿಳಿನಲ್ಲಿ "ಸಾಕಪ್ಪ ಅಷ್ಟು, ನಿನ್ನ ಪಾಯಿಂಟನ್ನು ಆತ ಗ್ರಹಿಸಿದ್ದಾರೆ. ಇನ್ನು ಹೆಚ್ಚಾಗಿ ಒತ್ತಿ ಹೇಳಿದರೆ ಬೇರೆ ಅಭಿಪ್ರಾಯಗಳು ಬಂದುಬಿಡಬಹುದು. ನಿನ್ನ ಪಾಯಿಂಟು ಬಂತಲ್ಲ. ಅಷ್ಟಕ್ಕೆ ಬಿಡು" ಎನ್ನುತ್ತಿದ್ದರು. ಗರುಡಾಚಾರ್ಯರು ಮಿರ್ಜಾರವರ ಸೂಕ್ಷ್ಮಗ್ರಾಹಕತೆಯನ್ನು (Sensitiveness) ಚೆನ್ನಾಗಿ ಕಂಡುಕೊಂಡಿದ್ದರು.

ಮಾತು ಎಷ್ಟು ಅವಶ್ಯವೋ ಅಷ್ಟೇ ಇರಬೇಕು : ಹೆಚ್ಚಿರಬಾರದು. ಇದು ಮಿರ್ಜಾರವರ ಪದ್ಧತಿ. ಗರುಡಾಚಾರ್ಯರದೂ ಹಾಗೆಯೇ.

## ಬಹಿರಂಗ ವಾಗ್ವಾದ

ಮಿರ್ಜಾ ಸಾಹೇಬರು 1932ರ ಸುಮಾರಿನಲ್ಲಿ ರೌಂಡ್ ಟೇಬಲ್ ಕಾನ್ಫರೆನ್ಸಿಗಾಗಿ ಲಂಡನ್ ಪಟ್ಟಣಕ್ಕೆ ಹೋಗಬೇಕಾದ ಸಂದರ್ಭ ಬಂತು. ಆಗ ಅವರು ಜನಾಭಿಪ್ರಾಯವನ್ನು ತಿಳಿದುಕೊಂಡು ಅದನ್ನು ಯುಕ್ತಕಂಡಂತೆ ಕಾನ್ಫರೆನ್ಸ್ ಸಭೆಯಲ್ಲಿ ಪ್ರತಿಪಾದಿಸತಕ್ಕದ್ದೆಂದು ಯೋಚಿಸಿ, ಅದಕ್ಕಾಗಿ ಒಂದು ಪ್ರತಿನಿಧಿಸಭೆಯನ್ನು ಬೆಂಗಳೂರಿನಲ್ಲಿ ಸೇರಿಸಿದರು. ಈ ಬೆಂಗಳೂರು ಸಭೆಗೆ ಆಹ್ವಾನಿತರಾಗಿದ್ದವರಲ್ಲಿ ನಾವು ಕೆಲವರು ನಮ್ಮ ಅಭಿಪ್ರಾಯವನ್ನು ಲಿಖಿತರೂಪದಲ್ಲಿ ಮಿರ್ಜಾರವರಿಗೆ ಒಪ್ಪಿಸಬೇಕೆಂದು ನಿಶ್ಚಯಿಸಿಕೊಂಡು, ಒಂದು ಬಿನ್ನವತ್ತಳೆಯನ್ನು ತಯಾರು ಮಾಡಿದೆವು. ಅದನ್ನು (ದಿವಗಂತ) ಡಿ. ಎಸ್. ಮಲ್ಲಪ್ಪನವರು ಸಭೆಯಲ್ಲಿ ಓದಿದರು. ಅವರು ಓದುತ್ತಿರುವಾಗಲೇ ನಡುನಡುವೆ ಮಿರ್ಜಾಸಾಹೇಬರೂ ಅವರ ಸಹಸಚಿವರಾದ ಮ್ಯಾಥನ್ ಸಾಹೇಬರೂ ಪ್ರಶ್ನೆಗಳನ್ನು ಹಾಕುತ್ತಿದ್ದರು. ಮಲ್ಲಪ್ಪನವರು ಓದಿ ಕುಳಿತ ಬಳಿಕ ನಾನು ಎದ್ದೆ. ಮಿರ್ಜಾರವರೂ ಮ್ಯಾಥನ್‌ರವರೂ ಹಾಕಿದ್ದ ಸವಾಲುಗಳಿಗೆ ಜವಾಬುಗಳನ್ನು ಕೊಡಲು ಪ್ರಾರಂಭಿಸಿದೆ. ಮಿರ್ಜಾರವರ ಮುಖ

ಕೆಂಪೇರಿತು. ಮಾತುಗಳು ಬಿಸಿಯಾದವು.

ಇದನ್ನು ಆಗ ಸಭಾಕಾರ್ಯಗಳನ್ನು ವೀಕ್ಷಿಸುತ್ತಿದ್ದ ಸೇಂಟ್ ನಿಹಾಲ್ ಸಿಂಗ್ ಎಂಬ ಪ್ರಸಿದ್ಧ ಪತ್ರಕರ್ತನು 'ಹಿಂದೂ' ಪತ್ರಿಕೆಯಲ್ಲಿ ವರ್ಣಿಸಿದ್ದಾನೆ.

ಮೇಲಣ ಬಹಿರಂಗ ವಾಗ್ವಾದದಿಂದ ಮಿರ್ಜಾರವರಿಗೂ ನನಗೂ ಪರಸ್ಪರ ಸಮಾಧಾನವುಂಟಾಗಲಿಲ್ಲ.

ಇಂಥ ಪ್ರಸಂಗಗಳು ಎಷ್ಟೋ ನಡೆದವು.

ಮೈಸೂರಿಗೆ ತಕ್ಕ ರಾಜ್ಯವ್ಯವಸ್ಥೆಯನ್ನು ಶಿಫಾರಸು ಮಾಡುವುದಕ್ಕಾಗಿ 1938ರ ಸುಮಾರಿನಲ್ಲಿ ಮಿರ್ಜಾ ಸರಕಾರವು ಒಂದು ಸಮಿತಿಯನ್ನು ನಿಯಮಿಸಿತು. ಆ ಸಮಿತಿಗೆ ಕೆ. ಆರ್. ಶ್ರೀನಿವಾಸಯ್ಯಂಗಾರ್ಯರು ಅಧ್ಯಕ್ಷರು. ರಾವ್ ಬಹದ್ದೂರ್ ಎಂ. ಸಿ. ರಂಗಯ್ಯಂಗಾರ್ಯರೂ, ಶ್ರೀಮತಿ ರುಕ್ಮಿಣಿಯಮ್ಮನವರೂ, ಎಸ್. ಹಿರಿಯಣ್ಣನವರೂ, ಎನ್. ಎಸ್. ಸುಬ್ಬರಾಯರೂ ಮಹಮದ್ ಇಮಾಂರವರೂ ಇತರರೂ ಸದಸ್ಯರಾಗಿದ್ದರು. ಸಮಿತಿಯು ಅನೇಕ ತಿಂಗಳ ಕಾಲ ವಿಷಯವನ್ನು ಪರಿಶೀಲಿಸಿ, ತನ್ನ ವರದಿಯನ್ನು ಸರಕಾರಕ್ಕೊಪ್ಪಿಸಿತು. ನಾನು ಆ ವರದಿಗೆ ಸಹಿ ಹಾಕಿದರೂ, ಒಂದು ಪ್ರತ್ಯೇಕ ಪುರವಣಿಯನ್ನು (Appendix) ಸೇರಿಸಿದೆ. ನನ್ನ ಅಭಿಪ್ರಾಯ ಹೀಗಿತ್ತು : ಸಮಿತಿಯು ಜವಾಬ್ದಾರಿ ಸರಕಾರದ ಧ್ಯೇಯವನ್ನು ಸ್ಪಷ್ಟೋಕ್ತಿಯಿಂದ ಶಿಫಾರಸು ಮಾಡಬೇಕಿತ್ತು. ಜವಾಬ್ದಾರಿ ಸರಕಾರ ಪದ್ಧತಿಯನ್ನು ಸರಕಾರ ಈ ಕೂಡಲೆ ಅಂಗೀಕರಿಸಿ ಹತ್ತು ಹದಿನೈದು ವರ್ಷಗಳೊಳಗಾಗಿ ಆ ಪದ್ಧತಿಯು ಕಾರ್ಯದಲ್ಲಿ ನೆಲಸುವಂತೆ ಮಾಡಬೇಕು.

ಈ ನನ್ನ ಸಲಹೆ ಮಿರ್ಜಾರವರಿಗೆ ತೀವ್ರವಾದ ಅಸಮಾಧಾನವುಂಟುಮಾಡಿತು. ನನ್ನ ಸಲಹೆಗೆ ಪುರಸ್ಕಾರ ದೊರೆಯಲಿಲ್ಲ.

## ಮಾನವೀಯತೆ

ಆದರೆ ಮಿರ್ಜಾರವರ ಮಾನವೀಯ ಶ್ರೇಷ್ಠತೆಯನ್ನು ಹೊರಕ್ಕೆ ತರುವ ಒಂದು ಸಂದರ್ಭ ಬಂತು. ವರದಿಗೆ ನಾನು ಸಹಿಹಾಕಿದ ದಿವಸವೇ ಕಾಯಿಲೆಯಲ್ಲಿದ್ದೆ. ಮೂರನೆಯ ದಿನವೇ ನನ್ನ ಕಾಯಿಲೆ ಟೈಫಾಯ್ಡ್ ಎಂದು ನಿಷ್ಕರ್ಷೆಯಾಯಿತು. ನನ್ನನ್ನು ವಿಕ್ಟೋರಿಯ ಆಸ್ಪತ್ರೆಗೆ ಸಾಗಿಸಿದರು. ನನಗೆ ಮೈಮೇಲೆ ಜ್ಞಾನವಿರಲಿಲ್ಲ. ಆಮೇಲೆ ಪ್ರತಿ ದಿವಸವೂ ಬೆಳಗ್ಗೆ

ನನ್ನನ್ನು ನೋಡಲು ಬರುತ್ತಿದ್ದವರು ಮೊದಲು ಮಿರ್ಜಾರವರು. ಒಂದೊಂದು ವೇಳೆ ನನ್ನ ಕೋಣೆಯ ಹೊರಗಡೆ ಕುದುರೆಯ ಮೇಲೆ ಕುಳಿತು ಕಿಟಕಿಯ ಮೂಲಕ ನನ್ನನ್ನು ಮಾತನಾಡಿಸುತ್ತಿದ್ದರು. ಈ ಪ್ರತಿದಿನದ ಸಂತೋಷ ನಾನು ಆಸ್ಪತ್ರೆ ಬಿಟ್ಟು ಮನೆಗೆ ಬರುವವರೆಗೂ ನನ್ನ ಪಾಲಿಗೆ ಬಂದಿತು

* * *

ಈಗ ಒಂದು ಕಡೆಯ ದೃಶ್ಯಕ್ಕೆ ಬರುತ್ತೇನೆ.

ಮಿರ್ಜಾರವರು ವಿಶ್ರಾಂತರಾಗಿದ್ದಾರೆ. ಜವಾಬ್ದಾರಿ ಸರಕಾರದ ಘೋಷಣೆಯನ್ನು ಶ್ರೀ ಜಯಚಾಮರಾಜೇಂದ್ರ ಒಡೆಯರವರು ಮಾಡತಕ್ಕ ವರಾಗಿದ್ದಾರೆ.

ಆ ದಿನ ಮಿರ್ಜಾರವರ ಮನೆಯಿಂದ ನನಗೆ ಅವರ ಕಾರು ಬಂದಿತು. ನನ್ನನ್ನು ಕರೆದುಕೊಂಡು ಹೋಗುವುದಕ್ಕಾಗಿ. ಮಧ್ಯಾಹ್ನ ಒಂದು ಘಂಟೆ ಅಥವಾ ಒಂದೂವರೆ ಘಂಟೆ ಇರಬಹುದು. ಕಾರು ಮಿರ್ಜಾರವರ ಬಂಗಲೆಯ ಗೇಟಿನಲ್ಲಿ ಹೊಕ್ಕು ಅವರ ಆಫೀಸ್ ರೂಮಿನ ಬಳಿಗೆ ಹೋಗುವ ವೇಳೆಗೆ ಅವರು ಆ ರೂಮಿನ ಬಾಗಿಲ ಚೌಕಟ್ಟಿನಲ್ಲಿ ನಿಂತಿದ್ದಾರೆ, ನನ್ನನ್ನು ಬರ ಮಾಡಿಕೊಳ್ಳುವುದಕ್ಕಾಗಿ. ನಾನು ಕಾರಿನಿಂದ ಇಳಿದ ಕೂಡಲೆ ಅವರು ಷೇಕ್ ಹ್ಯಾಂಡ್ ಕೊಡಲು ಕೈ ಚಾಚಿ ನನ್ನ ಬಳಿ ಬಂದು, ನಗುಮುಖ ದಿಂದ ಹೇಳಿದರು :

ಮಿರ್ಜಾ : You must be the happiest man in the world today.''

ನಾನು : "ಅದೇನು ಸಂದರ್ಭ ?"

ಮಿರ್ಜಾ : "ಅಗೋ—ಕೇಳುತ್ತಿಲ್ಲವೆ ರೇಡಿಯೊ? ಶ್ರೀಮನ್ಮಹಾರಾಜರು ನೀನು ಇಷ್ಟು ವರ್ಷವೂ ಬೇಡುತ್ತಿದ್ದದ್ದನ್ನು ಕೊಡುತ್ತಿದ್ದಾರೆ. ಜವಾಬ್ದಾರಿ ಸರಕಾರ ಬಂದಿತು. ಅದೇ ತಾನೆ ನಿನ್ನ ತಪಸ್ಸು ?"

ಆ ಮಾತು ಅಂದಿನಿಂದ ಇಂದಿನವರೆಗೂ ದಿನದಿನವೂ ಕ್ಷಣಕ್ಷಣವೂ ನನ್ನೆದುರಿಗೆ ಬಂದು ನಿಲ್ಲುತ್ತಿದೆ.

೧೩

# ಶೇಕ್‌ದಾರ್ ಗುಂಡಪ್ಪನವರು

ವಂಶವೃತ್ತಾಂತವನ್ನೂ, ಅದಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳನ್ನೂ ಬೇರೆ ದಾಖಲೆ ರುಜುವಾತುಗಳನ್ನೂ ಬರೆದಿಡುವ ವಾಡಿಕೆ ನಮ್ಮ ಜನದಲ್ಲಿಲ್ಲ. ಯೂರೋಪಿಯನ್ನರಲ್ಲಿ ಈ ವಾಡಿಕೆ ಕೊಂಚಮಟ್ಟಿಗಾದರೂ ಉಂಟೆಂದು ತೋರುತ್ತದೆ. ಅವರಲ್ಲಿ ಎಳೆ ಮಗುವಿನ ಬ್ಯಾಪ್ಟಿಸ್ಮ್ ಎಂದರೆ ಜ್ಞಾನದೀಕ್ಷೆಯ ಸಂಸ್ಕಾರ ನಡೆದದ್ದಕ್ಕೆ ಆ ಮಗು ಹುಟ್ಟಿದ ಪ್ರದೇಶದ ಗೊತ್ತಾದ ಚರ್ಚಿನಲ್ಲಿ ದಾಖಲೆ ಇರುತ್ತದೆ. ಅದರಿಂದ ಹುಟ್ಟಿದ ದಿನ, ತಂದೆತಾಯಿ ಮೊದಲಾದ ವಿವರಗಳನ್ನು ಗುರುತು ಮಾಡಲಾಗುತ್ತದೆ. ವಯಸ್ಕರಾದವರು ಡಯರಿ ಅಥವಾ ದಿನಚರಿಯ ಪುಸ್ತಕ ಬರೆದಿಡುವ ಪದ್ಧತಿಯಿದೆ. ಇದರಿಂದ ಹೆಚ್ಚು ಸಂಗತಿಗಳು ತಿಳಿದುಬರುತ್ತವೆ. ಇದಕ್ಕಿಂತ ಹೆಚ್ಚಾಗಿ, ಒಬ್ಬರೊಬ್ಬರಿಗೆ ಬರೆದ ಕಾಗದಗಳನ್ನು ಜೋಪಾನವಾಗಿ ಜೋಡಿಸಿಡುವ ಅಭ್ಯಾಸವುಂಟು. ಹೀಗೆ ನಾಲ್ಕಾರು ಬಗೆಯ ದಾಖಲೆಗಳಿಂದ ಒಂದು ಮನೆತನದ ಚರಿತ್ರೆಯನ್ನು ಕೊಂಚಮಟ್ಟಿಗೆ ನಿಷ್ಕರ್ಷೆಮಾಡಿ ತಿಳಿಯಲಾಗುತ್ತದೆ. ಈ ಸಣ್ಣ ಸಾಮಗ್ರಿ ದೇಶಚರಿತ್ರೆಗೆ ಕೊಂಚಮಟ್ಟಿಗೆ ಮೂಲಸಾಮಗ್ರಿಯಾಗುತ್ತದೆ. ನಮ್ಮ ಜನ ಈ ಸಂದರ್ಭವನ್ನು ಗ್ರಹಿಸಿ ತಮ್ಮ ತಮ್ಮ ಮನೆತನಗಳಿಗೆ ಸಂಬಂಧಪಟ್ಟ ಮುಖ್ಯ ಮುಖ್ಯ ಸಂಗತಿಗಳನ್ನು ಬರಹದಲ್ಲಿ ಗುರುತಿಸಿಡುವುದು ಮುಂದಿನ ಪೀಳಿಗೆಗೆ ಉಪಯುಕ್ತವಾದೀತು.

## ಅಹನ್ಯಹನಿ

ನನ್ನ ವಂಶದ ಚರಿತ್ರೆಗೆ ನಾನು ಹಿರಿಯರಿಂದ ಆಗಾಗ ಕೇಳಿದ ಸಂಗತಿಗಳ ವಿನಾ ಹೆಚ್ಚು ತಿಳಿದುಕೊಳ್ಳಲು ನನಗೆ ಯಾವ ಮೂಲಸಾಮಗ್ರಿಯೂ ಇಲ್ಲ. ನನಗೆ ತಿಳಿದುಬಂದಿರುವುದರಿಂದ ಇಷ್ಟು ಹೇಳಬಹುದು.

ನನ್ನ ಪೂರ್ವಿಕರಲ್ಲಿ ಮಹತ್ತ್ವಕ್ಕೇರಿದವರು ಯಾರೂ ಕಾಣುವುದಿಲ್ಲ. ಪಂಡಿತರು ಯಾರೂ ಇದ್ದಂತೆ ತೋರುವುದಿಲ್ಲ: ಅಧಿಕಾರಸ್ಥರಿರಲಿಲ್ಲ, ಮಂತ್ರಿತ್ವ

ಸೇನಾಪತಿತ್ವ ಮೊದಲಾದ ಭಾರಿ ಹುದ್ದೆಗಳಿಗೆ ಹತ್ತಿದವರಿರಲಿಲ್ಲ. ಶೂರರೂ ಸಾಹಸಿಗಳೂ ಇರಲಿಲ್ಲ. ಐಶ್ವರ್ಯವಂತೂ ಅವರಲ್ಲಿ ಯಾರಿಗೂ ತಿಳಿದದ್ದಲ್ಲ. ಅವರಲ್ಲಿ ದಾನಧರ್ಮಗಳನ್ನು ಮಾಡಿದವರೂ ಲೋಕೋಪಕಾರಿಗಳೂ ತಪಸ್ವಿಗಳೂ ಇದ್ದಂತೆ ನನಗೆ ತೋರುವುದಿಲ್ಲ. ನನ್ನ ಪೂರ್ವಿಕರೆಲ್ಲ ಸಾಮಾನ್ಯರು; ಸಾಮಾನ್ಯ ಜನರಲ್ಲಿ ಅತಿಸಾಮಾನ್ಯರು; ಎಲ್ಲರಂತೆ ಹೊಟ್ಟೆಹೊರೆದುಕೊಂಡು ಜೀವನ ನಡಸಿದವರು. ಅವರಿಗೆ ಅಂದಂದಿನ ಜೀವನ ನಡಸುತ್ತಿದ್ದದ್ದೇ ಮಹಾಸಾಧನೆಯಾಗಿದ್ದಿರಬೇಕು. ಉಂಡರು, ಕೈಗೆ ಬಂದದ್ದನ್ನು; ಅದರಲ್ಲಿ ಅಂಥಾದ್ದು ಬೇಕು, ಇಂಥಾದ್ದು ಬೇಕು ಎಂಬ ಮೇಲ್ಮೇಲಿನ ಕೋರಿಕೆಗಳಿಗೆ ಅವರಿಗೆ ಪುರಸತ್ತಿರಲಿಲ್ಲವೆನಿಸುತ್ತದೆ. ಅವರ ಮನಸ್ಸು ಮೇಲ್ಮಟ್ಟಕ್ಕೆ ಹತ್ತಲೇ ಇಲ್ಲ. ದೇಹಧಾರಣೆ ಮಾಡಿದರು; ಅಷ್ಟರಲ್ಲಿ ಅವರಿಗೆ ತೃಪ್ತಿ. ವಂಶ ಬೆಳಸಿದರು. ಆ ಕಾಲದಲ್ಲಿ ರೂಢಿಯಾಗಿದ್ದ ಮದುವೆ ಮುಂಜಿಗಳನ್ನೂ, ಹಬ್ಬಹರಿದಿನಗಳನ್ನೂ ಆಯಾ ಸಂದರ್ಭದಲ್ಲಿ ಅನುಕೂಲಿಸಿದಂತೆ ನಡಸಿದರು. ಕಾಲ ಬಂದಾಗ ಕಣ್ಣು ಮುಚ್ಚಿದರು. ಇದೇ ಅವರ ಬಾಳು. ನನ್ನ ವಂಶವನ್ನು ಕುರಿತು ನಾನು ಹೆಮ್ಮೆಯಾದದ್ದನ್ನೇನೂ ಹೇಳಿಕೊಳ್ಳುವಂತಿಲ್ಲ.

## ನಮ್ರತೆ

ಅವರಲ್ಲಿತ್ತೆಂದು ನಾನು ತಿಳಿದುಕೊಂಡಿರುವ ಒಂದು ಗುಣವೇನೆಂದರೆ ನಮ್ರತೆ. ಅವರು ತಮಗಿದ್ದ ಮಿತಿಗಳನ್ನು ಕಂಡುಕೊಂಡಿದ್ದರು. ಹೆಚ್ಚು ತಲೆ ಹರಟೆಗೆ ಹೋಗಲಿಲ್ಲ. "ಬಡವ, ನೀ ಮಡಗಿದ ಹಾಗಿರು"—ಇದನ್ನು ಅವರು ಗ್ರಹಿಸಿದ್ದರು.

ಅವರು ವಂಶಕಥೆಯನ್ನು ಬರೆದಿಡದೆಹೋದದ್ದಕ್ಕೆ ಈ ನೈಜವಾದ ನಮ್ರತೆ ಒಂದು ಕಾರಣವಿರಬಹುದು. "ನಾವೇನು ಮಹಾ? ನಮ್ಮದೇನು ಮಹಾ?" ಎಂಬುದು ಅವರ ಭಾವನೆ.

ಇದರ ಜೊತೆಗೆ ಇನ್ನೊಂದು ಕಾರಣ ಸೇರಿರಬಹುದು. ನನ್ನ ಪೂರ್ವಿಕರು ಜೀವನಕ್ಕಾಗಿ ಪರದಾಡಬೇಕಾಗಿದ್ದವರು. ಅಂದಂದಿನ ಊಟಕ್ಕಾಗಿ ದುಡಿಯುವುದೇ ಅವರಿಗೆ ಸಾಕಾಗಿತ್ತು. ಒಂದು ಕಡೆ ಸಾವಧಾನವಾಗಿ ಕುಳಿತು ತಮ್ಮ ಜ್ಞಾಪಕಗಳನ್ನು ಮೇಲಕ್ಕೆತ್ತಿಕೊಂಡು ಬರೆಯುವಷ್ಟು ವಿಶ್ರಾಂತಿ ಅವರಿಗೆ ಇರಲಿಲ್ಲ. ಬರವಣಿಗೆಯ ಕೆಲಸ ಸಾಮಾನ್ಯ ಮನುಷ್ಯನಿಗೆ ಭಾರಿಯ ಕೆಲಸ, ಪ್ರಯಾಸದ್ದೆನಿಸುತ್ತದೆ. ಆ ಕೆಲಸಕ್ಕೆ ಪುರಸತ್ತೂ ನೆಮ್ಮದಿಯೂ ಬೇಕು.

ಊಟದ ಆಲೆದಾಟದಲ್ಲಿರುವವರಿಗೆ ಲೇಖನಕಾರ್ಯಕ್ಕೆ ಅವಶ್ಯವಾದ ವಿರಾಮ ಹೇಗೆ ದೊರೆಯಬೇಕು? ಹೀಗೆ ನನ್ನ ಪೂರ್ವಿಕರಿಗೆ ಸ್ವಂತ ಚರಿತ್ರೆಯನ್ನು ಬರೆಯುವ ಉತ್ಸಾಹವಿಲ್ಲದೆಹೋಯಿತು.

## ಸರ್ವಸಾಮಾನ್ಯ

ಆಲೋಚನೆ ಮಾಡಿದರೆ, ಅವರ ಲೇಖನನ್ಯೂನತೆಯಿಂದ ಯಾರಿಗೂ ನಷ್ಟವೇನೂ ಆಗಿಲ್ಲವೆಂದು ನನ್ನ ಮನಸ್ಸಿಗೆ ತೋರುತ್ತದೆ. ದೇಶಚರಿತ್ರೆ ದೊಡ್ಡ ವಸ್ತುವೆಂಬುದೇನೋ ನಿಜ. ವಂಶಚರಿತ್ರೆಗಳು ಅದಕ್ಕೆ ಅವಶ್ಯವಾದ ಮೂಲಸಾಮಗ್ರಿ ಎಂಬುದೂ ನಿಜ. ಆದರೆ ಈ ವಿಷಯವನ್ನು ಮತ್ತೊಂದು ಪಕ್ಕದಿಂದ ನೋಡೋಣ. ದೇಶದಲ್ಲಿ ಹುಟ್ಟಿದ ಪ್ರತಿಯೊಬ್ಬ ಮನುಷ್ಯನೂ ತನ್ನ ತನ್ನ ಕುಲಾನುಪೂರ್ವಿಯನ್ನು ಬರೆದಿಡುತ್ತಹೋದರೆ ಅದನ್ನೆಲ್ಲ ಓದು ವವರಾರು? ಸಂಗ್ರಹ ಮಾಡುವವರಾರು? ವಿಶೇಷಾಂಶವಿರುವುದು ದೇಶದ ಸಾವಿರ ಮನೆತನಗಳ ಪೈಕಿ ಒಂದರ ಚರಿತ್ರೆಯಲ್ಲಿ, ಅಥವಾ ಎರಡರ ಚರಿತ್ರೆ ಯಲ್ಲಿ . ಮಿಕ್ಕ ಒಂಭೈನೂರ ತೊಂಭತ್ತೆಂಟು ಮನೆಗಳ ಕಥೆ ಒಟ್ಟಿನ ಮೇಲೆ ಒಂದರಂತೆ ಇನ್ನೊಂದಿರುತ್ತದೆ. ರಾಮಣ್ಣನ ಮನೆಯಲ್ಲಿ ಹಿಟ್ಟು, ಸಾರು. ಭೀಮಣ್ಣನ ಮನೆಯಲ್ಲಿಯೂ ಅದೇ, ಶಾಮಣ್ಣನ ಮನೆಯಲ್ಲಿಯೂ ಅದೇ; ಸಾರಿಗೆ ಬದಲು ಹುಳಿಯಿರಬಹುದು, ಇನ್ನೊಬ್ಬನ ಮನೆಯಲ್ಲಿ ಗೊಜ್ಜಿರ ಬಹುದು. ಹೀಗೆ ಸಣ್ಣ ಬದಲಾವಣೆಗಳಿರಬಹುದೇ ಹೊರತು ಹಿಟ್ಟಿನ ಮುದ್ದೆ ಸರ್ವಸಾಮಾನ್ಯ. ಈ ಸರ್ವಸಾಮಾನ್ಯ ದರ್ಜೆಗೆ ಸೇರಿದ್ದವರು ನನ್ನ ಪೂರ್ವಿಕರು.

ಈಗ ಆ ಪೂರ್ವಿಕರ ಕಥೆಗೆ ಹೊರಡುತ್ತೇನೆ.

ನನಗೆ ತಿಳಿದಿರುವುದು ನನ್ನ ಮುತ್ತಜ್ಜಂದಿರು ಶೇಕ್‌ದಾರ್ ಗುಂಡಪ್ಪ ನವರ ಕಾಲದಿಂದ ಈಚಿನ ಸಂಗತಿ. ಅವರಿಗೆ ಹಿಂದಿನ ಸಂಗತಿ ನನಗೆ ತಿಳಿ ಯದು. ಅದನ್ನು ತಿಳಿಯಪಡಿಸಬಲ್ಲ ಹಿರಿಯರು ಈಗ ಯಾರೂ ಬದುಕಿರು ವಂತಿಲ್ಲ.

## ದ್ರಾವಿಡ ಜನಾಂಗ

ದ್ರಾವಿಡ ಬ್ರಾಹ್ಮಣ ವರ್ಗದಲ್ಲಿ ಅನೇಕ ಪಂಗಡಗಳುಂಟು: ವಡಮ, ವಾದ್ಯಮ, ಅಷ್ಟಸಹಸ್ರ, ಬೃಹಚ್ಚರಣ ಇತ್ಯಾದಿ. ಬೃಹಚ್ಚರಣ ಎಂಬುದರಲ್ಲಿ

ಒಳಪಂಗಡಗಳುಂಟು : ಕಂಡ್ರಮಾಣಿಕ್ಯ, ಪಳಮಾನೂರು, ಅರವದಳ, ಮೊಳ ನಾಡು, ಮುಂಜಾಪುತ್ತೂರು, ತಿರುವಣ್ಣಾಮಲೈ ಬೃಹಚ್ಚರಣರು ಇತ್ಯಾದಿ. ಸರ್ ಕೆ. ಶೇಷಾದ್ರಿ ಅಯ್ಯರ್‌ರವರು ಕಂಡ್ರಮಾಣಿಕ್ಯ. ಕಂಡ್ರಮಾಣಿಕ್ಯ ಎಂಬುದು ಒಂದು ಅಗ್ರಹಾರ. 'ವೇದಾಂತ ಪರಿಭಾಷಾ' ಎಂಬ ಪ್ರಸಿದ್ಧ ಗ್ರಂಥವನ್ನು ಬರೆದ ಧರ್ಮರಾಜಾಧ್ವರಿ ಎಂಬ ಮಹಾವಿದ್ವಾಂಸನು ಕಂಡ್ರ ಮಾಣಿಕ್ಯದವನು. ಮೈಸೂರಿನ ಚೀಫ್ ಜಸ್ಟಿಸ್ ಆಗಿದ್ದ ಚಂದ್ರಶೇಖರ ಅಯ್ಯರ್‌ರವರು ಪಳಮಾನೂರು ಬೃಹಚ್ಚರಣರು. ಸರ್ ಪಿ. ಎಸ್ ಶಿವ ಸ್ವಾಮಯ್ಯರು ಮೊಳನಾಡು. ನಾವು ಮುಂಜಾಪುತ್ತೂರು ಬೃಹಚ್ಚರಣರು.

## ಮುಂಜಾಪುತ್ತೂರು

"ಮುಂಜಾ" ಎಂಬ ಪದ "ಮುಂಜಾ" ಎಂಬ ಸಂಸ್ಕೃತ ಮಾತಿಗೆ ಸಂಬಂಧ ಪಟ್ಟಿದ್ದಂತೆ. ಆದರಿಂದಲೇ ಕನ್ನಡದ "ಮುಂಜಿ" ಬಂದಿರುವುದು. "ಮುಂಜಾ" ಎಂಬುದು ಒಂದು ಬಗೆಯ ದರ್ಭೆಹುಲ್ಲು. ಅದರಿಂದಲೇ "ಮೌಂಜೀ". ಇದು ಉಪನಯನದ ಕಾಲದಲ್ಲಿ ವಟುವಿಗೆ ಸುತ್ತಿಸುವ ಉಡುದಾರ—ಮೇಖಲಾ. ಅತಿ ಪುರಾತನ ಕಾಲದಲ್ಲಿ ಈ ಮೌಂಜೀಸಂಸ್ಕಾರವು ಹೆಣ್ಣುಮಕ್ಕಳಿಗೆ ಕೂಡ ವಿಹಿತವಾಗಿತ್ತಂತೆ. ಏನಂಚ, ಮುಂಜಾಪುತ್ತೂರು ವೈದಿಕ ಕರ್ಮಗಳಿಗೆ, ವಿಶೇಷವಾಗಿ ದರ್ಭೆಗೆ ಸಂಬಂಧಪಟ್ಟಿದ್ದವರ ಗ್ರಾಮ. ಯಾವ ಊರಿನಲ್ಲಿ "ಮುಂಜಾ" ಹುಲ್ಲೂ "ಪುತ್ತೂ" ಎಂದರೆ ಹುತ್ತಗಳೂ ಇದ್ದವೋ ಅದು ಮುಂಜಾಪುತ್ತೂರು. ಮುಂಜಾಪುತ್ತೂರು ಗ್ರಾಮ ಈಗಲೂ ಇದೆ—ತಿರುಚಿನಾ ಪಲ್ಲಿಯಿಂದ ಆಚೆಗೆ. ತಿರುಚನಾಪಲ್ಲಿಗೂ ಸಿದ್ಧರ್‌ಕೋಯಿಲ್ ಎಂಬ ಊರಿಗೂ ನಡುವೆ. ಪೂರ್ವಕಾಲದಲ್ಲಿ ಅದು ವೈದಿಕ ಬ್ರಾಹ್ಮಣರ ಅಗ್ರಹಾರ. ಈಗ ಸುಮಾರು ನಲವತ್ತೈದು ಮನೆಗಳಿರುವ ಹಳ್ಳಿ.

ಅಲ್ಲಿದ್ದ ವೈದಿಕ ಬ್ರಾಹ್ಮಣರು ಜೀವನೋಪಾಯ ಹುಡುಕುವುದರಲ್ಲಿ ಊರು ಬಿಟ್ಟರು.

ಬೃಹಚ್ಚರಣದವರನ್ನು "ಬೃಹದಾಚರಣರು" ಎಂದು ಕರೆಯುತ್ತಿದ್ದ ರಂತೆ. ಬೃಹದಾಚರಣ ಎಂದರೆ ದೊಡ್ಡ ದೊಡ್ಡ ಆಚಾರಗಳುಳ್ಳವರು ಎಂದರ್ಥ : ಕರ್ಮನಿಷ್ಠರು, ಯಜ್ಞಯಾಗಾದಿ ಕರ್ಮಶ್ರದ್ಧೆಯುಳ್ಳವರು. ಅವರಲ್ಲಿ ಕೆಲವರು ವೇದದಲ್ಲಿಯೂ ಮೀಮಾಂಸಾದಿ ಶಾಸ್ತ್ರಗಳಲ್ಲಿಯೂ ಪಾರಂಗತರಾಗಿದ್ದವರು ; ಗ್ರಂಥಗಳನ್ನು ಬರೆದವರು.

## ಜೀವನಾರ್ಥ

ಸುಮಾರು ಆರುನೂರು ವರ್ಷಗಳ ಹಿಂದೆ, ಬಹುಶಃ ಕ್ರಿ. ಶ. ಹದಿನಾಲ್ಕನೆಯ ಶತಮಾನದ ಸುಮಾರಿನಲ್ಲಿ—ನನ್ನ ಪೂರ್ವಿಕರು ಮೈಸೂರು ಸೀಮೆಗೆ ಬಂದಿರಬೇಕು. ಅವರು ಜೀವನಾರ್ಥಿಗಳಾಗಿಯೇ ಬಂದರೆಂದು ನನ್ನ ಊಹೆ. ಅದು ವಿಜಯನಗರ ಸ್ಥಾಪನೆಯಾದ ತರುವಾಯದ ಕಾಲ. ಆ ಕಾಲದಲ್ಲಿ ಭೂಸ್ವತ್ತಿಲ್ಲದ ಬ್ರಾಹ್ಮಣಜನ ಇಲ್ಲಿಗಲ್ಲಿಗೆ ಅಲೆದಾಡುತ್ತಿದ್ದರೆಂದು ತೋರುತ್ತದೆ. ಹಾಗೆ ಒಂದು ಗೊತ್ತಾದ ನೆಲೆಮನೆಯಿಲ್ಲದೆ ಜೀವನೋಪಾಯಕ್ಕಾಗಿ ಅಲೆದಾಡಿದರು. ಅಂಥ ಅಲೆದಾಟೆಗರ ಸಂಗಡಗಳಲ್ಲಿ ಮಂಜಾಪುತ್ತೂರಿನದು ಒಂದು.

ಅವರು ಕೊಯಮತ್ತೂರು ಶಾಲ್ಯದ ಜಿಲ್ಲೆಗಳ ಮಾರ್ಗವಾಗಿ ಮೈಸೂರು ಸೀಮೆಗೆ ಬಂದವರು. ಅವರಲ್ಲಿ ಕೆಲವರು ಬೆಂಗಳೂರು ಜಿಲ್ಲೆಯ ಆನೇಕಲ್ ಸರ್ಜಾಪುರ ಮಾರ್ಗದಲ್ಲಿ ಬಂದವರು. ಕೆಲವರು ಮಾರ್ಗದಲ್ಲಿ ಅಲ್ಲಲ್ಲೇ ನೆಲಸಿದರು. ಆನೇಕಲ್ಲಿನ ಸಮೀಪದಲ್ಲಿರುವ ಗುಮ್ಮಳಾಪುರವೆಂಬ ಹಳ್ಳಿ ಅವರು ನೆಲಸಿದ ಸ್ಥಳಗಳಲ್ಲಿ ಒಂದು. ಆ ಕಾಲದಲ್ಲಿ ಗುಮ್ಮಳಾಪುರ ಕನ್ನಡ ವಿದ್ವಾಂಸರಿಗೂ ವೀರಶೈವ ಮತಸ್ಥರಿಗೂ ಒಂದು ಕೇಂದ್ರಸ್ಥಾನವಾಗಿತ್ತೆಂದು ತೋರುತ್ತದೆ. ಆ ಊರಿನ ಸುತ್ತಮುತ್ತ ಅನೇಕ ಪ್ರಾಚೀನ ಶಿವಾಲಯಗಳ ಮತ್ತು ಮಠಗಳ ಅವಶೇಷಗಳು ಉಳಿದುಕೊಂಡಿವೆ. ಈ ಸ್ಥಳದಲ್ಲಿ ಬಾಳಿದ ನನ್ನ ಜಾತಿಯ ಮನುಷ್ಯ ಒಬ್ಬಾತ ವೆಂಕಟಶರ್ಮ ಎಂಬುವನು. ಈತ ಕನ್ನಡ ಕವಿ ರುದ್ರಭಟ್ಟನ 'ಜಗನ್ನಾಥವಿಜಯ' ಕಾವ್ಯಕ್ಕೆ ವ್ಯಾಖ್ಯಾನ ಬರೆದಿದ್ದಾನೆಂದು ಪ್ರಾಕ್ತನ ವಿಮರ್ಶ ವಿಚಕ್ಷಣ ಮಹಾಮಹೋಪಾಧ್ಯಾಯ ರಾ. ನರಸಿಂಹಾಚಾರ್ಯರು ಒಂದು ಕಡೆ ಹೇಳಿದ್ದಾರೆ.

## ರುಮಾಲೆ ಶಾಮಭಟ್ಟ

ಈ ವೆಂಕಟಶರ್ಮನು ನನ್ನ ವಂಶದ ಪೂರ್ವಿಕನಲ್ಲ. ನನ್ನ ಪೂರ್ವಿಕ ಶಾಮಭಟ್ಟ ಎಂಬಾತ. ಈತ ಜನ್ಮತಃ ವೈದಿಕವೃತ್ತಿಯವನು. ಆದರೆ ಜೀವಿಕೆ ನಡೆಸಲು ಆತ ಒಂದು ಶಾನುಭೋಗಿಕೆಯನ್ನು ಸಂಪಾದಿಸಿ ಲೌಕಿಕನಾಗಿ ಕಛೇರಿಯ ನಿಮಿತ್ತದಿಂದ ರುಮಾಲೆ ಧರಿಸಬೇಕಾಗಿ ಬಂತು. ಅಂದಿನಿಂದ ಆತನನ್ನು ಆತನ ಜನ "ರುಮಾಲೆ ಶಾಮಭಟ್ಟ" ಎಂದು ಕರೆದರು. ಕೆಲಮಂದಿ ಹಾಸ್ಯಕ್ಕಾಗಿ ಆತನನ್ನು ಹಾಗೆ ಕರೆದಿರಬಹುದು. ಬೇರೆ ಕಡೆ

ನಾನು ಹೇಳಿದ್ದೇನೆ: ಪ್ರಾತಃಸ್ಮರಣೀಯರಾದ ನಮ್ಮ ಛಪ್ಪಲ್ಲಿ ವಿಶ್ವೇಶ್ವರ ಶಾಸ್ತ್ರಿಗಳನ್ನು

ಶಾಸ್ತ್ರಿಭಾವಮುಪಾಕೃತ್ಯ
ಮೇಸ್ತ್ರಿಭಾವಮುಪಾಗತಃ ॥

ಎಂದು ಲಘುಹಾಸ್ಯ ಮಾಡಿದರೆಂದು. ಹಾಗಾಯಿತು ನನ್ನ ಪೂರ್ವಿಕ ರುಮಾಲೆ ಶಾಮಭಟ್ಟರ ಪಾಡು.

ಶಾಮಭಟ್ಟರ ತರುವಾಯ ಎಷ್ಟೋ ತಲೆಮಾರು ಕಳೆದ ಮೇಲೆ ಹುಟ್ಟಿದವರು ಗುಂಡಪ್ಪನವರು. ಅವರ ತಂದೆಯ ಹೆಸರು ವೆಂಕಟಗಿರಿಯಪ್ಪ (ಅಥವಾ ವೆಂಕಟರಮಣಯ್ಯ) ಎಂದು. ಆ ಮಹಾನುಭಾವನಿಗೆ ಅಣ್ಣತಮ್ಮಂದಿರಿದ್ದಿರಬೇಕು. ಅವರ ವಂಶ ಈಗಲೂ ಪ್ರವರ್ಧಮಾನವಾಗಿದೆ.

ಗುಂಡಪ್ಪನವರು ಯಾವ ಊರಿನಲ್ಲಿ ಹುಟ್ಟಿದರೋ ನನಗೆ ಗೊತ್ತಿಲ್ಲ. ಅವರ ಜ್ಞಾತಿಸಹೋದರರು ಮೂರು ನಾಲ್ಕು ಹಳ್ಳಿಗಳಲ್ಲಿದ್ದರು; ತಟ್ಟನಹಳ್ಳಿ, ಮೊಟ್ಟನಹಳ್ಳಿ, ಸೋಮತ್ತನಹಳ್ಳಿ—ಇವು ನಾನು ಕೇಳಿರುವ ಹಳ್ಳಿಗಳು. ಗುಂಡಪ್ಪನವರು ಬಹುಶಃ ಸೋಮತ್ತನಹಳ್ಳಿಯವರು.

## ಕಾಮಾಕ್ಷಮ್ಮನವರು

ಗುಂಡಪ್ಪನವರ ಹೆಂಡತಿ ಸರ್ಜಾಪುರದ ಕಡೆಯವರು. ಆಕೆಯ ಹೆಸರು ಕಾಮಾಕ್ಷಮ್ಮ. ಕಾಮಾಕ್ಷಮ್ಮನ ತಂದೆ ಅನುಕೂಲಸ್ಥರಾಗಿದ್ದಿರಬೇಕು. ಆತ ತಮ್ಮ ಮಗಳ ಅರಿಶಿನ ಕುಂಕುಮದ ಖರ್ಚಿಗೆಂದು ಮುತ್ತಾನಲ್ಲೂರು ಎಂಬ ಕಡೆ ಎರಡು ಎಕರೆ ಗದ್ದೆಯನ್ನು ಬಳುವಳಿಯಾಗಿ ಕೊಟ್ಟಿದ್ದದ್ದಲ್ಲದೆ, ಆಕೆಯ ನಿತ್ಯದ ಗೌರೀಪೂಜೆಗಾಗಿ ಒಂದು ಚಿನ್ನದ ಶ್ರೀಚಕ್ರ ಮತ್ತು ಲಕ್ಷ್ಮೀವಿಗ್ರಹಗಳನ್ನೂ ಒಂದು ಜೊತೆ ದೀಪಸ್ತಂಭಗಳನ್ನೂ ಕೊಟ್ಟಿದ್ದರು; ಅವು ನಮ್ಮ ಮನೆಯಲ್ಲಿ ವಂಶಪಾರಂಪರ್ಯವಾಗಿ ನಾವು ಅವತರಿಸಿದ ಕಾಲದವರೆಗೂ ಕಾಣ ಬರುತ್ತಿದ್ದುವು. ಆ ಶ್ರೀಚಕ್ರ ಸುಮಾರು ಎರಡಂಗುಲ ಅಗಲ, ಮೂರಂಗುಲ ಉದ್ದ ಇತ್ತು. ಅದರ ಒಂದರ್ಧದಲ್ಲಿ ಮಹಾಲಕ್ಷ್ಮಿಯ ಪ್ರತಿಮೆ ಮಿಕ್ಕರ್ಧದಲ್ಲಿ ಶ್ರೀಚಕ್ರದ ರೇಖೆ ಇದ್ದದ್ದನ್ನು ನಾನು ನೋಡಿದ್ದೇನೆ. ಪ್ರತಿದಿನ ದೇವತಾರ್ಚನೆಯಾಗುತ್ತಿತ್ತು. ಅದರ ಅಂಗವಾಗಿ ನನ್ನ ತಾಯಿ ಶುಕ್ರವಾರ ಶುಕ್ರವಾರ ಅದಕ್ಕೆ ಕುಂಕುಮಾರ್ಚನೆ ಮಾಡುತ್ತಿದ್ದರು. ಕಾಲಕ್ರಮದಲ್ಲಿ ಅದು ಸವೆದು ಮುಟ್ಟಲು ಅಸಾಧ್ಯವೆಂದು ತೋರಿದಾಗ,

ಅದಕ್ಕೆ ಇನ್ನಷ್ಟು ಚಿನ್ನ ಹಾಕಿ ಹೊಸ ವಿಗ್ರಹವನ್ನು ತಯಾರುಮಾಡಿಸಿದರು. ಆಮೇಲೆ ಎಷ್ಟೋ ದಿವಸ ಅದು ಇತ್ತು. ನನ್ನ ತಂದೆ ತೀರಿಕೊಂಡ ಬಳಿಕ ದೇವರ ಪೂಜೆಗಾಗಿ ಒಬ್ಬ ಬ್ರಾಹ್ಮಣನನ್ನು ಗೊತ್ತುಮಾಡಿದ್ದೆವು. ನನ್ನ ತಾಯಿಯ ಗಮನವೆಲ್ಲ ಅಡಿಗೆಮನೆಯ ಮೇಲಿದ್ದದ್ದರಿಂದ ದೇವರ ಸಾಮಾನನ್ನು ಅವರು ಉಸ್ತುವಾರಿ ನೋಡಲಾಗಲಿಲ್ಲ. ವಿಗ್ರಹ ಎಲ್ಲಿ ಹೋಯಿತೋ!

ಆ ದೀಪಸ್ತಂಭಗಳು ಮೂರುನಾಲ್ಕಡಿ ಎತ್ತರ ಇದ್ದವು. ಹಿತ್ತಾಳೆಯ ಕಂಭಗಳು ಮಜಬೂತಾಗಿದ್ದವು. ಎಣ್ಣೆ ಹಾಕುವ ತಟ್ಟೆಗೆ ಎಂಟು ಮುಖವಾಗಿ ಬತ್ತಿಹಾಕಬಹುದಾಗಿತ್ತು. ನಮ್ಮ ಊರಿನಲ್ಲಿ ಯಾರ ಮನೆಯಲ್ಲಿ ಮದುವೆ ಮುಂಜಿ ನಡೆದರೂ ಹಸೆಯ ಮುಂದೆ ಇರಿಸಲು ಈ ದೀಪಗಳನ್ನು ತೆಗೆದುಕೊಂಡುಹೋಗುತ್ತಿದ್ದರು. ಹಾಗೆ ತೆಗೆದುಕೊಂಡುಹೋದವರ ಪೈಕಿ ಯಾರೋ ಒಬ್ಬರು ಹಿಂತಿರುಗಿಸಲು ಮರೆತರು.

ಇನ್ನು ಉಳಿದದ್ದು ಜಮೀನು. ಅದರ ಫಸಲನ್ನು ಕಾಲಕಾಲಕ್ಕೆ ವಸೂಲು ಮಾಡುವವರು ಯಾರೂ ಗೊತ್ತಾಗಿರಲಿಲ್ಲ. ಕಾಮಾಕ್ಷಮ್ಮನವರ ಮೂರನೆಯ ಮಗ ನನ್ನ ಚಿಕ್ಕತಾತ ಶೀನಪ್ಪನವರು ವರ್ಷಕ್ಕೆ ಎರಡು ಮೂರು ಸಾರಿ ಸರ್ಜಾಪುರ ಪ್ರಾಂತಕ್ಕೆ ಬಂದುಹೋಗುತ್ತಿದ್ದರು. ಅವರಿಗೆ ಜ್ಞಾಪಕ ಬಂದಾಗ ಅವರು ಹೋಗಿ ವಸೂಲು ಮಾಡುವರು. ನನ್ನ ತಂದೆ ಮೂರು ವರ್ಷಕ್ಕೋ ನಾಲ್ಕು ವರ್ಷಕ್ಕೋ ಒಂದು ಸಾರಿ ಆ ಪ್ರಾಂತ ತಿರುಗಾಡಿದಾಗ ಅವರು ಗುತ್ತಿಗೆ ಕೇಳುವರು. ರೈತರು "ಅವರ ಕೈಗೆ ಕೊಟ್ಟುಬಿಟ್ಟೆ" ಎಂದು ಜವಾಬು ಹೇಳುವರು. ಇವರ ಕೈಗೆ ಬಂದದ್ದೂ ಖಂಡಿತವಿಲ್ಲ, ಅವರ ಕೈಗೆ ಬಂದದ್ದೂ ಖಂಡಿತವಿಲ್ಲ. ಹೀಗೆ ಕೆಲವು ಕಾಲ ನಡೆದು ಕಡೆಗೆ ಮುತ್ತಾನಲ್ಲೂರು ಗದ್ದೆಯನ್ನು ಮಾರಿಬಿಟ್ಟದ್ದು ನನಗೆ ಮಸಕುಮಸಕಾಗಿ ಜ್ಞಾಪಕವಿದೆ.

## ಶೇಕ್‌ದಾರ್ ಗುಂಡಪ್ಪನವರು

ಈಗ ಗುಂಡಪ್ಪನವರ ಕಥೆಗೆ ಹೋಗೋಣ. ಅವರು ದೇವನಹಳ್ಳಿ ತಾಲ್ಲೂಕಿನ ಸೋಮತ್ತನಹಳ್ಳಿ ಮೊದಲಾದ ಹಳ್ಳಿಗಳಲ್ಲಿದ್ದವರು. ಅವರು ಎಷ್ಟುಮಟ್ಟಿನ ವಿದ್ಯಾವಂತರೋ ನನಗೆ ತಿಳಿಯದು. ನಾನು ಕೇಳಿರುವ ಸಂಗತಿಯಿಂದ ಅವರಲ್ಲಿ ಪಾಂಡಿತ್ಯಕ್ಕಿಂತ ಕಾರ್ಯಸಾಮರ್ಥ್ಯ ಮುಖ್ಯ

ವಾಗಿತ್ತೆಂದು ತೋರುತ್ತದೆ. ಅವರು ಮೊದಮೊದಲು ಯಾವುದೋ ತಾಲ್ಲೂಕು ಕಛೇರಿಯ ಸಣ್ಣ ಸಣ್ಣ ಉದ್ಯೋಗಗಳಲ್ಲಿದ್ದಿರಬೇಕು. ಅವರಿಗೆ ಮಹೋದ್ಯೋಗ ಬಂದದ್ದು ಬ್ರಿಟಿಷ್ ಕಮಿಷನರುಗಳ ಕಾಲದ ಆದಿ ಭಾಗದಲ್ಲಿ.

ಟಿಪ್ಪುಸುಲ್ತಾನ್ ನವಾಬ ಹತನಾದದ್ದು 1799ರಲ್ಲಿ ಅಲ್ಲವೆ? ಆದಾದ ಮೇಲೆ ಬಾಲಕ ಮುಮ್ಮಡಿ ಕೃಷ್ಣರಾಜರ ಒಡೆಯವರ ಕಾಲ 1831ರವರೆಗೆ. ಅನಂತರ ಬ್ರಿಟಿಷ್ ಕಮಿಷನ್ನಿನ ಆಡಳಿತ. ಬಹುಶಃ ಸರ್ ಮಾರ್ಕ್ಸ್ ಕಬ್ಬನ್ ಅವರ ಕಾಲ. ಆಗ ಗುಂಡಪ್ಪನವರನ್ನು ಮುಳುಬಾಗಲಿಗೆ ಶೇಕ್‌ದಾರ್ ಹುದ್ದೆಗೆ ಕರಸಿಕೊಂಡರು. ಅದು ಬಹುಶಃ ಇಂದಿಗೆ ನೂರಿಪ್ಪತ್ತು ವರ್ಷ ಹಿಂದಿನ ಮಾತು: 1860ರ ಸುಮಾರಿನಲ್ಲಿರಬಹುದು. ಇದು ನನ್ನ ಅಂದಾಜು.

## ಸೈನ್ಯಸಂಚಾರ

ಆ ಕಾಲದಲ್ಲಿ ಬ್ರಿಟಿಷರು ಬಹು ಜಾಗರೂಕರಾಗಿದ್ದದ್ದು ಸ್ವಾಭಾವಿಕ. ಈ ದೇಶ ಅವರಿಗೆ ಪರಿಚಿತವಾದದ್ದಲ್ಲ. ಜನ ಯಾವ ಹೊತ್ತಿನಲ್ಲಿ ಹೇಗೆ ನಡೆದುಕೊಂಡಾರೋ, ತಮ್ಮ ಶತ್ರುಗಳಾದ ಮರಾಠರೂ ನೈಜಾಮನ ಕಡೆಯವರೂ ಏನು ಸಂಚು ನಡೆಸಿಯಾರೋ, ಜನ ಎಲ್ಲಿ ದಂಗೆಯೆದ್ದು ತಮ್ಮ ಮೇಲೆ ತಿರುಗಿಬಿದ್ದಾರೋ! ಈ ವಿಧವಾದ ಭೀತಿ ಬ್ರಿಟಿಷರಿಗೆ ಸಹಜವಾಗಿತ್ತು. ಆದದ್ದರಿಂದ ದೇಶದ ಸಂರಕ್ಷಣೆಗೂ ಶಾಂತಿಸ್ಥಿತಿಗೂ ಅವರು ಹೆಚ್ಚು ಗಮನ ಕೊಡುತ್ತಿದ್ದರು. ಈ ಆಲೋಚನೆಯ ಒಂದು ರೂಪ ಸೈನ್ಯಸಂಚಾರ. ಬ್ರಿಟಿಷರ ದಂಡು ಬೆಂಗಳೂರಿನಲ್ಲಿ ನೆಲಸಿತ್ತು. ತಿಂಗಳಿಗೊಂದು ಸಾರಿ ಈ ದಂಡು ಮದರಾಸಿಗೆ ಹೋಗತಕ್ಕದ್ದು. ಪ್ರತಿಯಾಗಿ ಮದರಾಸಿನಿಂದ ಒಂದು ದಂಡು ಬೆಂಗಳೂರಿಗೆ ಬರತಕ್ಕದ್ದು. ದಂಡಿನ ಸಂಚಾರ ಕಾಲುನಡಿಗೆಯಿಂದ. ಹೀಗೆ ಸೈನ್ಯ ಪದೇಪದೇ ನೆಲತುಳಿದು ಹೋಗುತ್ತಿದ್ದದ್ದನ್ನು ಜನ ನೋಡಿದರೆ ಅವರಿಗೆ ಬ್ರಿಟಿಷ್ ಸರಕಾರದ ದರ್ಪದ ಮತ್ತು ಶಕ್ತಿಯ ಕಲ್ಪನೆಯುಂಟಾಗುತ್ತಿತ್ತು ಮತ್ತು ಸೈನಿಕರಿಗೂ ಬೇಸರವಾಗದೆ ಅಂಗಾಂಗ ವ್ಯಾಯಾಮವಾಗಿ ಒಂದು ಶಿಸ್ತು ಉಂಟಾಗುತ್ತಿತ್ತು. ಈ ತಾತ್ಪರ್ಯದಿಂದ ಬೆಂಗಳೂರು ಮದರಾಸುಗಳ ನಡುವೆ ಸೈನ್ಯ ಒಂದೆರಡು ದಿನ ತಂಗುವುದಕ್ಕಾಗಿ ಎರಡು ಮೂರು ಕಡೆ ಏರ್ಪಾಟಿತ್ತು. ಅಂಥ ಸೈನ್ಯದ ಮೊಕ್ಕಾಂ ಜಾಗಗಳಲ್ಲಿ ಮುಳಬಾಗಲಲ್ಲಿ ಒಂದು. ಇದು ಬೆಂಗಳೂರಿನಿಂದ ಸರಿಯಾಗಿ ಅರವತ್ತನೆಯ

ಮೈಲಿಯಲ್ಲಿದೆ. ಅಲ್ಲಿ ಸೈನ್ಯ ಎರಡು ಮೂರು ದಿನ ಮೊಕ್ಕಾಂ ಮಾಡುವುದು ವಾಡಿಕೆ.

ಸೈನ್ಯದ ಮೊಕ್ಕಾಂ ಎಂದರೆ ತೀನಿಯ ಏರ್ಪಾಟು ಮುಖ್ಯವಾದದ್ದು. ಮೊದಲು ಡೇರಾಗಳನ್ನು ಹಾಕುವ ಜನ (ಕಲಾಸಿಗಳು) ಬರುವರು. ಅವರು ಗುಡಾರಗಳನ್ನು ಅಣಿಮಾಡಿದ ಬಳಿಕ ಸೈನ್ಯ, ಅದರೊಡನೆ ಆಫೀಸರುಗಳು. ಮುಳುಬಾಗಲಿನ ಪೂರ್ವದಿಕ್ಕಿನಲ್ಲಿ ಊರಿನಿಂದ ಎರಡು ಮೈಲಿ ದೂರದ ಮೈದಾನದಲ್ಲಿ ಸೈನ್ಯದ ಬಿಡಾರ. ಆ ಬಿಡಾರಕ್ಕೆ ತೀನಿ ಪಾನಕಗಳನ್ನು ಒದಗಿಸುವುದು ಕಮಿಸೇರಿಯಟ್ ಇಲಾಖೆಯ ಕೆಲಸ. ಇದು ಶೇಕ್‌ದಾರ್ ಗುಂಡಪ್ಪನವರ ಪಾಲಿಗೆ ಬಂದಿತು. ಎಂದರೆ, ಕುರಿ ಕೋಳಿ ಹಾಲು ಮೊಸರು ರವೆ ಸಕ್ಕರೆ ಅಕ್ಕಿ ಬೆಲ್ಲ ಇವುಗಳನ್ನು ಸರಬರಾಜು ಮಾಡಲು ಕಂಟ್ರಾಕ್ಟುದಾರರನ್ನು ನಿಯಮಿಸಿ ಅವರಿಂದ ಸರಬರಾಜು ನಡೆಯುವಂತೆ ನೋಡಿಕೊಳ್ಳುವ ಜವಾಬ್ದಾರಿ ಗುಂಡಪ್ಪನವರಿಗೆ ಬಂದಿತು. ಈ ದೊಡ್ಡ ಜವಾಬ್ದಾರಿಯನ್ನು ಅವರು ಬಹು ಚೆನ್ನಾಗಿ ನಿರ್ವಾಹಮಾಡಿರಬೇಕೆಂದು ಆಗಿನ ಕಥೆಗಳಿಂದ ತೋರುತ್ತದೆ.

## ತೀನಿ ಏರ್ಪಾಟು

ನನಗೆ ಶೇಕ್‌ದಾರ್ ಗುಂಡಪ್ಪನವರ ವಿಷಯ ತಿಳಿದುಬಂದಿರುವುದು ಆ ಕಾಲದ ಒಬ್ಬ ಹಿರಿಯರಿಂದ. ಆ ಹಿರಿಯರ ಹೆಸರು ಕೋಗಿಲೇರಿ ಶೀನಪ್ಪನವರೆಂದು. ಅವರ ಮನೆ ನಮ್ಮ ಮನೆಗೆ ಸಮೀಪವಾಗಿ ಅದೇ ಸಾಲಿನಲ್ಲಿತ್ತು. ಶೀನಪ್ಪನವರು ಭೂಸ್ವತ್ತುಂಟಾದವರು, ಮತ್ತು ಶಾನುಭೋಗರು. ಈ ಶೀನಪ್ಪನವರಿಗೆ ನನ್ನಲ್ಲಿ ತುಂಬ ಪ್ರೀತಿ. ಹತ್ತಿರ ಕೂಡಿಸಿಕೊಂಡು ನನ್ನ ಮುತ್ತಜ್ಜನ ಗುಣಾತಿಶಯಗಳನ್ನು ವರ್ಣಿಸುವರು.

ಗುಂಡಪ್ಪನವರು ಆಕಾರದಲ್ಲಿ ಸಾಮಾನ್ಯ. ಎತ್ತರವಲ್ಲ, ಗಿಡ್ಡೂ ಅಲ್ಲ. ದೇಹ ಕೊಂಚ ಸ್ಥೂಲವಾದದ್ದು, ಬಣ್ಣ ಎಣ್ಣೆಗೆಂಪು. ಅವರ ಮುಖಭಾವ ಜನಕ್ಕೆ ತಿಳಿದಮಟ್ಟಿಗೆ ಕೊಂಚ ಭಯವುಂಟುಮಾಡತಕ್ಕದ್ದು. ಯಾವಾಗಲೂ ಹುಮ್ಮಸ್ಸು. ನಗು ಅಪರೂಪ. ಇದು ಅಧಿಕಾರದ ಹುದ್ದೆಯನ್ನು ಚಲಾಯಿಸುತ್ತಿದ್ದಾಗ. ಬೇರೆ ಸಮಯದಲ್ಲಿ ವಿಹಿತರಾಗಿದ್ದದ್ದು ಮಾತ್ರವೇ ಅಲ್ಲದೆ ಸಹಾನುಭೂತಿ ವಾತ್ಸಲ್ಯಗಳೂ ಇದ್ದವು.

## ದಿನಚರಿ

ಗುಂಡಪ್ಪನವರು ಬೆಳಗ್ಗೆ ಬಿಸಿಲು ಹುಟ್ಟುವುದಕ್ಕೆ ಮುಂಚೆ ಊರ ಮಧ್ಯದ ದೊಡ್ಡ ಕುಂಟೆಯೆಂಬ ವಿಸ್ತಾರವಾದ ನಾಲ್ಕು ಕಡೆ ಸೋಪಾನ ಕಟ್ಟಿದ ಪುಷ್ಕರಣಿಯಲ್ಲಿ ಸ್ನಾನ ಮಾಡುವರು. ಆಹ್ನಿಕ ಮಾಡಿಕೊಳ್ಳುವರು. ಹಣೆಯ ತುಂಬ ವಿಭೂತಿ ಹಚ್ಚುತ್ತಿದ್ದರು. ಆಹ್ನಿಕ ಮುಗಿದ ಕೂಡಲೆ ಒಂದು ಜುಬ್ಬಾ ಧರಿಸಿ ಅದರ ಮೇಲೆ ಅಂಗರೇಖೆ ತೊಟ್ಟು, ಒಂದು ಅಂಗವಸ್ತ್ರವನ್ನು ಕೊರಳ ಸುತ್ತ ಹಾಕಿಕೊಂಡು ಪೇಟೆಗೆ ಬರುವರು. ನಡುಪೇಟೆಯಲ್ಲಿ ನಿಂತು ಅಲ್ಲಿಯ ವರ್ತಕರನ್ನು ಹೆಸರು ಹಿಡಿದು ಗಟ್ಟಿಯಾಗಿ ಕೂಗುವರು—ಏಕವಚನದಲ್ಲಿ, ತೆಲುಗಿನಲ್ಲಿ.

ಗುಂ : "ಸಂಜೀವಾ—"

(ಇದು ನಂಬೂರಿ ಸಂಜೀವಶೆಟ್ಟಿಯ ಹೆಸರು.)

ಸಂ : "ಸ್ವಾಮಿ ?"

ಗುಂ : "ನಯ್ಯುಂದೇಮಿರಾ ?" (ತುಪ್ಪ ಇದೆಯೇನೋ ?)

ಸಂ : "ಉಂದಿ ಸ್ವಾಮಿ" (ಇದೆ ಸ್ವಾಮಿ.)

ಗುಂ : "ತೀಸಿಕೋನಿರಾ—ಎನ್ನಾಳ್ಳಿದೋ ಕಂಪು ಪಟ್ಟಿಸಯ್ಯಿಂಡೇದಿ—ನೀಕಂಪುಕು ಅಗ್ಗಿ ಪೆಟ್ಟ ರಿ !" (ತೆಗೆದುಕೊಂಡು ಬಾ—ಎಷ್ಟು ದಿವಸದ್ದೋ, ವಾಸನೆ ಹಿಡಿದುಬಿಟ್ಟಿರುತ್ತದೆ. ನಿನ್ನ ವಾಸನೆಗೆ ಬೆಂಕಿಯಿಟ್ಟರು.)

ಸಂ : "ಲೇದಂಡಿ, ಕೊತ್ತದಿ" (ಇಲ್ಲ ಸ್ವಾಮಿ—ಹೊಸದು.)

(ಒಂದು ಮಡಕೆಯಲ್ಲಿ ತಂದಿರಿಸುವನು.)

ಗುಂ : "ಬೆಲ್ಲಂ ಮುದ್ದ ಎಕ್ಕಡ ?" (ಬೆಲ್ಲದ ಮುದ್ದೆ ಎಲ್ಲಿ ?)

ಹೊಸ ಬೆಲ್ಲದ ಮುದ್ದೆಯೊಂದು ಹಾಜರಾಗುವುದು. ಆ ಸೀಮೆಯಲ್ಲಿ ಬೆಲ್ಲದ ಅಚ್ಚುಗಳಿಲ್ಲ. ಆ ಕಾಲಕ್ಕೆ ಕಬ್ಬಿಣದ ಗಾಣ ಬಂದಿರಲಿಲ್ಲ ; ಮರದ ಗಾಣಗಳೇ ಉಪಯೋಗದಲ್ಲಿದ್ದವು. ಅದರಿಂದ ಬಂದ ಬೆಲ್ಲ ಸೊಗಸಾದದ್ದು. ಕೊಳೆಯಿಲ್ಲದೆ ಎಷ್ಟು ದಿನವಾದರೂ ಹುಳಿಹಿಡಿಯದೆ ನಾಲಗೆಗೆ ಚೊಕ್ಕಟವೆನಿಸುವಂತೆ ಇರುತ್ತಿತ್ತು. ಇಂಥ ಬೆಲ್ಲದ ಮುದ್ದೆಯೊಂದನ್ನು ಸಂಜೀವಶೆಟ್ಟಿ ತಂದಿರಿಸುವನು.

ಗುಂಡಪ್ಪನವರು ತಮ್ಮ ಕೈಮುಷ್ಟಿಯನ್ನು ಮೇಲಕ್ಕೆತ್ತಿ ಮುದ್ದೆಯ ಮೇಲೆ ಬಡಿಯುವರು. ಅದು ನಾಲ್ಕೈದು ಹೋಳಾಗುವುದು. ಒಂದು ಹೋಳನ್ನು ಎರಡು ಬೆಟ್ಟನಿಂದ ಮೇಲಕ್ಕೆತ್ತಿ ತುಪ್ಪದ ಗಡಿಗೆಯಲ್ಲದ್ದಿ,

ಅನಾಮತ್ತಾಗಿ ತಮ್ಮ ಬಾಯೊಳಕ್ಕೆ ಇಳಿಬಿಡುವರು. ಅದು ಚೆನ್ನಾಗಿತ್ತೆಂದರೆ ಅವನಿಗೆ ಕಂಟ್ರಾಕ್ಟ್.

ಇನ್ನೊಂದಂಗಡಿಗೆ ಹೋಗುವರು.

ಗುಂ : "ವರೇ ರಂಗಡು ! ರವ ಉಂದೇಮಿರಾ ?" (ಎಲಾ ರಂಗ, ರವೆ ಇದೆಯೇನೊ ?)

ರಂ : "ಉಂದಿ ಸ್ವಾಮಿ" (ಇದೆ ಸ್ವಾಮಿ.)

## ರಾಕ್ಷಸ ವಿದ್ಯೆ

ಗುಂ : "ತೇ, ಚೂತಾಮು" (ತೆಗೆದುಕೊಂಡು ಬಾ, ನೋಡೋಣ.)

ಆತ ಒಂದು ತವಾ ಬಾಂಡ್ಲಿಯಲ್ಲಿ ರವೆ ಒಂದು ಅಚ್ಚೇರಿನಷ್ಟು ಹಾಕಿ ಅವರ ಮುಂದೆ ಇರಿಸುವನು. ಅವರು ರವೆಯನ್ನು ಕೈಯಿಂದೆತ್ತಿ ಹೀಗೂ ಹಾಗೂ ತಿರುಗಿಸಿ ನೋಡಿ ಕೇಳುವರು :

ಗುಂ : "ನಯ್ಯುಂದೋ ?" (ತುಪ್ಪ ಇದೆಯೊ ?)

ರಂಗಯ್ಯಶೆಟ್ಟಿ ಒಂದು ತುಪ್ಪದ ಗಡಿಗೆಯನ್ನು ತಂದಿಡುವನು. ಗುಂಡಪ್ಪನವರು ಗಡಿಗೆಯೊಳಕ್ಕೆ ಕೈಹಾಕಿ ಒಂದು ದೊಡ್ಡ ಬೊಗಸೆ ತುಪ್ಪವನ್ನೆತ್ತಿ ರವೆಯೊಳಕ್ಕೆ ಹಾಕಿ ಕಲಸಿ ಆ ಹಸಿರವೆಯನ್ನು ಉಂಡೆಮಾಡಿ ಬಾಯೊಳಕ್ಕೆ ಬಿಟ್ಟುಕೊಳ್ಳುವರು.

* * *

ನಾನು "ಹಸಿ ರವೆ ತಿನ್ನುತ್ತಾರೆಯೆ ಎಲ್ಲಾದರೂ ?" ಎಂದು ಕೇಳಿದ್ದಕ್ಕೆ ಶೀನಪ್ಪನವರು "ನಾನು ಸುಳ್ಳು ಹೇಳುತ್ತೇನೆಯೇ ? ಹೇಗಿದ್ದ ನಿಮ್ಮ ಮುತ್ತಾತ ! ಭೀಮಸೇನನ ಹೊಟ್ಟೆಯಲ್ಲಿ ಎಲ್ಲ ಅರಗಿಹೋಗುತ್ತದೆ" ಎಂದರು.

ಗುಂಡಪ್ಪನವರು ಇನ್ನೆರಡು ಹೆಜ್ಜೆ ಮುಂದೆ ಹೋಗುವರು. ಪೇಟೆಯ ಚೌಕ. ಸುತ್ತಮುತ್ತಲ ಹಳ್ಳಿಗಳಿಂದ ಹೈನು ಮಾಡುವ ಜನ ಮೊಸರು, ತುಪ್ಪ ಹೊತ್ತು ಅಲ್ಲಿಗೆ ಬರುವರು. ಗುಂಡಪ್ಪನವರು ಅದರಲ್ಲಿ ಒಂದು ಮಡಕೆಯನ್ನು ಕೈಗೆ ತೆಗೆದುಕೊಂಡು ಮೇಲಕ್ಕೆತ್ತಿ ಗಟಗಟ ಕುಡಿಯುವರು. ಒಪ್ಪಿತವಾದರೆ ಐವತ್ತು ಮಡಕೆ ಮೊಸರಿಗೆ ಗಿರಾಕಿ.

## ಜಬರ್ದಾರಿ

ಇಂಥಾ ರಾವಣ, ಬಕಾಸುರ ಕಥೆಗಳನ್ನು ನನ್ನ ಮುತ್ತಜ್ಜನ ವಿಷಯದಲ್ಲಿ ಹೇಳುತ್ತಿದ್ದರು. ಗ್ರಾಮದೇವತೆಯ ಪೂಜೆಯಾದ ನನಗೆ ಈ ಕಥೆಗಳನ್ನು

ಹೇಳಿ ಹೆಮ್ಮೆಯುಂಟಾಗುತ್ತದೆ. ನನ್ನ ಮುತ್ತಜ್ಜನಾದರೂ ಚೆನ್ನಾಗಿ ಊಟ ಮಾಡಿದ್ದನಲ್ಲ.

ಮೇಲಣ ಮಾತಿನ ಜಬರ್ದಾರಿಯಿಂದ ಗುಂಡಪ್ಪನವರು ದರ್ಪದಿಂದ ಅಧಿಕಾರ ನಡೆಸಿದರೆಂದು ಊಹಿಸಬಹುದು.

ಅವರಿಗೆ ಒಳ್ಳೆಯವರೆಂದೂ, ಸಮರ್ಥರೆಂದೂ ಹೆಸರು ಬಂದಿತ್ತು. ಅವರೇ ಮುಳುಬಾಗಲಿನಲ್ಲಿ ನಮ್ಮ ಮನೆಯನ್ನು ಸ್ಥಾಪಿಸಿದವರು. ಆ ಮನೆಯಲ್ಲಿ ವಿಶೇಷವಾಗಿ ಅನ್ನಸಂತರ್ಪಣೆ ನಡೆಯುತ್ತಿತ್ತಂತೆ. ಬ್ರಾಹ್ಮಣರಿಗೆ ಮಾತ್ರವಲ್ಲದೆ ಇತರ ವರ್ಣಗಳವರಿಗೂ ಅಲ್ಲಿ ಭೋಜನವಾಗುತ್ತಿತ್ತಂತೆ. ಅದು ಅನ್ನದಾನದ ಮನೆಯೆಂದು ಹೆಸರಾಗಿತ್ತು. ನನ್ನ ಪೂರ್ವಿಕರ ಮನೆಯನ್ನು ನಾನು ಕಳೆದುಕೊಳ್ಳುವವರೆಗೂ ಆ ಮನೆ "ಶೇಕ್‌ದಾರ್ ಗುಂಡಪ್ಪಗಾರಿಲ್ಲು" ಎಂದು ಪ್ರಸಿದ್ಧವಾಗಿತ್ತು.

* * *

ಶೇಕದಾರ್ ಗುಂಡಪ್ಪನವರಿಗೆ ನಾಲ್ವರು ಗಂಡುಮಕ್ಕಳೂ, ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಗಂಡುಮಕ್ಕಳಲ್ಲಿ ನಾಲ್ಕನೆಯಾತ ವೆಂಕಟರಮಣಯ್ಯ ಬಾಲ್ಯದಲ್ಲಿಯೇ ತೀರಿಕೊಂಡನಂತೆ. ಸ್ಫುರದ್ರೂಪಿಯೆಂದೂ, ಬುದ್ಧಿವಂತನೆಂದೂ ಜನ ಹೇಳುತ್ತಿದ್ದರಂತೆ. ಈ ಅಭಿಮಾನವನ್ನಿಟ್ಟುಕೊಂಡೇ ನನ್ನ ಅಜ್ಜ, ನನ್ನ ತಂದೆಗೆ ವೆಂಕಟರಮಣಯ್ಯ ಎಂಬ ಹೆಸರು ಕೊಟ್ಟದ್ದು—ಎಂದು ನನ್ನ ಕುಟುಂಬದಲ್ಲಿ ಹೇಳುತ್ತಿದ್ದರು.

ಹೆಣ್ಣುಮಕ್ಕಳಲ್ಲಿ ಒಬ್ಬಾಕೆಯನ್ನು ಮಾಲೂರಿನ ಸಂಪಂಗಿರಾಮಯ್ಯ ಎಂಬುವರಿಗೆ ಲಗ್ನಮಾಡಿಕೊಟ್ಟಿದ್ದರು. ಆಕೆ ಕೊಂಚ ಕಾಲದ ಮೇಲೆ ತೀರಿಕೊಂಡಿದ್ದರು. ಎರಡನೆಯಾಕೆಯ ಹೆಸರಾಗಲಿ ಬೇರೆ ಸಂಗತಿಯಾಗಲಿ ನನಗೆ ತಿಳಿಯದು.

ಉಳಿದ ಗಂಡುಮಕ್ಕಳು ಮೂವರು :

1. ಶೇಷಗಿರಯ್ಯ.
2. ರಾಮಣ್ಣ.
3. ಶೀನಣ್ಣ (ಶೀನಪ್ಪ).

ಇವರ ಪ್ರಸ್ತಾವಕ್ಕೆ ಹೋಗುವ ಮುನ್ನ ಗುಂಡಪ್ಪನವರನ್ನು ಕುರಿತು ಹೇಳಬೇಕಾದ ಮಾತು ಇನ್ನೊಂದಿದೆ. ಅವರ ಪತ್ನಿ ಕಾಮಾಕ್ಷಮ್ಮನವರು ತಮ್ಮ ಕಡೆಯ ಮಗ ವೆಂಕಟರಮಣಯ್ಯ ತೀರಿಕೊಂಡ ಒಂದೆರಡು ತಿಂಗಳೊಳ

ಗಾಗಿ ಇಹಲೋಕವನ್ನು ಬಿಟ್ಟರು. ಆ ಪುತ್ರವಿಯೋಗ ದುಃಖದಿಂದ ಎಂದು ಅವರಿವರು ಹೇಳಿದ್ದನ್ನು ನಾನು ಕೇಳಿದ್ದೇನೆ.

ಆಕೆ ಹೋದಮೇಲೆ ಆಕೆಯ ಮೂವರು ಸೊಸೆಯರೂ ಒಂದೆರಡು ವರ್ಷ ಬಾಳಿ ಕಾಲಾಧೀನರಾದರು. ಎರಡನೆಯ ಮಗ ರಾಮಣ್ಣನವರ ಪತ್ನಿ ಲಕ್ಷ್ಮಿದೇವಮ್ಮ ಎಂಬಾಕೆ. ಆಕೆ ಬೆಟ್ಟಹಲಸೂರಿನ ಸುಬ್ಬಯ್ಯ ಎಂಬುವರ ಮಗಳು. ಆಕೆ ಒಂದು ಮಗುವಾಗಿ ಒಂದೆರಡು ವರ್ಷ ಕಳೆದ ಬಳಿಕ ತೀರಿಕೊಂಡಳು; ಆ ಮಗುವೂ ಹೋಯಿತು.

## ರಾಮಣ್ಣನವರ ಕೋಪ

ಈ ದುಃಖವನ್ನು ಗುಂಡಪ್ಪನವರು ತಡೆಯಲಾರದೆ ಮಕ್ಕಳಿಗೆ ಮತ್ತೆ ಮದುವೆ ಮಾಡಿಕೊಳ್ಳಬೇಕೆಂದು ಆಗಾಗ ಒತ್ತಾಯಪಡಿಸುತ್ತಿದ್ದರು. ರಾಮಣ್ಣನವರಿಗೆ ಈ ಹಿತೋಪದೇಶ ಹಿತವೆನಿಸಲಿಲ್ಲ. ತಂದೆಯ ಮೇಲೆ ಕೋಪ.

ಹೀಗಿದ್ದಾಗ ಒಂದು ದಿನ ಗುಂಡಪ್ಪನವರು ಆಯುಷ್ಕರ್ಮ ಮಾಡಿಸಿಕೊಂಡು ಸ್ನಾನದ ಮನೆಗೆ ಬಂದು ಒಂದೆರಡು ತಂಬಿಗೆ ನೀರು ತಲೆಯ ಮೇಲೆ ಹಾಕಬೇಕೆಂದು ರಾಮಣ್ಣನವರನ್ನು ಕೇಳಿದರು. ರಾಮಣ್ಣನವರು ಮುನಿಸಿನಲ್ಲಿದ್ದರು—ತಂದೆ ಪದೇ ಪದೇ ವಿವಾಹದ ಮಾತೆತ್ತುತ್ತಾರೆಂದು. ಆ ಮುನಿಸಿನಿಂದ ಬೇಹುಷಾರಿ ಬಂತು. ತಂದೆ "ನೀರು ಹಾಕು" ಎಂದು ಹೇಳಿದಾಗ ತಂಬಿಗೆಯನ್ನು ಹಂಡೆಯೊಳಗೆ ಅದ್ದಿ ನೀರನ್ನು ಹಾಗೆಯೇ ತೆಗೆದು ತಂದೆಯ ಮೇಲೆ ಸುರಿದರು. ನೀರು ಹಂಡೆಯಲ್ಲಿ ತಳಮಳಗುಟ್ಟುತ್ತಿತ್ತು. ಈ ನೀರು ಬೋಳುತಲೆಯ ಮೇಲೆ ಬಿದ್ದರೆ ಏನಾಗಬೇಕು? ಮುದುಕ ಕಿರಿಚಿಕೊಂಡ. ಇತರ ಜನ ಓಡಿಬಂದು ಉಪಚಾರ ಮಾಡಿದರು. ಎಲ್ಲ ಸರಿಯಾಯಿತು—ಒಂದು ಸಂಗತಿಯ ವಿನಾ. ರಾಮಣ್ಣನವರು ತಮ್ಮ ಮುನಿಸಿನಿಂದ ಎಂಥ ಪ್ರಮಾದವಾಯಿತೆಂದು ಕಂಡುಕೊಂಡರು. ಅದರ ಫಲಿತಾಂಶ ಇನ್ನೂ ದೊಡ್ಡ ಪ್ರಮಾದ. ಅವರು ಮನೆ ಬಿಟ್ಟು ಬೆಟ್ಟದಲ್ಲಿ ನಾಚಾರಮ್ಮನ ಗುಡಿಯ ಗವಿಯನ್ನು ಸೇರಿದರು. ಅಲ್ಲಿ ಸುತ್ತಮುತ್ತಲ ಗ್ರಾಮಗಳವರು ತಂದುಕೊಟ್ಟ ಅಕ್ಕಿ, ಬೇಳೆ, ಹಾಲು, ಮೊಸರು—ಈ ಪದಾರ್ಥಗಳಿಂದ ತಾವೇ ಅಡಿಗೆ ಮಾಡಿಕೊಂಡು ಊಟ ಮಾಡುತ್ತ ಅಲ್ಲಿಯೇ ಇದ್ದುಬಿಟ್ಟರು.

ಗುಂಡಪ್ಪನವರಿಗೆ ತುಂಬಾ ಕಾಯಿಲೆಯಾಯಿತು. ಹಣ್ಣು ಹಣ್ಣು ಮುದುಕರಾದರು. ಹತ್ತಿರ ಇದ್ದ ಯಾರನ್ನೋ ಕರೆದು "ಅವಸಾನ ಬಂದ ಹಾಗೆ ತೋರುತ್ತದೆ. ಈಗಲಾದರೂ ಅವನು ಮನೆಗೆ ಬಂದಾನೇನೋ ಹೇಳಿ ನೋಡಿ"—ಎಂದರಂತೆ. ಸ್ನೇಹಿತರು ಆ ಮಾತಿನಂತೆ ಬೆಟ್ಟಕ್ಕೆ ಹೋಗಿ ರಾಮಣ್ಣನವರನ್ನು ಕರೆದು ಸಂಗತಿ ತಿಳಿಸಿದರಂತೆ. ಅವರು "ಈಗ ಆ ಪ್ರಸ್ತಾಪ ಎತ್ತುವುದಿಲ್ಲವೊ ? ಎತ್ತುವುದಿಲ್ಲವೆಂದು ನೀವು ಹೇಳಿದರೆ ಬಂದೇನು. ಆ ಪ್ರಸ್ತಾಪ ಮಾಡಿಯಾರೆಂದು ನಿಮಗೆ ತೋರಿದರೆ ಬಂದದಾರಿ ಹಿಡಿಯಿರಿ. ಶವ ಸಾಗಿಹೋದ ಮೇಲೆ ನನಗೆ ಹೇಳಿ"—ಎಂದರಂತೆ.

ಅವರು ವಾಸ್ತವವಾಗಿ ಹೀಗೆ ಹೇಳಿದರೋ ಅಥವಾ ಅವರ ಮಾತಿನ ತಾತ್ಪರ್ಯವನ್ನು ಅವರ ಧ್ವನಿಯಿಂದ ಕೇಳಿದವರು ಹೀಗೆ ಗ್ರಹಿಸಿದರೋ ಗೊತ್ತುಮಾಡಲು ನನಗೆ ಸಾಧ್ಯವಿಲ್ಲ.

## ವಾತ್ಸಲ್ಯ

ನನಗೆ ತಿಳಿದಮಟ್ಟಿಗೆ ರಾಮಣ್ಣನವರು ಮೃದುಸ್ವಭಾವದವರು. ಧರ್ಮಿಷ್ಠರು, ದಯಾವಂತರು. ಅವರು ಒಂದು ವೇಳೆ ಹಾಗೆ ಕಟುವಾಗಿ ತಂದೆಯ ವಿಷಯದಲ್ಲಿ ಮಾತನಾಡಿದ್ದಿದ್ದರೆ ಅದೊಂದು ಅಸಾಮಾನ್ಯವಾದ ಉದ್ವೇಗದ ಮಾತೆಂದು ನನಗನ್ನಿಸುತ್ತದೆ. ಆ ಉದ್ವೇಗ ತನ್ನ ತಂದೆಯನ್ನು ಕುರಿತದ್ದಲ್ಲ; ತನಗಾಗಿದ್ದ ಪತ್ನಿವಿಯೋಗವನ್ನು ಕುರಿತದ್ದು. ಈ ಪ್ರಸ್ತಾವಕ್ಕೆ ಮುಂದೆ ಹಿಂತಿರುಗಬೇಕಾದೀತು. ಇದನ್ನು ಹೇಳಿದ್ದರ ಕಾರಣ ಗುಂಡಪ್ಪ ನವರ ಸ್ವಭಾವವನ್ನು ಸೂಚಿಸುವುದಕ್ಕಾಗಿ. ಮಗನ ವಿಷಯದಲ್ಲಿ ಅವರಿಗೆ ಅತ್ಯಂತ ವಾತ್ಸಲ್ಯ.

* * *

ಮಕ್ಕಳಿಗೆ ತಂದೆಯಿಂದ ಭಯ, ತಾಯಲ್ಲಿ ಸಲುಗೆ. ಇದಕ್ಕೆ ನಿದರ್ಶನ ವಾಗಿ ಒಂದೆರಡು ಕಥೆ ನನ್ನ ಚಿಕ್ಕತಾತಂದಿರು ಹೇಳಿದ್ದನ್ನು ಇಲ್ಲಿ ಅನುವಾದ ಮಾಡಬಹುದು.

ಗುಂಡಪ್ಪನವರ ಮನೆಯ ಪಕ್ಕದಲ್ಲಿ ಮೂರು ದೊಡ್ಡದೊಡ್ಡ ಹುಣಿಸೆ ಮರಗಳು ಬೆಳೆದು ಹಬ್ಬಿಕೊಂಡಿದ್ದವು. ಹುಡುಗರಿಗೆ ಅಭ್ಯಂಜನ ಮಾಡಿಸ ಬೇಕೆಂದು ಕಾಮಾಕ್ಷಮ್ಮನವರು ಹಂಡೆಯಲ್ಲಿ ನೀರು ಕಾಯಿಸಿ ಎಣ್ಣೆಹಿಡಿದು ಮಕ್ಕಳನ್ನು ಕೂಗಿ ಕರೆಯುತ್ತಿದ್ದರು. ಇದರ ಸುಳಿವನ್ನು ತಿಳಿದಕೂಡಲೆ

ನಾಲ್ವರು ಮಕ್ಕಳೂ ಒಬ್ಬೊಬ್ಬರು ಒಂದೊಂದು ಹುಣಿಸೆಸುರವನ್ನು ಹಿಡಿದು ಹತ್ತುತ್ತಿದ್ದರು. ತಾಯಿ ಇವರನ್ನು ಕಾಣದೆ ಮನೆಯ ಹೊರಕ್ಕೆ ಬಂದು ಕೂಗುವರು. ಇವರು ಎಲೆಗಳ ಮರೆಯಲ್ಲಿ ಬಚ್ಚಿಟ್ಟುಕೊಂಡಿರುವರು. ಬೀದಿಯಲ್ಲಿ ಹೋಗುತ್ತಿದ್ದವರು ಆಕೆಯ ಅಂಗಲಾಚಿಕೆಯನ್ನು ನೋಡಿ ಸಹಿಸಲಾರದೆ, ಮಕ್ಕಳು ಮರದ ಮೇಲಿರುವುದನ್ನು ತೋರಿಸಿಕೊಡುವರು. ಆಕೆ ಎಷ್ಟು ಪರಿಯಾಗಿ ಬೇಡಿಕೊಂಡರೂ ಅವರು ಇಳಿದು ಬಾರರು.

ಕಡೆಗೆ ಆಕೆ ಆಳುಗಳನ್ನು ಕರೆದು ಮರ ಹತ್ತಿ ಮಕ್ಕಳನ್ನು ಕರೆತರಹೇಳುವರು. ಆ ಆಳುಗಳು ಮರ ಹತ್ತಿ ಬಂದರೆಂದರೆ ಆ ಅಣ್ಣತಮ್ಮಂದಿರ ಆಟ ಮತ್ತಷ್ಟು ಚೆನ್ನಾಗುವುದು. ಕೊಂಬೆಯಿಂದ ಕೊಂಬೆಗೆ, ಮರದಿಂದ ಮರಕ್ಕೆ, ಮುಂಡದಿಂದ ತುದಿಗೆ, ತುದಿಯಿಂದ ಬುಡಕ್ಕೆ ಹಾರಿ, ನೆಗೆದು, ಎಗರಿ ಆಳುಗಳನ್ನು ಆಟವಾಡಿಸಿ ಕಾಡಿಸುವರು. ಈ ಆಟ ನೋಡಲು ಜನ ನೆರೆಯುವುದು. ಕಾಮಾಕ್ಷಮ್ಮನವರು ಸೋತು ಬೇಸತ್ತು ಅಡುಗೆಗೆ ಹೊತ್ತಾಯಿತೆಂದು ಮನೆಯೊಳಗೆ ಹೋಗುವರು. ಆಕೆ ಸ್ನಾನ ಮಾಡಿದಮೇಲೆ ಈ ಹುಡುಗರು ನೆಲದ ಮೇಲಕ್ಕಿಳಿಯುವರು. ಇದು ಪದೇ ಪದೇ ಆಗುತ್ತಿದ್ದ ವಿನೋದ.

ಕಾಮಾಕ್ಷಮ್ಮನವರು ಮಕ್ಕಳ ಮೇಲೆ ಗಂಡನಿಗೆ ದೂರು ಹೇಳರು. ಗುಂಡಪ್ಪನವರದು ಕಠಿಣ ಸ್ವಭಾವ. ಮಕ್ಕಳು ತುಂಟರಾದರೆಂದು ತಿಳಿದರೆ ಅವರು ಆಳುಗಳಿಂದ ಮಕ್ಕಳನ್ನು ಒಬ್ಬೊಬ್ಬರನ್ನಾಗಿ ಹಿಡಿದು ತರಿಸಿ ಚಾಟಿಯಿಂದಲೋ ದೊಣ್ಣೆಯಿಂದಲೋ ಮುಖವೆನ್ನದೆ ಮೈಯೆನ್ನದೆ ಬಿಗಿದು ಬಿಡುತ್ತಿದ್ದರು. ಈ ಅಪಾಯವನ್ನು ಆಕೆ ಬಲ್ಲರು. ಹಾಗೆ ಆಕೆ ಮೃದುವಾಗಿದ್ದ ಕಾರಣದಿಂದಲೇ ಆಕೆಯ ಮಕ್ಕಳಿಗೆ ತಾಯಿಯೆಂದರೆ ಮೈಮರೆಯಿಸುವಷ್ಟು ಪ್ರೀತಿಯ ಆವೇಶ ಬರುತ್ತಿತ್ತು.

## ಪಂತೋಜಿ

ಇನ್ನೊಂದು ದೃಶ್ಯ : ಈ ದಿವ್ಯ ಮಕ್ಕಳಿಗೆ ವಿದ್ಯೆ ಕಲಿಸಲು ಗುಂಡಪ್ಪನವರು ಒಬ್ಬ ಮಹಾರಾಷ್ಟ್ರ ಮನುಷ್ಯನನ್ನು ಗೊತ್ತುಮಾಡಿದ್ದರು. ಆ ಕಾಲದಲ್ಲಿ ಮರಾಠಿ, ಪಾರ್ಸಿ ಭಾಷೆಗಳು ಸರಕಾರದ ಕಚೇರಿಗಳಲ್ಲಿ ಕೊಂಚಮಟ್ಟಿಗೆ ರೂಢಿಯಾಗಿದ್ದವು. ಅವರು ನಿಯಮಿಸಿದ್ದ ಉಪಾಧ್ಯಾಯನ ಹೆಸರು ಯಾವುದೋ ಅವನನ್ನು ಎಲ್ಲರೂ ಪಂತೋಜಿ ಎಂದು ಕರೆಯುತ್ತಿದ್ದರು. ಆತ ಕನ್ನಡ, ಮರಾಠಿ, ಪಾರ್ಸಿ—ಈ ಮೂರು ಭಾಷೆಗಳನ್ನೂ, ಕೊಂಚ

ಪುಟ್ಟಗೆ ಲೆಕ್ಕಾಚಾರವನ್ನೂ ಕಲಿಸಬಲ್ಲವನಾಗಿದ್ದ. ಕೊಂಚ ಮುದುಕ. ಯಾವುದೋ ಒಂದು ಸಣ್ಣ ಉದ್ಯೋಗದಲ್ಲಿದ್ದು ನಿವೃತ್ತಿಯಾಗಿದ್ದವನು. ಆತ ಸಂಪ್ರದಾಯಸ್ಥನಾದ ಬ್ರಾಹ್ಮಣ. ಆಕಾರದಲ್ಲಿ ತುಂಬಾ ತೆಳುವು ಮತ್ತು ಕೊಂಚ ಪ್ಪೆ ಬಾಗು ಬಂದಿತ್ತು. ತಲೆಯಲ್ಲಿ ಶಾಸ್ತ್ರಕ್ಕೋಸ್ಕರ ಗಂಟು ಹಾಕಿಕೊಳ್ಳಲಾಗುವಷ್ಟು ಮಾತ್ರ ಒಂದೆರಡು ಬೆರಳು ಗಾತ್ರದ ಶಿಖೆಯ ನ್ನಿರಿಸಿಕೊಂಡಿದ್ದ. ಆತ ಕೊಂಚ ಕೋಪಿಷ್ಠನೆಂದು ತೋರುತ್ತದೆ. ಈ ತುಂಟ ಹುಡುಗರಂತೂ ಆತನ ಪಾಠದಲ್ಲಿ ಹೆಚ್ಚು ಸ್ವಾರಸ್ಯ ಕಂಡಿರಲಿಲ್ಲ. ತಂದೆಯ ಹೆದರಿಕೆಯಿಂದ ಆತನ ಮುಂದೆ ಕೂಡುತ್ತಿದ್ದರೇ ಹೊರತು, ತಮ್ಮ ವಿದ್ಯಾ ಕುತೂಹಲದಿಂದ ಅಲ್ಲ.

ಹೀಗಿರಲಾಗಿ ಒಂದು ದಿನ ಪಂತೋಜಿ ಪಾಠ ಹೇಳುವುದಕ್ಕೆ ಬಂದಿದ್ದಾನೆ. ಆ ಹೊತ್ತು ದ್ವಾದಶಿ; ಆತ ಬೇಗ ಊಟ ಮುಗಿಸಿಕೊಂಡು ಬಂದಿದ್ದ. ಮರದ ನೆರಳು ಚೆನ್ನಾಗಿರುತ್ತದೆಂದು ಹೇಳಿ ಹುಣಿಸೆಮರಗಳ ಕೆಳಗೆ ಚಾಪೆ ಹಾಸಿಸಿ ಕುಳಿತುಕೊಂಡಿದ್ದಾನೆ. ಮೂವರು ಹುಡುಗರಿಗೂ ಬರಹವನ್ನೂ, ಲೆಕ್ಕವನ್ನೂ ನಿಯಮಿಸಿದ್ದಾನೆ. ಅವರ ಕಣ್ಣು ಹಲಗೆ ಪುಸ್ತಕಗಳ ಮೇಲಿಲ್ಲದೆ ಪಂತೋಜಿಯ ಮೇಲೆಯೇ ಇದೆ. ಕೆಲವು ನಿಮಿಷಗಳಾದ ಮೇಲೆ ಪಂತೋಜಿ ತೂಕಡಿಸುತ್ತಿದ್ದ ಹಾಗೆ ಅವರಿಗೆ ತೋರಿತು. ಅವರು ಗುರುಪ್ರೇಮದಿಂದ ಪಂತೋಜಿಯವರನ್ನು ಹಾಗೆಯೇ ಮಲಗ ಹೇಳಿದರು. "ನಮ್ಮ ಲೆಕ್ಕ ಬರವಣಿಗೆ ಮುಗಿಯುವವರೆಗೂ ನೀವು ಮಲಗಿಕೊಂಡಿರಿ, ನಾವು ಇದನ್ನು ಬೇಗ ಬೇಗ ಮಾಡಿ ತೋರಿಸುತ್ತೇವೆ" ಎಂದು ಭರವಸೆ ಹೇಳಿದರು. ಪಂತೋಜಿಯ ಕಿವಿಗೆ ಅದು ಹಿತವೆನಿಸಿತು. ಮುದುಕ, ಅಲ್ಲಿಯೇ ಮಲಗಿದ. ಬೇಗ ನಿದ್ದೆ ಆವರಿಸಿತು. ಗೊರಕೆ ಹೊಡೆಯಲು ಶುರುವಾಯಿತು.

ಆಗ ಶೇಷಗಿರಿ ಮೊದಲು ಎದ್ದು ಮರದ ಮೇಲೆ ಹತ್ತಿದ. ಹತ್ತಿ ಒಂದು ಕೊಂಬೆಯನ್ನು ಹಿಡಿದ. ರಾಮಣ್ಣ ಅವನ ಹಿಂದೆ, ಶೀನಣ್ಣ ಅವನ ಹಿಂದೆ —ಹೀಗೆ ಈ ಮೂವರ ಭಾರದಿಂದ ಕೊಂಬೆ ನೆಲಕ್ಕೆ ಬಗ್ಗಿತು. ಶೇಷಣ್ಣ ಕೊಂಬೆಯ ಕೊನೆಗೆ ಒಂದು ಹುರಿಯನ್ನು ಕಟ್ಟಿ ಹುರಿಯ ಇನ್ನೊಂದು ಕೊನೆಯನ್ನು ಪಂತೋಜಿಯ ಶಿಖೆಗೆ ಚೆನ್ನಾಗಿ ಬಿಗಿದ. ಮೆಲ್ಲಮೆಲ್ಲನೆ ಮೂವರೂ ಹಿಂದಕ್ಕೆ ಸರಿದರು. ಕೊಂಬೆ ಥಂಗನೆ ಮೇಲಕ್ಕೆಗರಿತು. ಪಂತೋಜಿಯೂ ಅದರೊಡನೆ ಮೇಲಕ್ಕೊಯ್ಯಲ್ಪಟ್ಟು, ಅಲ್ಲಿಂದ ನೇತಾಡುತ್ತ, ನೋವಿನಿಂದಲೂ ಭಯದಿಂದಲೂ ಅರಚಿಕೊಂಡು ಬಾಯಿ ಬಾಯಿ ಬಡಿದು

ಕೊಂಡ. ಬೀದಿಯಲ್ಲಿ ಹೋಗುತ್ತಿದ್ದ ಜನ ಅವನನ್ನು ಆ ಆಪತ್ತಿನಿಂದ ಪಾರುಮಾಡಿದರು. ಕಾಮಾಕ್ಷಮ್ಮನವರು ಇದನ್ನು ಕಂಡಿದ್ದರು.

ಮಕ್ಕಳ ಅದೃಷ್ಟ ಚೆನ್ನಾಗಿದ್ದುದರಿಂದ ಆ ದಿವಸ ಗುಂಡಪ್ಪನವರು ಊರಿನಲ್ಲಿರಲಿಲ್ಲ. ಅವರು ಸರ್ಕೀಟು ಮುಗಿಸಿಕೊಂಡು ಬರುವ ವೇಳೆಗೆ ನಾಲ್ಕೈದು ದಿನ ಕಳೆದಿತ್ತು. ಕಾಮಾಕ್ಷಮ್ಮನವರು ಸಂತೋಜಿಯ ಮನೆಗೆ ಹೋಗಿ ತಮ್ಮ ವಿಷಾದವನ್ನೂ, ನಾಚಿಕೆಯನ್ನೂ ಹೇಳಿಕೊಂಡು ಆತನಿಗೆ ಒಂದಿಷ್ಟು ಹಣ್ಣು ಹಂಪಲು ಮೊದಲಾದ ಮರ್ಯಾದೆಗಳನ್ನು ಸಮರ್ಪಿಸಿ ಕ್ಷಮೆ ಪಡೆದು ಬಂದಿದ್ದರು. ಆದರೂ ಗುಂಡಪ್ಪನವರಿಗೆ ವರ್ತಮಾನ ತಿಳಿಯದೆ ಇರಲಿಲ್ಲ. ಅವರು ಅದನ್ನು ಯಾರ ಬಾಯಿಂದಲೋ ಕೇಳಿ ಮನೆಗೆ ಬಂದು ಹುಡುಗರು ಮಕ್ಕಳನ್ನು ಹುಚ್ಚುಹುಚ್ಚಾಗಿ ದಂಡಿಸಿದರು. ಆದರೆ ದಂಡಿಸಿದವರು ದಂಡಿಸಿಕೊಂಡವರು ಎಲ್ಲರೂ ತಮ್ಮತಮ್ಮೊಳಗೇ ನಗದೆ ಇರಲಿಲ್ಲ.

## ಸಂತೆಯ ವ್ಯಾಪಾರ

ಇನ್ನೊಂದು ಕಥೆ. ಇದು ನಮ್ಮ ಅಜ್ಜಿ ಸಾಕಮ್ಮನವರು ಹೇಳುತ್ತಿದ್ದದ್ದು. ಮುಳುಬಾಗಲಿನಲ್ಲಿ ಮಂಗಳವಾರ ಸಂತೆಯ ದಿವಸ. ಅದು ಭಾರಿ ಸಂತೆ. ಹತ್ತಾರು ಗ್ರಾಮಗಳಿಂದ ಜನ ಬರುತ್ತಿದ್ದರು. ಸಂತೆಯ ಮಾಳ ಶೇಕ್‌ದಾರರ ಮನೆಗೆ ಸುಮಾರು 200–250 ಗಜ ದೂರ. ಶೇಕ್‌ದಾರರ ಮೂರನೆಯ ಮಗ ಶೀನಪ್ಪ ಸಂತೆಗೆ ಹೋದ. ಸೌತೇಕಾಯಿ ವ್ಯಾಪಾರ ಮಾಡಿದ. ಆಗ ಆಣೆಗೆ ಆರು ಸೌತೇಕಾಯಿ ಬರುತ್ತಿದ್ದ ಕಾಲ. ಅಂಥಾದ್ದರಲ್ಲಿ ಶೀನಪ್ಪನು ಎರಡು ದುಡ್ಡುಕೊಟ್ಟು ನಾಲ್ಕು ಕಾಯಿ ತೆಗೆದುಕೊಂಡು ಒಂದು ಕಾಯನ್ನೋ ಇನ್ನೊಂದು ಕಾಯನ್ನೋ ಕೊಸರು ಕೊಡೆಂದು ಕೇಳಿದ. ಹಳ್ಳಿಯವನು ಕೊಂಚ ತಕರಾರು ಮಾಡಿದ. ಒಂದು ಕಾಸನ್ನು ಕೊಟ್ಟಿದ್ದಿದ್ದರೆ ಅವನು ಬಹುಶಃ ಇನ್ನೊಂದು ಕಾಯನ್ನು ಕೊಟ್ಟಿರುತ್ತಿದ್ದ.

ಶೀನಪ್ಪನವರು ಕಾಸು ಕೊಡುವ ಮನಸ್ಸಿಲ್ಲದೆ ತಾವೇ ಒಂದು ಕಾಯನ್ನು ಸಾಧಿಸಿಕೊಳ್ಳಬೇಕೆಂದು ಅವನ ಸೌತೇಕಾಯಿ ರಾಶಿಗೆ ಕೈಚಾಚಿದರು. ಅವನು "ಏನು ಸ್ವಾಮಿ, ಹೀಗುಂಟೆ ?" ಎನ್ನುತ್ತ ಅವರ ಕೈಗೆ ಅಡ್ಡವಾಗಿ ತನ್ನ ಕೈಯನ್ನೆತ್ತಿದ. ಶೀನಪ್ಪನು ಆ ಕೂಡಲೆ "ರಾಮಣ್ಣಾ ! ರಾಮಣ್ಣಾ !!" ಎಂದು ಕೂಗು ಹಾಕಿದ. ಆ ಕೂಗು ಮನೆಗೆ ತಲುಪಿತು. ಮನೆಯಲ್ಲಿದ್ದ ರಾಮಣ್ಣನೂ

ಶೇಷಣ್ಣನೂ ತಮ್ಮನಿಗೆ ಏನೋ ಆಪತ್ತು ಬಂದಿರಬೇಕೆಂದು ಸಂತೆಯ ಸೂಳಕ್ಕೆ ಓಡಿ ಅಲ್ಲಿಯ ಸಂದರ್ಭವೇನೆಂದು ವಿಚಾರ ಮಾಡಲು ನಿಲ್ಲದೆ ಶೀನಣ್ಣ ನಿಂತಿದ್ದ ಕಡೆಯ ಸೌತೇಕಾಯಿ ರಾಶಿಯ ಮೇಲೆ ನುಗ್ಗಿ ಆ ಕಾಯಿಗಳೆಷ್ಟನ್ನೂ ತಪತಪನೆ ತುಳಿದುಹಾಕಿಬಿಟ್ಟರು.

ಅಲ್ಲಿದ್ದ ಜನರಾದರೋ ಇವರನ್ನು ಮಾತನಾಡಿಸದೆ ಆ ಹಳ್ಳಿಯವನ ಕಡೆ ತಿರುಗಿ "ಏನು ಹೋಗುತ್ತಿತ್ತಯ್ಯ ನಿನಗೆ ಇನ್ನೊಂದು ಕಾಯಿ ಕೊಟ್ಟಿದ್ದಿದ್ದರೆ? ಅವರು ಕೇಳೋದು ಹೆಚ್ಚೋ ನೀನು ಕೊಡೋದು ಹೆಚ್ಚೋ?" ಎಂದು ಅವನಿಗೇ ಮುಖಭಂಗ ಮಾಡಿದರು. ಸಾಕಮ್ಮನವರು ಮೊಮ್ಮಗನಿಗೆ ಈ ಕಥೆಯನ್ನು ಹೇಳಿ "ಇಂಥ ರಾಕ್ಷಸರಯ್ಯ, ನಿಮ್ಮ ತಾತಂದಿರು. ನೀನು ಅವರನ್ನೆಲ್ಲಿಯಾದರೂ ಹೋತೀಯ!" ಎನ್ನುತ್ತಿದ್ದರು.

ಮೇಲಿನ ಕತೆಗಳು ನನ್ನ ತಾತಂದಿರ ಹುಡುಗುತನದ್ದು. ನಾನು ನೋಡುವ ವೇಳೆಗೆ ಅವರು ಮುಪ್ಪಿನ ಹತ್ತಿರಹತ್ತಿರಕ್ಕೆ ಬಂದಿದ್ದರು. ಊರಿನಲ್ಲಿ ಗಣ್ಯರಾಗಿದ್ದರು. ಶೇಕ್‌ದಾರ ಗುಂಡಪ್ಪನವರ ಮನೆ ಮಾನ ಮರ್ಯಾದೆಗಳಿಗೂ ದಾನಧರ್ಮಗಳಿಗೂ ಹೆಸರುವಾಸಿಯಾಗಿತ್ತು. ಆ ಮೂವರ ಜೀವಿತಕಥೆಗಳನ್ನು ಬೇರೆಬೇರೆಯಾಗಿ ನೋಡಬಹುದು.

೧೪

# ಲಾಯರ ಫೀಜು

ತಿಪ್ಪದೊಡ್ಡಿ ಮೈಸೂರು ಸಂಸ್ಥಾನದ ಆಗ್ನೇಯ ದಿಕ್ಕಿನ ಸರಹದ್ದಿನ ಹಳ್ಳಿ. ಅಲ್ಲಿಂದ ಪುಂಗನೂರು ಎಂಟೊಂಬತ್ತು ಮೈಲಿ. ಅದರಲ್ಲಿ ಇದ್ದ ಕುಟುಂಬಗಳು ಇಪ್ಪತ್ತಿಪ್ಪತ್ತೈದು. ಒಂದು ಶಾನುಭೋಗರದು, ಹತ್ತು ಹದಿನೈದು ಒಕ್ಕಲಿಗ ರೆಡ್ಡಿಗಳದು, ಐದಾರು ಈಗ ಹರಿಜನರೆಂದು ಹೇಳಿಸಿಕೊಳ್ಳುವ ಜಾತಿಯವರದು, ಮಿಕ್ಕವು ಇತರ ಕುಲಸ್ಥರದು. ಊರಿನ ಮನೆಗಳೆಲ್ಲ ಮಣ್ಣುಗೋಡೆಗಳವು. ಕೆಲವಕ್ಕೆ ಮಣ್ಣು ಮಾಳಿಗೆ; ಮಿಕ್ಕವು ನಾಡು ಹೆಂಚಿನ ಚಾವಣಿಯವು. ಯಾವ ಮನೆಗೂ ನೆಲಕ್ಕೆ ಗಾರೆಗಚ್ಚು ಆಗಿರಲಿಲ್ಲ. ಊರಿನ ಸುತ್ತ ನಾಗದಾಳಿ ಕಾಡು. ಊರಿಗೆ ಹೋಗುವ ದಾರಿ, ಊರಿನಲ್ಲಿ ಜನ ಓಡಾಡುವ ದಾರಿ, ಇದಿಷ್ಟನ್ನು ಜನ ಆಗಾಗ ನಾಗದಾಳಿಯ ಪ್ರಭುತ್ವದಿಂದ ಬಿಡಿಸಿಕೊಳ್ಳಬೇಕಾಗಿತ್ತು.

ಆ ಊರಿನ ಶಾನುಭೋಗರು ಸಂಜೀವಯ್ಯನವರು: ಆರುವೇಲು. ಅವರ ಭಾರ್ಯೆ ಸಂಜೀವಮ್ಮ. ಅವರ ವಂಶಿಕರು ಈಗಲೂ ಇದ್ದಾರೆ.

ಈಗ ನಾನು ಹೇಳಹೊರಟಿರುವ ಸಂಗತಿ ಸುಮಾರು ಒಂದುನೂರು ವರ್ಷದ ಹಿಂದಿನದು. ನನ್ನ ತಾಯಿಯ ತಾಯಿಯಿಂದ ನಾನು ಕೇಳಿದ ಸಂಗತಿ ಅದು. ಆಗ ಬ್ರಿಟಿಷ್ "ಕುಂಫಣಿ"ಯವರು ಮೈಸೂರನ್ನಾಳುತ್ತಿದ್ದರು. ಟಿಪ್ಪು ಸುಲ್ತಾನರ ಆಳಿಕೆ ಮುಗಿದು ಸುಮಾರು ಐವತ್ತು ವರ್ಷವಾಗಿತ್ತು. ಬ್ರಿಟಿಷರು ತಮ್ಮ ಹೊಸ ಹೊಸ ರಾಜಪದ್ಧತಿಯನ್ನು ಕಟ್ಟಲು ಆರಂಭಿಸಿದ್ದರು. ವ್ಯವಸಾಯದ ಜಮೀನುಗಳ ಸೊತ್ತುಗಾರಿಕೆಯನ್ನು ಒಂದು ವ್ಯವಸ್ಥೆಗೆ ತಂದು ಕಂದಾಯ ಕವಳಿಗೆಗಳನ್ನುಗೊತ್ತುಮಾಡಿ ರೈತರು ಅದನ್ನು ಸರಕಾರಕ್ಕೆ ಪಾವತಿ ಮಾಡಿ ರಸೀದಿ ಪಡೆಯುವ ಕ್ರಮವನ್ನು ಜಾರಿಗೆ ತರುತ್ತಿದ್ದರು. ತಿಪ್ಪದೊಡ್ಡಿಯನ್ನು ಒಳಕೊಂಡಿದ್ದ ಬೈರಕೂರು ಹೋಬಳಿಗೆ ಗುಂಜೂರು ನಾರಣಪ್ಪನವರು ಶೇಕ್‌ದಾರರಾಗಿದ್ದರು. ಅವರು ಕೆಲಸದಲ್ಲಿ ಸಮರ್ಥರೆಂದೂ ಕಾಸಿನ ವಿಷಯದಲ್ಲಿ ಕಟ್ಟುನಿಟ್ಟುಳ್ಳವರೆಂದೂ ಹೆಸರಿತ್ತು.

## ಒಂದು ದೂರು

ಹೀಗಿರಲಾಗಿ ತಿಪ್ಪದೊಡ್ಡಿಯ ಶಾನುಭೋಗ ಸಂಜೀವಯ್ಯನವರ ಮೇಲೆ ಯಾರೋ ಆಗದವರು ಸರಕಾರಕ್ಕೆ ಒಂದು ದೂರು ಬರೆದುಕೊಂಡಿದ್ದರು; ಅವರು ರೈತರಿಂದ ಪಡೆದುಕೊಂಡ ಹಣದಲ್ಲಿ ಒಂದು ಭಾಗವನ್ನು ಸ್ವಂತಕ್ಕೆರಿಸಿ ಕೊಂಡು ಮಿಕ್ಕದ್ದನ್ನು ಸರಕಾರದ ಖಜಾನೆಗೆ ಕಟ್ಟುತ್ತಿದ್ದರೆಂದು.

ಸಂಜೀವಯ್ಯನವರು ಭಾರಿ ಸಂಸಾರಿ ಮತ್ತು ದರ್ಪಶಾಲಿ. ಆತನ ಮಾತಿಗೆ ಆ ಅಕ್ಕಪಕ್ಕದ ಹಳ್ಳಿಗಳಲ್ಲೆಲ್ಲ ತುಂಬ ಗೌರವವಿತ್ತು. ಪುಂಡಾಟವಾಡಿದವರನ್ನು ದಂಡಿಸಲು ಅವರು ಹೆದರುತ್ತಿರಲಿಲ್ಲ. ಅವರ ವಾಕ್ಕು ಕೊಂಚ ಜೋರಾದದ್ದೇ. ಜನ ಅವರನ್ನು ಶಾನುಭೋಗರೆಂದು ಗಣಿಸಿದ್ದುದಕ್ಕಿಂತ ಹೆಚ್ಚಾಗಿ ಅವರನ್ನು ಗ್ರಾಮದ ಯಜಮಾನರೆಂದು ಗೌರವಿಸಿತ್ತು. ಆ ಯಜಮಾನಿಕೆಯನ್ನು ನಿರ್ವಹಿಸುವ ರಭಸದಲ್ಲಿ ಅವರು ಇಲ್ಲೊಬ್ಬನಿಗೆ ಅಲ್ಲೊಬ್ಬನಿಗೆ ಚೀಮಾರಿ ಹಾಕಿ ಶಿಕ್ಷೆ ಮಾಡುವುದು ಅನಿವಾರ್ಯವಾಗಿತ್ತು. ಇಂಥವರು ಇಬ್ಬರು ಮೂವರು ಸೇರಿ ಬರೆದಿದ್ದದ್ದು ಆ ದೂರು.

ತಾಲ್ಲೂಕು ಕಚೇರಿಯಲ್ಲಿ ಯಾರ ಕೈವಾಡದಿಂದಲೋ ಆ ಅರ್ಜಿಗೆ ಗಮನ ದೊರೆಯಿತು. ಅಮಲ್ದಾರರು ವಿಚಾರಣೆ ನಡಸಿ ಸಂಜೀವಯ್ಯನವರ ಮೇಲೆ ಹೊತ್ತ ಆಪಾದನೆಯನ್ನು ಎತ್ತಿಹಿಡಿದರು. ಈ ಫಿರ್ಯಾದು ಬೆಳೆದು ಡೆಪ್ಯುಟಿ ಕಮಿಷನರವರ ಮುಂದೆ ಬಂತು.

ಶೇಕದಾರ ನಾರಣಪ್ಪನವರು ಆ ಫಿರ್ಯಾದಿನ ಮರ್ಮವನ್ನು ತಿಳಿದಿದ್ದವರು. ಯಾರೂ ಮಾಡದೆ ಇದ್ದಂಥ ಅಪಕಾರ್ಯವನ್ನು ಸಂಜೀವಯ್ಯನವರೇನೂ ಮಾಡಿರಲಿಲ್ಲ. ಶಾನುಭೋಗರು ದರ್ಪದ ಮಾತನ್ನಾಡುವುದೂ ಜಬರದಸ್ತಿ ನಡೆಸುವುದೂ ಒಂದೆರಡು ಕಾಸು ಕಾಣಿಕೆ ತೆಗೆದುಕೊಳ್ಳುವುದೂ ಆ ಕಾಲ ದಲ್ಲಿ ಅಪರೂಪದ ಸಂಗತಿಯಲ್ಲ. ಅದು ಸರಕಾರದ ಮೇಲಧಿಕಾರಿಗಳಿಗೆ ತಿಳಿಯದೆ ಇದ್ದ ಸಂಗತಿಯೂ ಅಲ್ಲ. ಅವರು ಆ ಮಾಮೂಲು ಮರ್ಯಾದೆ ಗಳನ್ನು ಕಂಡೂ ಕಾಣದವರಂತೆ ನಡೆದುಕೊಳ್ಳುತ್ತಿದ್ದರು. ಅದು ಕಾನೂನು ಗ್ರಂಥದ ದೃಷ್ಟಿಯಿಂದ ದೋಷವೆನಿಸಿದರೂ ಜನದ ವಾಡಿಕೆಯ ದೃಷ್ಟಿಯಿಂದ ಗಣನೆಗೆ ಬರುತ್ತಿರಲಿಲ್ಲ. ತೊಂಬತ್ತೊಂಬತ್ತು ಮಂದಿ ಶಾನುಭೋಗರು ಮಾಡುತ್ತಿದ್ದ ಕೆಲಸವನ್ನು ಸಂಜೀವಯ್ಯನೂ ಮಾಡಿದ್ದರೆ ಇತರರಿಗೆ ಆಗದ ಶಿಕ್ಷೆ ಇವನೊಬ್ಬನಿಗೆ ಮಾತ್ರ ಏಕಾಗಬೇಕು?

ಸಂಜೀವಯ್ಯ ಶೇಕದಾರ ನಾರಣಪ್ಪನವರ ಕಾಲು ಹಿಡಿದ. ಶೇಕದಾರ

ನಾರಣಪ್ಪನವರು ಆತನನ್ನು ಕರೆದುಕೊಂಡು ಕೋಲಾರಕ್ಕೆ ಹೋಗಿ ಲಾಯರ್ ಶೇಷಗಿರಿಯಪ್ಪನವರ ಕಾಲು ಹಿಡಿದರು. ಶೇಷಗಿರಿಯಪ್ಪನವರು ಪ್ರಭಾವ ಶಾಲಿಯಾದ ಲಾಯರೆಂದು ಹೆಸರಾಗಿತ್ತು. ಅದಲ್ಲದೆ ನಾರಣಪ್ಪ, ಶೇಷಗಿರಿ ಯಪ್ಪ ಇಬ್ಬರೂ ಒಂದೇ ಜಾತಿಪಂಗಡದವರು. ಬಾಂಧವ್ಯ ಬೆಳಸಬಹುದಾ ದವರು.

## ವಿಚಾರಣೆ

ಡೆಪ್ಯುಟಿ ಕಮಿಷನರ ಕಚೇರಿಯಲ್ಲಿ ಫಿರ್ಯಾದು ವಿಚಾರಣೆಗಾಗಿ ಬಂತು. ಲಾಯರ್ ಶೇಷಗಿರಿಯಪ್ಪನವರು ಶಾನುಭೋಗ ಸಂಜೀವಯ್ಯ ನಿರ್ದೋಷಿ ಯೆಂದು ವಾದಿಸಿದರು. ಆತ ದೋಷಿ ಎಂದು ರುಜುವಾತು ಮಾಡಲು ಆತ ರೈತರಿಗೆ ಕೊಟ್ಟಿದ್ದ ಪಟ್ಟಿ (ರಶೀತಿ)ಗಳನ್ನು ತಾಲ್ಲೂಕು ಅಮಲ್ದಾರರು ಒದಗಿಸಿ ದ್ದರು. ಡೆಪ್ಯುಟಿ ಕಮಿಷನರು ಲಾಯರನ್ನು ಕುರಿತು ಕೇಳಿದರು :

"ಈ ಪಟ್ಟಿಪುಸ್ತಕಗಳಿಗೆ ಏನು ಹೇಳುತ್ತೀರಿ ? ಇದಕ್ಕೆಲ್ಲ ನಿಮ್ಮ ಕಕ್ಷಿ ಗಾರನು ರುಜು ಮಾಡಿದ್ದಾನಲ್ಲಾ ? ಇಂಥ ಸುಳ್ಳು ಬರವಣಿಗೆ ಕೊಡ ಬಹುದೋ ?"

ಲಾಯರು—"ಇದರಲ್ಲಿ ಸುಳ್ಳೇನೂ ಇಲ್ಲ ಸ್ವಾಮಿ. ಈ ಪಟ್ಟಿ ಪುಸ್ತಕ ಗಳನ್ನು ಬರೆದವನು ತಾನೇ ಎಂದು ಸಂಜೀವಯ್ಯ ಒಪ್ಪಿಕೊಳ್ಳುತ್ತಾನೆ."

ಡೆ.ಕ.—"ಈ ಪಟ್ಟಿ ನೋಡಿ. ಇದು ಸರಿಯಾದ ರಸೀತಿಯೊ ? ಅದರಲ್ಲಿ ಹಣದ ಸೂಚನೆಯೇ ಇಲ್ಲವಲ್ಲಾ ?"

ಲಾಯರು—"ಸ್ವಾಮಿ, ಈ ಪಟ್ಟಿಪುಸ್ತಕ ಪಾಶಂಪಲ್ಲಿ ಮುನಿರೆಡ್ಡಿಗೆ ಸೇರಿದ್ದು. ಆತನನ್ನೇ ಕೇಳೋಣವಾಗಲಿ. ಅವನು ಈಗ ಸನ್ನಿಧಾನದಲ್ಲಿ ಹಾಜ ರಿದ್ದಾನೆ."

ಡೆ.ಕ.—"ಅವನನ್ನು ಕರೆಯಿರಿ."

ಪಾಶಂಪಲ್ಲಿ ಮುನಿರೆಡ್ಡಿ ಬಂದು ಡೆಪ್ಯುಟಿ ಕಮಿಷನರಿಗೆ ಕೈ ಮುಗಿದು ನಿಂತ. ಡೆಪ್ಯುಟಿ ಕಮಿಷನರು ಅವನ ಹೆಸರು ಊರನ್ನು ಬರೆದುಕೊಳ್ಳುವಂತೆ ತಮ್ಮ ಗುಮಾಸ್ತನಿಗೆ ಹೇಳಿ, ಆಮೇಲೆ ಮುನಿರೆಡ್ಡಿಯ ಕಡೆ ತಿರುಗಿ,

ಡೆ.ಕ.—"ಈ ಪಟ್ಟಿಪುಸ್ತಕ ಯಾರದಯ್ಯ ?"

ಮು.—"ನಂದೇ ಸ್ವಾಮಿ."

ಡೆ.ಕ.—"ನೀನು ಕಂದಾಯದ ಹಣ ಕೊಟ್ಟೇನಯ್ಯ ?"

ಮು.—"ಕೊಟ್ಟಿ ಸ್ವಾಮಿ."

ಡೆ.ಕ.—"ಅದನ್ನ ಇದರಲ್ಲಿ ಬರೆದಿದ್ದಾರೇನಯ್ಯ."

ಮು.—"ಅವರು ಬರೆದುಕೊಡುತ್ತೇನೆಂದು ಹೇಳಿದರು. ನಾನೇ ಹೇಳಿದೆ, ನಿಮ್ಮತ್ರ ನಾವು ಬರಸಿಕೋಬೇಕಾ? ಕಾಜಗ ಸಿಕ್ಕೋದೇ ಕಷ್ಟ. ಅದರ ಮೇಲೆ ಏನಾದರೂ ಒಂದು ಒಳ್ಳೆ ಪದ್ಯ ಬರಕೊಡಿ,ಮಕ್ಕಳು ಓದಿಕೊಂಬೋಕೆ—ಅಂತ ಕೇಳಿದೆ. ಅದರ ಮ್ಯಾಗೆ ಬರಕೊಟ್ಟವ್ರೆ."

ಡೆಪ್ಯುಟಿ ಕಮಿಷನರ ಗುಮಾಸ್ತರು ಆ ಬರವಣಿಗೆಯನ್ನು ಮೊದಲೇ ಓದಿದ್ದರು. ಹೀಗೆ—

ಅವನೀ ಕೊಂಪ್ಯಾಡ
ಮಾಮಿಡೀ ತೋಪ್ಯಾಡ
ಲವಕುಮಾರಾ।
ಸೀತಮ್ಮ ಇಲ್ಯಾಡ
ಮಾತಲ್ಲಿ ಇಲ್ಲ್ಯಾಡ
ಲವಕುಮಾರಾ॥
(ಅವನೀ ಮನೆ ಎಲ್ಲಿ
ಮಾವಿನಾ ತೋಪೆಲ್ಲಿ
ಲವಕುಮಾರಾ
ಸೀತೆಯಾ ಮನೆ ಎಲ್ಲಿ
ಮಾತಾಯಿ ಮನೆ ಎಲ್ಲಿ
ಲವಕುಮಾರಾ)

### ಇನ್ನೊಂದು ಸಾಕ್ಷ್ಯ

ಡೆಪ್ಯುಟ ಕಮಿಷನರು ಇದನ್ನು ಕೇಳಿ ಕೊಂಚ ನಕ್ಕಿದ್ದರು. ಆಮೇಲೆ ಇನ್ನೊಂದು ಪಟ್ಟೆ.ಅದು ಬೇರಿಕೆ ರಂಗಾರೆಡ್ಡಿಯದು. ಅವನ ಪಟ್ಟೆಪುಸ್ತಕದಲ್ಲಿ:

ಯಸ್ಯಜ್ಞಾನ ದಯಾಸಿಂಧೋ-
ರಗಾಧಸ್ಯಾನಘಾ ಗುಣಾಃ

—ಎಂದು ಬರೆದಿತ್ತು.

ರಂಗಾರೆಡ್ಡಿಯ ವಿವರಣೆಯೂ ಮೇಲಿನಂತೆಯೇ. ಮೂರನೆಯ ಪಟ್ಟೆ ಪುಸ್ತಕವನ್ನು ತೆರೆದರು. ಅದು ಚಿನ್ನರಾಮೇಗೌಡನದು. ಅದರಲ್ಲಿ :

ಏರಕುಮೀ ಕಸುಗಾಯಲ।
ದೂರಕುಮೀ ಬಂಧುಜನಲ ದೋಸಮುಸುಮ್ಮೀ॥

ಪಾರುಕುಮೀ ರಣಮುಂದುನ ।
ಮೀರಕುಮೀ ಗುರುವುಲಾಜ್ಞ ಮೇದಿನಿ ಸುಮತೀ ॥

(ಕಸುಗಾಯಿಗಳನ್ನಾರಿಸಿಕೊಳ್ಳಬೇಡ. ನೆಂಟರ ದೋಷಗಳನ್ನು ಗಮನಿಸಬೇಡ. ಯುದ್ಧರಂಗದಿಂದ ಓಡಬೇಡ.ಗುರುಗಳ ಅಪ್ಪಣೆಯನ್ನು ಮೀರಬೇಡ.)

ಈ ಪದ್ಯಕ್ಕೂ ಅದು ರೈತನ ಬೇಡಿಕೆಯಂತೆ ಅವನ ಮಕ್ಕಳಿಗೋಸ್ಕರ ಬರೆದದ್ದು ಎಂದೇ ವಿವರಣೆ. ಹೀಗೆ ಇನ್ನೂ ಎರಡು ಪಟ್ಟಿಪುಸ್ತಕಗಳಲ್ಲಿ 'ಅಮರ'ದ ಪದ್ಯಗಳೂ 'ನೀತಿಶತಕ'ದ ಪದ್ಯಗಳೂ ಬರೆದಿದ್ದವು. ಅದಕ್ಕೆ ಆಯಾ ರೈತನು ಕೊಟ್ಟ ಕಾರಣ ಮೇಲಿನಂತೆಯೇ. ಯಾವ ರೈತನೂ ತನಗೆ ಶಾನುಭೋಗನು ರಶೀತಿ ಕೊಡಲು ನಿರಾಕರಿಸಿದನೆಂದಾಗಲೀ ಮೋಸಮಾಡಿದನೆಂದಾಗಲೀ ರುಜುವಾತು ಕೊಡಲಿಲ್ಲ. ಹಣ ಕೊಟ್ಟವರು ಫಿರ್ಯಾದು ಮಾಡದೆ ಇದ್ದಾಗ, ವಂಚನೆಯ ರುಜುವಾತು ಯಾವುದೂ ತಮ್ಮ ಮುಂದೆ ಬಾರದೆ ಇದ್ದಾಗ, ಡೆಪ್ಯುಟಿ ಕಮಿಷನರು ಮಾಡಬಹುದಾಗಿದ್ದದ್ದು ಆಪಾದಿತನ ಬಿಡುಗಡೆಯೊಂದೇ. ತಿಪ್ಪದೊಡ್ಡಿಯ ಸಂಜೀವಯ್ಯ ನಿರ್ದೋಷಿಯೆಂದು ತೀರ್ಮಾನವಾಗಬೇಕಾಯಿತು.

## ಕೃತಜ್ಞತೆ

ಹಾಗೆ ಆದದ್ದರ ಸಂತೋಷದಿಂದ ನಾರಣಪ್ಪನವರೂ ಸಂಜೀವಯ್ಯನೂ ಲಾಯರ್ ಶೇಷಗಿರಯ್ಯನವರ ಬಳಿಗೆ ಬಂದು ಹೂವಿನ ಹಾರ ಹಣ್ಣು ತಾಂಬೂಲಗಳನ್ನು ಸಮರ್ಪಿಸಿ ಅದರ ನಡುವೆ ಒಂದುನೂರು ರೂಪಾಯಿಗಳನ್ನಿಟ್ಟರು. "ನಾವು ಬಡವರು. ನಿಮ್ಮ ಋಣವನ್ನು ತೀರಿಸುವ ಶಕ್ತಿ ನಮಗಿಲ್ಲ. ನಮ್ಮ ಈ ಸಣ್ಣ ಕಾಣಿಕೆಯನ್ನು ಸ್ವೀಕರಿಸಬೇಕು. ನಾವು ಮನೆಮಕ್ಕಳಾದಿಯಾಗಿ ಸರ್ವರೂ ಎಲ್ಲ ಕಾಲವೂ ನಿಮ್ಮ ಹೆಸರು ಹೇಳಿಕೊಂಡು ಬದುಕುತ್ತೇವೆ" ಎಂದು ಮೊದಲಾಗಿ ಕೃತಜ್ಞತೆಯನ್ನು ನುಡಿದರು.

ಶೇಷಗಿರಿಯಪ್ಪನವರು ಹೂವು ಹಣ್ಣು ತಾಂಬೂಲವನ್ನು ತೆಗೆದಿರಿಸಿಕೊಂಡು ರೂಪಾಯಿಗಳನ್ನು ಮಾತ್ರ ನಾರಣಪ್ಪನವರ ಮುಂದಿಟ್ಟು "ಇದನ್ನು ನಾನು ತೆಗೆದುಕೊಳ್ಳತಕ್ಕದ್ದಲ್ಲ. ನೀವು ಬಂಧುಗಳು. ಅವರು ಬಡವರೆಂದು ಹೇಳುತ್ತೀರಿ. ನಾನು ಪ್ರೀತಿಯಿಂದ ಕೆಲಸ ಮಾಡಿದೆನೇ ಹೊರತು ಸಂಪಾದನೆಗೋಸ್ಕರ ಅಲ್ಲ. ದಯವಿಟ್ಟು ಇದನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು" ಎಂದರು.

ನಾರಣಪ್ಪನವರೂ ಸಂಜೀವಯ್ಯನವರೂ ಲಾಯರನ್ನು ಬಹುವಾಗಿ ಒತ್ತಾಯಪಡಿಸಿದರು. ಶೇಷಗಿರಿಯಪ್ಪನವರು ಕೊಂಚ ಚುರುಕು ಸ್ವಭಾವ ದವರು, ಅವರಲ್ಲಿ ಮಾತು ಮಿತ. ಒಂದು ಸಲ ತೀರ್ಮಾನ ಕೊಟ್ಟ ಮೇಲೆ ಆ ಮಾತನ್ನು ಪುನಃ ಎತ್ತಗೊಡಿಸುತ್ತಿರಲಿಲ್ಲ. ನಾರಣಪ್ಪನವರಿಗೆ ಸ್ವಲ್ಪ ಕಟುವಾಗಿಯೇ ತಮ್ಮ ತೀರ್ಮಾನವನ್ನು ಹೇಳಿದರು. ಅವರ ಹಣದೊಡನೆ ಅವರನ್ನು ಹಿಂದಕ್ಕೆ ಕಳುಹಿಸಿದರು.

## ನಾರಣಪ್ಪನವರ ಮನೆವಾರ್ತೆ

ಅಲ್ಲಿಂದ ಮೂರು ನಾಲ್ಕು ವರ್ಷ ಕಳೆಯಿತು. ಆ ಅಂತರದಲ್ಲಿ ನಾರಣಪ್ಪ ನವರಿಗೂ ಶೇಷಗಿರಿಯಪ್ಪನವರಿಗೂ ಒಬ್ಬರನ್ನೊಬ್ಬರು ನೋಡುವ ಕಾರಣ ಒದಗಿ ಬರಲಿಲ್ಲ. ಅವರವರ ದಾರಿಯಲ್ಲಿ ಅವರವರು ಹೋಗುತ್ತಿದ್ದರು. ಬಳಿಕ ಒಂದಾನೊಂದು ವರ್ಷ ಬೈರಕೂರು ಪ್ರಾಂತದಲ್ಲಿ ಕಾಲರಾ ವ್ಯಾಧಿ ತಲೆ ದೋರಿತು. ಮೊದಮೊದಲು ಅದಕ್ಕೆ ಬಲಿಬಿದ್ದವರಲ್ಲಿ ಶೇಕದಾರ್ ನಾರಣಪ್ಪ ನವರ ಹಿರಿಯ ಮಗ ವೆಂಕಟರಮಣಯ್ಯ ಒಬ್ಬ. ಆತ ಆಗ ಹದಿನೈದು ಹದಿ ನಾರು ವಯಸ್ಸಿನವರು. ಆತನಿಗೆ ಮದುವೆಯಾಗಿತ್ತು. ಹೆಂಡತಿ ಮನೆಗೆ ಬಂದಿ ರಲಿಲ್ಲ. ವೆಂಕಟರಮಣಯ್ಯ ಶಕ್ತನೆಂದೂ ಗುಣವಂತನೆಂದೂ ಸುತ್ತು ಮುತ್ತಲ ಜನರಿಂದ ಮೆಚ್ಚಿಕೆ ಪಡೆದುಕೊಂಡಿದ್ದ. ಆತನ ಕೈಬರಹ ಚೆನ್ನಾ ಗಿತ್ತು. ಲೆಕ್ಕಾಚಾರ ಚೆನ್ನಾಗಿತ್ತು. ಮಾತುಕಥೆ ಚೆನ್ನಾಗಿತ್ತು. ಅಂಥ ಮಗನು ತೀರಿಕೊಂಡ ಮಾರನೆಯ ದಿವಸ ತಂದೆ ನಾರಣಪ್ಪನೂ ಆ ಮಗನ ದಾರಿಯನ್ನೇ ಹಿಡಿದ.

ನಾರಣಪ್ಪನವರ ಹೆಂಡತಿ ಸಾಕಮ್ಮ. ಅವರಿಗೆ ಇನ್ನು ಉಳಿದಿದ್ದವರು ಸುಮಾರು ಐದಾರು ವರ್ಷ ವಯಸ್ಸಿನ ಮಗ ತಿಮ್ಮಪ್ಪ, ಮೂರು ನಾಲ್ಕು ವರ್ಷದ ಮಗಳು ಅಲಮೇಲಮ್ಮ. ಬೈರಕೂರಿನಲ್ಲಿ ನಡೆದ ದುಃಖದ ಸಂಗತಿ ಯನ್ನು ಅಲ್ಲಿಯ ಪಟೇಲ ಅಪ್ಪೋಜಿ ಎಂಬಾತ ಮುಳುಬಾಗಿಲಿಗೆ, ಕೋಲಾರದ ಲಾಯರ್ ಶೇಷಗಿರಿಯಪ್ಪನವರ ತಮ್ಮ ರಾಮಣ್ಣನವರಿಗೆ, ಆಳಿನ ಮೂಲಕ ಕಳುಹಿಸಿದ್ದ. ರಾಮಣ್ಣನವರು ವರ್ತಮಾನ ಬಂದ ಕೂಡಲೆ ಬೈರಕೂರಿಗೆ ಹೋಗಿ ಅಲ್ಲಿ ಆಪತ್ತಿನಿಂದ ದಿಕ್ಕು ತೋರದೆ ಇದ್ದ ಕುಟುಂಬವನ್ನು ಮುಳು ಬಾಗಿಲಿಗೆ ಕರೆದುಕೊಂಡು ಬಂದು ತಮ್ಮ ಮನೆಯಲ್ಲಿ ಉಳಿಸಿಕೊಂಡರು. ಅದು ಕೆಲವು ದಿನಗಳ ಮಟ್ಟಿನ ಏರ್ಪಾಟು. ಮೃತರ ಕರ್ಮಾಂತರಗಳು

ಮುಗಿದ ಬಳಿಕ ಸಾಕಮ್ಮನವರನ್ನೂ ಆಕೆಯ ಮಕ್ಕಳನ್ನೂ ಗುಂಜೂರಿಗೋ ಆಕೆಯ ತೌರೂರಾದ ಸರ್ಜಾಪುರಕ್ಕೋ ಕಳುಹಿಸುವ ಯೋಚನೆ ಮಾಡಬಹುದೆಂದು ಉದ್ದೇಶಪಟ್ಟಿದ್ದರು.

## ಮುಳುಬಾಗಿಲ ಸಂದರ್ಭ

ಈಗ ಮುಳುಬಾಗಿಲು ಕುಟುಂಬದ ಸಂದರ್ಭ ನೋಡೋಣ. ಆ ಕುಟುಂಬವನ್ನು ಮುಳುಬಾಗಿಲಿನಲ್ಲಿ ನೆಲೆಗೊಳಿಸಿದವರು ಶೇಕದಾರ್ ಗುಂಡಪ್ಪನವರು. ಅವರು ತೀರಿಕೊಂಡಿದ್ದರು. ಅದಕ್ಕೆ ಕೆಲವು ವರ್ಷ ಮುಂಚೆಯೇ ಅವರ ಹೆಂಡತಿ ಕಾಮಾಕ್ಷಮ್ಮನವರು ತೀರಿಕೊಂಡಿದ್ದರು. ಅವರಿಗೆ ಇದ್ದ ಮೂವರು ಗಂಡುಮಕ್ಕಳಲ್ಲಿ ಮೊದಲನೆಯವರು ಲಾಯರ್ ಶೇಷಗಿರಿಯಪ್ಪನವರು. ಅವರು ತಮ್ಮ ಕಸಬಿಗಾಗಿ ಕೋಲಾರದಲ್ಲಿಯೇ ಮುಖ್ಯ ವಸತಿ ಹೂಡಬೇಕಾಗಿತ್ತು. ಅವರಿಗೆ ಚಿಕ್ಕಂದಿನಲ್ಲಿಯೇ ಪತ್ನೀವಿಯೋಗವಾಗಿತ್ತು. ಆಗಿದ್ದ ಒಂದು ಗಂಡುಮಗು ಅದರ ಮಾತಾಮಹರ ಪೋಷಣೆಯಲ್ಲಿತ್ತು. ಆದದ್ದರಿಂದ ಶೇಷಗಿರಿಯಪ್ಪನವರು ಒಬ್ಬೊಂಟಿಯಾಗಿ ಬಾಳುತ್ತಿದ್ದರು. ಹಬ್ಬಗಳು, ತಿಥಿಗಳು, ದೊಡ್ಡ ರಜ ಕಾಲಗಳು–ಇಂಥ ಸಮಯಗಳಲ್ಲಿ ಶೇಷಗಿರಿಯಪ್ಪನವರು ಮುಳುಬಾಗಿಲು ಮನೆಗೆ ಬರುತ್ತಿದ್ದರು. ಮಿಕ್ಕ ಕಾಲ ಅವರ ಕಸಬು ಎಲ್ಲಿ ಉಂಟೋ ಅಲ್ಲಿ ಇರುತ್ತಿದ್ದರು.

ಗುಂಡಪ್ಪನವರ ಎರಡನೆಯ ಮಗ ರಾಮಣ್ಣ. ಇವರು ಚಿಕ್ಕಂದಿನಲ್ಲಿ ಸುಂಕದ ಇಲಾಖೆಯಲ್ಲಿ ಯಾವುದೋ ಸಣ್ಣ ಉದ್ಯೋಗದಲ್ಲಿದ್ದರು. ಅವರಿಗೂ ಮದುವೆಯಾಗಿತ್ತು. ಅವರ ಹೆಂಡತಿಯೂ ಒಂದು ಹೆಣ್ಣು ಮಗುವೂ ಚಿಕ್ಕಂದಿನಲ್ಲಿಯೇ ತೀರಿಕೊಂಡರು. ಹೀಗೆ ರಾಮಣ್ಣನವರೂ ಏಕಾಕಿ.

ಗುಂಡಪ್ಪನವರ ಮೂರನೆಯ ಮಗ ಶೀನಪ್ಪ (ಶೀನಣ್ಣ). ಈತ ಚಿಕ್ಕಂದಿನಲ್ಲಿ ಆಬ್ಕಾರಿ ಗುಮಾಸ್ತೆಯಾಗಿದ್ದರು. ಮದುವೆಯಾಗಿತ್ತು. ಮಗಳು, ಒಬ್ಬ ಮಗ, ಇನ್ನೊಬ್ಬ ಮಗಳು ಹುಟ್ಟಿದ ಮೇಲೆ ಅವರ ಹೆಂಡತಿಯೂ ತೀರಿಕೊಂಡಳು. ಬಳಿಕ ಶೀನಣ್ಣನವರು ತಮ್ಮ ಮಕ್ಕಳನ್ನು ಅಣ್ಣ ರಾಮಣ್ಣನವರ ಪೋಷಣೆಗೊಪ್ಪಿಸಿ ತಾವು ಕಾಶೀಯಾತ್ರೆ ಮೊದಲಾದ ನಿಶ್ಚಿಂತೆಯ ಕಾಲಕ್ಷೇಪದಲ್ಲಿ ಪ್ರವೃತ್ತರಾದರು.

ಹೀಗೆ ಮುಳುಬಾಗಿಲಿನ ಸಂಸಾರ ಒಂದು ಅವ್ಯವಸ್ಥೆಯಲ್ಲಿತ್ತು. ರಾಮಣ್ಣ ನವರು ಸ್ಥಿರವಾಗಿ ನಿಂತು ತಮ್ಮನ ಮಕ್ಕಳು ಮೂವರು, ಆಗಾಗ ಬಂದು ಹೋಗುತ್ತಿದ್ದ ಅಣ್ಣ, ಇಷ್ಟವಾದಾಗ ಬಂದು ಇಷ್ಟವಾದಷ್ಟು ದಿನ ಇದ್ದು ಇಷ್ಟ ಬಂದಾಗ ನಡೆಯುತ್ತಿದ್ದ ತಮ್ಮ—ಇವರಿಗೆ ಆಧಾರವಾಗಿದ್ದುಕೊಂಡು ಮನೆಯ ಹೆಸರನ್ನುಳಿಸಿದ್ದರು. ಅಡುಗೆಯ ಕೆಲಸಕ್ಕೆ ಒಬ್ಬ ಮುದುಕಿಯನ್ನು ಗೊತ್ತುಮಾಡಿಕೊಂಡಿದ್ದರು. ಮನೆಯಲ್ಲಿ ಜಾಗ ವಿಶಾಲವಾಗಿತ್ತು. ದನಸ ಧಾನ್ಯಗಳ ಕೊರತೆಯೇನೂ ಇರಲಿಲ್ಲ. ಆಕಳು ಎಮ್ಮೆ ಯಾವಾಗಲೂ ಎರಡೆರ ಡಿರುತ್ತಿದ್ದವು. ಸಾಮಾನ್ಯವಾಗಿ ಪ್ರತಿದಿವಸವೂ ಭೋಜನಕ್ಕಾಗಿ ಇಬ್ಬರು ಮೂವರಾದರೂ ಅತಿಥಿಗಳಿರುತ್ತಿದ್ದರು—ಸುತ್ತುಮುತ್ತಲ ಹಳ್ಳಿಗಳಿಂದ ಬಂದ ವೈದಿಕ ಬ್ರಾಹ್ಮಣರು, ಶಾನುಭೋಗರುಗಳು, ಉಪಾಧ್ಯಾಯರು, ಕಚೇರಿ ಗುಮಾಸ್ತರು, ಇಂಥವರು. ಹೀಗೆ ಗೃಹಿಣೀ ಸಂಪತ್ತೊಂದರ ಹೊರತು ತಕ್ಕ ಮಟ್ಟಿಗೆ ಅನುಕೂಲ ದಶೆಯಲ್ಲಿದ್ದ ಕುಟುಂಬ ರಾಮಣ್ಣನವರದು. ಸ್ವಲ್ಪ ಕಾಲದ ತರುವಾಯ ಶೇಷಗಿರಿಯಪ್ಪನವರ ಮಗನಾಗಿ ಬೆಂಗಳೂರು ಸರ್ಜಾ ಪುರಗಳಲ್ಲಿ ಬೆಳೆದುಕೊಂಡಿದ್ದ ಹತ್ತು ಹನ್ನೊಂದು ವರ್ಷದ ಹುಡುಗ (ನನ್ನ ತಂದೆ) ವೆಂಕಟರಮಣಯ್ಯನನ್ನೂ ರಾಮಣ್ಣನವರು ತಮ್ಮಲ್ಲಿಗೆ ಕರೆಸಿ ಕೊಂಡರು. ಈ ಸುಮಾರಿನಲ್ಲಿ ಬೈರಕೂರನಿಂದ ಸಾಕಮ್ಮನವರೂ ಅವರ ಮಕ್ಕಳೂ ಮುಳುಬಾಗಿಲಿಗೆ ಬಂದದ್ದು.

ಆಕೆ ಬಂದ ವರ್ತಮಾನ ತಮಗೆ ತಲಪಿದ ಕೂಡಲೆ ಶೇಷಗಿರಿಯಪ್ಪನವರು ಕೋಲಾರದಿಂದ ಮುಳುಬಾಗಿಲಿಗೆ ಬಂದರು. ಆಕೆಗೆ ಹೇಳಬಹುದಾದ ಧೈರ್ಯದ ಮಾತುಗಳನ್ನು ಹೇಳಿದರು. ಬಳಿಕ ಕೈ ಮುಗಿದು ನಮಸ್ಕಾರ ಮಾಡಿ ಆಕೆ ಮತ್ತೆಲ್ಲಿಗಾದರೂ ಹೋಗುವ ಯೋಚನೆಯನ್ನು ಮನಸ್ಸಿಗೆ ತಂದುಕೊಳ್ಳ ಬಾರದೆಂದೂ ಆಕೆಯೂ ಆಕೆಯ ಮಕ್ಕಳೂ ಆ ಮನೆಯನ್ನು ತಮ್ಮ ಮನೆ ಯೆಂದೇ ಭಾವಿಸಿ ಅಲ್ಲಿಯೇ ಸ್ಥಿರವಾಗಿ ನೆಲಸಬೇಕೆಂದೂ ಬಹುವಾಗಿ ಹೇಳಿ ಕೊಂಡರು. ರಾಮಣ್ಣನವರೂ ಅದೇ ಮಾತನ್ನೇ ಪರಿಪರಿಯಾಗಿ ಹೇಳಿದರು. ಶೀನಪ್ಪನವರು ಸಹ ತಮ್ಮ ಮಕ್ಕಳ ಗತಿಯನ್ನು ನೆನೆದು ಕಣ್ಣೀರಿಡುತ್ತ ಬೇಡಿ ಕೊಂಡರು. ಸಾಕಮ್ಮನವರು ಮನಸ್ಸಿನಲ್ಲಿ ಏನು ಆಲೋಚಿಸಿದರೋ; ಅವರ ಬಾಯಿಂದ ಯಾವ ಮಾತೂ ಬರಲಿಲ್ಲ. ಕಣ್ಣಿಂದ ನೀರು ಹರಿದು ಬರುತ್ತಿತ್ತು.

ಎರಡು ವರ್ಷ ಕಾಲ ಹಾಗೂ ಹೀಗೂ ಕಳೆಯಿತು.

## ಅನ್ನಂಭಟ್ಟರ ಮನೆ

ಮುಳುಬಾಗಿಲಲ್ಲಿ ಶೇಕ್‌ದಾರ್ ಗುಂಡಪ್ಪನವರ ಮನೆಯ ಎದುರಿಗೆ ಇದ್ದದ್ದು ಪುರೋಹಿತ ಅನ್ನಂಭಟ್ಟರ ಮನೆ. ಅನ್ನಂಭಟ್ಟರದು ಪ್ರಸಿದ್ಧವಾದ ಹೆಸರು. ಅವರು ವೇದಾಧ್ಯಯನಸಂಪನ್ನರು ಮತ್ತು ಉದಾರಿಗಳು. ಹತ್ತಾರು ಜನ ವಿದ್ಯಾರ್ಥಿಗಳನ್ನು ಮನೆಯಲ್ಲಿರಿಸಿಕೊಂಡು ಅನ್ನವಸ್ತ್ರಗಳನ್ನು ಕೊಟ್ಟು ವೇದ, ಜ್ಯೋತಿಷ್ಯ, ಧರ್ಮಶಾಸ್ತ್ರ—ಇವುಗಳನ್ನು ಕಲಿಸುತ್ತಿದ್ದರು. ಅವರಿಗೆ ಮೂವರು ಮಕ್ಕಳು. ಮೊದಲನೆಯಾಕೆ ಅನ್ನಮ್ಮ, ಎರಡನೆಯಾಕೆ ಅಮ್ಮಣ್ಣಮ್ಮ, ಮೂರನೆಯಾತ ವೆಂಕಟರಾಮ ಭಟ್ಟರು. ಅನ್ನಂಭಟ್ಟರ ಮನೆಗೂ ಗುಂಡಪ್ಪನವರ ಮನೆಗೂ ಪ್ರೀತಿ ವಿಶ್ವಾಸಗಳು ಬೆಳೆದು ಎರಡೂ ಒಂದೇ ಕುಟುಂಬವೆಂಬಂತೆ ಇದ್ದವು. ಅನ್ನಮ್ಮನವರೂ ಆಕೆಯ ತಂಗಿ ತಮ್ಮಂದಿರೂ ಗುಂಡಪ್ಪನವರನ್ನು ಮಾಮಯ್ಯನೆಂದು ಕರೆಯುತ್ತಿದ್ದರು. ಕಾಲಾನುಕಾಲದಲ್ಲಿ ಅನ್ನಮ್ಮನವರೂ ಅಮ್ಮಣ್ಣಮ್ಮನವರೂ ವೈಧವ್ಯ ಕಾರಣದಿಂದ ತಮ್ಮನ ಪೋಷಣೆಯಲ್ಲಿ ಇದ್ದುಕೊಂಡಿದ್ದರು. ಅನ್ನಮ್ಮನವರು ಮನೆಯಲ್ಲಿ ನಡೆಯುತ್ತಿದ್ದ ವೇದಪಾಠವನ್ನೂ ಜ್ಯೋತಿಷ ಪಾಠವನ್ನೂ ಕೇಳಿ ಕೇಳಿ ಒಂದು ಸಂಸ್ಕಾರವನ್ನು ಪಡೆದುಕೊಂಡಿದ್ದರು. ವೆಂಕಟರಾಮಭಟ್ಟರು ಮನೆಯಲ್ಲಿಲ್ಲದ ಕಾಲದಲ್ಲಿ ವಿದ್ಯಾರ್ಥಿಗಳು ವೇದ ಹೇಳುವಾಗ ಸ್ವರ ತಪ್ಪಿದರೆ, ಆಕೆ ದೂರದಿಂದ ಕೂಗಿ ಅದನ್ನು ತಿದ್ದಿಸುತ್ತಿದ್ದಳು. ಮುಂಜಿ ಮದುವೆಗಳಿಗೆ ಲಗ್ನ ಕಟ್ಟಿಕೊಡಬೇಕೆಂದು ಜನ ಬಂದು ಕೇಳಿದಾಗ ಭಟ್ಟರು ಮನೆಯಲ್ಲಿಲ್ಲದಿದ್ದರೆ ಆಕೆ ವಿದ್ಯಾರ್ಥಿಗಳಿಂದ ಪಂಚಾಂಗವನ್ನೋದಿಸಿ ತಾವೇ ಲಗ್ನ ನಿಶ್ಚಯ ಮಾಡುತ್ತಿದ್ದರು.

ಈ ಅನ್ನಮ್ಮನವರಿಗೂ ಎದುರು ಮನೆಯ ಸಾಕಮ್ಮನವರಿಗೂ ಸ್ನೇಹ ಬೆಳೆಯಿತು.

## ಒಂದು ನಿಶ್ಚಯ

ಒಂದಾನೊಂದು ದಿನ ಅವರಿಬ್ಬರೂ ವಿರಾಮವಾಗಿ ಕುಳಿತು ಮಾತನಾಡುತ್ತಿದ್ದಾಗ ಅನ್ನಮ್ಮನವರು ಹೀಗೆ ಹೇಳಿದ್ದರು :

"ಸಾಕಮ್ಮ, ಇವರ ಮನೆ ಸೇರಬೇಕಾದ ಗತಿ ಬಂತೆಂದು ನೀವು ಆಗಾಗ ಸಂಕಟಪಟ್ಟುಕೊಳ್ಳುತ್ತಿದ್ದೀರಿ. ಇದಕ್ಕೆ ಕಾರಣವಿಲ್ಲವೆಂದು ನನಗೆ ಅನ್ನಿಸುತ್ತದೆ. ನೀವು ಇಲ್ಲಿಗೆ ಬಂದದ್ದರಿಂದ ಈ ದಿಕ್ಕೆಟ್ಟ ಮನೆ ಉದ್ಧಾರವಾಗಬಹುದು.

ಕಾಮಾಕ್ಷಮ್ಮನೂ ಆಕೆಯ ಮೂರು ಮಂದಿ ಸೊಸೆಯರೂ ಚಿಕ್ಕ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡದ್ದರಿಂದ ಈ ಮನೆಗೆ ನಿಮ್ಮ ಜನದಲ್ಲಿ ಒಂದು ಕೆಟ್ಟ ಹೆಸರು ಬಂದಿದೆ, ಇಲ್ಲಿಗೆ ಬಂದ ಹೆಣ್ಣುಮಕ್ಕಳು ಬಾಳೋದಿಲ್ಲ ಅಂತ. ಆ ಅಪವಾದವನ್ನ ನೀವು ದೊಡ್ಡ ಮನಸ್ಸು ಮಾಡಿ ಹೋಗಲಾಡಿಸಬೇಕು. ನಿಮ್ಮ ಯಜಮಾನರು ಶೇಷಗಿರಿಯಪ್ಪನಿಗೆ ಫೀಜು ಕೊಡುವುದಕ್ಕೆ ಹೊರಟರು. ಶೇಷಗಿರಿಯಪ್ಪನಿಗೆ ಆ ಫೀಜು ಬೇಡ. ನಿಮ್ಮ ಮಗಳನ್ನ ಅವನ ಮಗ ವೆಂಕಟರಮಣನಿಗೆ ಕೊಟ್ಟುಬಿಡಿ. ಅದೇ ಶೇಷಗಿರಿಯಪ್ಪನಿಗೆ ಫೀಜು."

ಇಲ್ಲಿಂದ ಮುಂದೆ ನಡೆದದ್ದನ್ನು ಕುರಿತು ಹೆಚ್ಚಾಗಿ ಬರೆಯಬೇಕಾದ ಆವಶ್ಯಕತೆಯಿಲ್ಲ. ಅನ್ನಮ್ಮನವರ ಮಾತಿನಲ್ಲಿ ಎಲ್ಲರಿಗೂ ಅತ್ಯಂತ ಗೌರವ. ಆಕೆಯ ಹಿತೋಪದೇಶವನ್ನು ಎಲ್ಲರೂ ಸಂತೋಷದಿಂದ ನೆರವೇರಿಸಿದರು. ನನ್ನ ತಂದೆಯ ಮದುವೆ ಹೀಗೆ ಏರ್ಪಟ್ಟದ್ದು.

## ವಿವಾಹ

ಮದುವೆಯಾದದ್ದು ಕಾರ್ವೇಟಿ ನಗರದಲ್ಲಿ ವೆಂಕಟರಮಣ ದೇವರ ಸನ್ನಿಧಾನದಲ್ಲಿ. ಗಂಡೂ ಹೆಣ್ಣೂ ದ್ರಾವಿಡ ಬ್ರಾಹ್ಮಣರು. ಗಂಡಿಗೆ ತಾಯಿ ಇಲ್ಲದ್ದರಿಂದ ಆ ಕಡೆ ನಾಂದಿಗಾಗಿ ಕೂತವರು ಮುಳಕನಾಡು ವೆಂಕಟರಾಮಭಟ್ಟರು, ಅಕ್ಕಯ್ಯಮ್ಮನವರು. ಹೆಣ್ಣಿಗೆ ತಂದೆ ಇಲ್ಲದ ಕಾರಣದಿಂದ ಆ ಕಡೆ ನಾಂದಿಗೆ ಕುಳಿತವರು ಬಡಗನಾಡು ಶಿನಿಗಪಲ್ಲಿ ನಂಜುಂಡಪ್ಪನವರು, ಭವಾನಮ್ಮನವರು. ವೆಂಕಟರಾಮಭಟ್ಟರು ಶೇಷಗಿರಿಯಪ್ಪನ ಸ್ನೇಹಿತರಾಗಿ ತಮ್ಮನಂತೆ ಇದ್ದವರು. ನಂಜುಂಡಪ್ಪನವರು ನಾರಣಪ್ಪನವರಿಗೆ ಸ್ನೇಹಿತರಾಗಿ ಸಾಕಮ್ಮನವರಿಗೆ ಅಣ್ಣನಂತೆ ಇದ್ದವರು.

ಹೆಣ್ಣಿಗೆ ವಯಸ್ಸು ಸುಮಾರು ಐದಾರು ವರ್ಷ. ಗಂಡಿಗೆ ಹನ್ನೆರಡು ಹದಿಮೂರು ವರ್ಷ. ಈ ದಾಂಪತ್ಯ ಎಪ್ಪತ್ತು ವರ್ಷಕಾಲ ಅವಿಚ್ಛಿನ್ನವಾಗಿ ನಿರ್ಮಲವಾಗಿ ಪರಸ್ಪರ ಸಂತೋಷಕರವಾಗಿ ಸಾಗಿತು.

## ಮೂದಲಿಕೆ

ಅಲಮೇಲಮ್ಮನಿಗೂ ವೆಂಕಟರಮಣಯ್ಯನಿಗೂ ಆಗಾಗ ವಾಗ್ವಾದಗಳು ನಡೆಯುತ್ತಿದ್ದದುಂಟು. ಆ ಪ್ರೇಮಕಲಹಗಳಲ್ಲಿ ಒಬ್ಬರನ್ನೊಬ್ಬರು ಮೂದಲಿಸುತ್ತಿದ್ದದ್ದು ಅಪರೂಪವಲ್ಲ. ಸಾರಿನಲ್ಲಿ ಖಾರ ಹೆಚ್ಚಿದಾಗ ವೆಂಕಟ

ರಮಣಯ್ಯ ಹೆಂಡತಿಯನ್ನು ಕುರಿತು, "ನೀನು ಆ ಶಿನಿಗಪಲ್ಲಿ ನಂಜುಂಡಪ್ಪನ ಸಂಪ್ರದಾಯದೋಳಲ್ಲವೆ? ಆ ಸುಡುಬೆಂಕಿ, ನಿನ್ನ ಅಡುಗೆ" ಎನ್ನುತ್ತಿದ್ದರು. ವೆಂಕಟರಮಣಯ್ಯ ಪಾಯಸಕ್ಕೆ ಇನ್ನಷ್ಟು ಬೆಲ್ಲ ಹಾಕು ಎಂದಾಗ ಅಲ ಮೇಲಮ್ಮನು, "ಮುಲಕನಾಡು ಪುರೋಹಿತರ ಶಿಷ್ಯರಲ್ಲವೆ ನೀವು! ನಿಮಗೆ ಕಬ್ಬಿನಲ್ಲಿಯೇ ಸಿಹಿ ಇಲ್ಲ" ಎನ್ನುತ್ತಿದ್ದರು.

ಈ ವಿನೋದ ಸ್ವಲ್ಪ ವಿರಸಕ್ಕೆ ತಿರುಗಿದಾಗ ಆಕೆ ಗಂಡನನ್ನು ಬಾಯಿ ಮುಚ್ಚಿಸಲು ಒಂದು ಅಸ್ತ್ರವನ್ನಿಟ್ಟುಕೊಂಡಿದ್ದಳು. "ನನ್ನದೇನು ನಿಮಗೆ ಲೆಕ್ಕ? ನಿಮ್ಮಪ್ಪ ನಾಲ್ಕು ಮನೆ ತಿರುಗಿ ಗೋಗರೆದು ಬೇಡಿ ತಂದುಕೊಂಡ ಸೊಸೆಯೇ ನಾನು ಎಲ್ಲ ಸೊಸೆಯರಂತೆ? ಲಾಯರ್ ಫೀಜಾಗಿ ಬಂದವಳಲ್ಲವೆ? ಅದೇನು ಲಕ್ಷ್ಯ ನಿಮಗೆ?"

ಈ ಮೂದಲಿಕೆಯನ್ನು ಕೇಳಿದಾಗ ನಮ್ಮಪ್ಪನಿಗೆ ಒಂದು ಕಡೆ ಹಿಗ್ಗು, ಒಂದು ಕಡೆ ಸಿಗ್ಗು.

೧೫

# ನಮ್ಮ ಊರಿನ ಗ್ರಾಮದೇವತೆಗಳು

ಮುಳುಬಾಗಲಿನ ವೈದಿಕ ಮಂಡಲಿಯನ್ನೂ ವಿದ್ವದ್ಗೋಷ್ಠಿಯನ್ನೂ ರಸಿಕ ವರ್ಗವನ್ನೂ ಹಲವು ಲೇಖನಮಾಲೆಗಳಲ್ಲಿ ಇಷ್ಟಿಷ್ಟು ತೋರಿಸಿದ್ದೇನೆ. ಪ್ರಕೃತ ಲೇಖನದಲ್ಲಿ ಸಾಮಾನ್ಯವಾದ ಪೌರಜೀವನವನ್ನು ಪ್ರಸ್ತಾವಿಸುತ್ತೇನೆ. ಲೇಖನವಸ್ತುವನ್ನು ಮುಳುಬಾಗಲು ಪ್ರಾಂತದಿಂದ ಆರಿಸಿಕೊಂಡಿರುವುದರಲ್ಲಿ ಆ ಊರು ವಿಶೇಷವಾದದ್ದೆಂಬ ಭಾವವೇನೂ ಇಲ್ಲ. ಆ ಊರಿನಲ್ಲಿ ಆ ಕಾಲ ದಲ್ಲಿ ಇದ್ದಂತೆ ವಿದ್ವಜ್ಜನರೂ ಇತರರೂ ಸಾಮಾನ್ಯವಾಗಿ ಎಲ್ಲ ಊರು ಗಳಲ್ಲಿಯೂ ಇರುತ್ತಿದ್ದರು. ನನಗೆ ವಿಶೇಷವಾಗಿ ತಿಳಿದಿರುವುದು ಆ ಊರಾದದ್ದರಿಂದ ಅಲ್ಲಿಯ ಸಾಮಾಜಿಕ ವಾತಾವರಣವನ್ನು ಯಥಾಶಕ್ತಿ ಚಿತ್ರಿಸಿದ್ದೇನೆ. ಅಂಥ ಸಾಮಾಜಿಕ ಸಂದರ್ಭಗಳೂ ಸಾಮಾಜಿಕ ಪ್ರಶ್ನೆಗಳೂ ಈ ದೇಶಭಾಗಕ್ಕೆ ಸರ್ವಸಾಮಾನ್ಯವಾದವೆಂದೂ ಹೇಳಬಹುದು.

ಆ ಕಾಲದ ಬೆಲೆಗಳಿಗೆ ಒಂದು ಉದಾಹರಣೆ. ಒಳ್ಳೆಯ ಕೆಂಪು ಸಣ್ಣ ನೆಲ್ಲು ಅಕ್ಕಿ ರೂಪಾಯಿಗೆ ಹನ್ನೆರಡು ಸೇರು. ತೆಂಗಿನಕಾಯಿ ಆಣೆಗೆ ಆರು.

ನನ್ನ ತಂದೆ ಈ ರೀತಿ ವ್ಯಾಪಾರ ಮಾಡಿಕೊಂಡು ಬಂದರೆ ಅವರ ಚಿಕ್ಕ ತಂದೆ ರಾಮಣ್ಣನವರು "ವೆಂಕಟರಮಣ, ನಿನಗೆ ಎಂದಿಗೆ ಬುದ್ಧಿ ಬರುವುದು? ರೂಪಾಯಿಗೆ ಹದಿನಾರು ಸೇರಾದರೂ ಅಕ್ಕಿ ಬರಬೇಕು. ತೆಂಗಿನಕಾಯಿ ಆಣೆಗೆ ಎಂಟಾದರೂ ಬರಬೇಕು. ನೀನು ದುಬಾರಿ ಮಾಡಿದೆ !"—ಹೀಗೆ ಆಕ್ಷೇಪಿಸುತ್ತಿದ್ದರು.

ಇದು ಆ ಕಾಲದ ಸ್ಥಿತಿ.

ಆ ಊರಿನ ಜನದಲ್ಲಿ ಬಹು ದೊಡ್ಡ ಗುಂಪು ಬೇಸಾಯಗಾರರದು. ಅವರಲ್ಲಿ ಒಕ್ಕಲಿಗರು ('ಕಾಪವಾಂಡ್ಲು'), ರೆಡ್ಡಿಗಳು, ಕುರುಬರು, ಬಣಜಿಗರು ಮುಂತಾದವರೆಲ್ಲ ಇದ್ದರು. ಅವರೆಲ್ಲರೂ ಅಷ್ಟಿಷ್ಟು ಜಮೀನಿದ್ದವರು. ಮನೆಯಲ್ಲಿ ಆಕಳು, ಎತ್ತು, ಎಮ್ಮೆ ಇಟ್ಟಿದ್ದವರು. ಕುರಿ ಕೋಳಿ ಸಾಕು ವವರೂ ಕೆಲವರಿದ್ದರು. ಆ ಊರಿನ ಜನದಲ್ಲಿ ಪ್ರತಿಯೊಬ್ಬರೂ ಬೆಳಗಿನಿಂದ ಸಂಜೆಯವರೆಗೂ ತಮ್ಮ ತಮ್ಮ ಆರಂಬದ ಕೆಲಸದಲ್ಲಿರುತ್ತಿದ್ದರು. ತಮ್ಮ

ಹಳ್ಳಿಗಳಿಂದ ಬಂದಿದ್ದವರು. ನಾನಾ ಜಾತಿಗಳವರು. ಅನೇಕರು ಬೇವಿನ ಸೊಪ್ಪನ್ನು ಮೈಗೆ ಕಟ್ಟಿಕೊಂಡು ಕೈಯಲ್ಲಿ ತಂಬಿಟ್ಟು ದೀಪ ತೆಂಗಿನಕಾಯಿ ಹಣ್ಣುಗಳನ್ನೂ ಅರಿಶಿನ ಕುಂಕುಮಗಳನ್ನೂ ತಂದಿದ್ದರು. ಕೆಲವರು ಕೋಳಿ ಕುರಿಗಳನ್ನೂ ತಂದಿದ್ದರು. ಆ ದಿನ ಹತ್ತಿಪ್ಪತ್ತು ತಪಟೆಗಳೂ ತುತೂರಿಗಳೂ ಏಕಕಾಲದಲ್ಲಿ ಘೋರ್ಗರೆಯುತ್ತಿದ್ದವು. ಅದೆಷ್ಟು ತಪಟೆಗಳು! ಅದೇನು ಶಬ್ದ! ನಮ್ಮ ಎದೆಗಳಲ್ಲೆಲ್ಲ ಏನೋ ಭಯ ತುಂಬಿಕೊಂಡಿತ್ತು. ಏನೋ ಭಾರಿ ಅದ್ಭುತ ಭಯಂಕರಗಳು ನಡೆಯುತ್ತವೆಂದು ಎಲ್ಲರಿಗೂ ಎದೆ ಡವಡವಗುಟ್ಟು ತ್ತಿತ್ತು.

## ರಣಬಲಿ

ಸುಮಾರು ಹನ್ನೆರಡು ಘಂಟೆಗೆ ರಣಬಲಿ. ಪೇಟೆಯ ಚೌಕದಲ್ಲಿ ಕಟ್ಟಿದ್ದ ವಿಶಾಲವಾದ ಹಸಿರುವಾಣಿ ಚಪ್ಪರದ ಕೆಳಗೆ ಮರದ ದಿಮ್ಮಿಯ ಯೂಪಸ್ತಂಭ ವನ್ನು ನೆಟ್ಟಿದ್ದರು. ಅಲ್ಲಿಗೆ ಬಲಿಪಶುವನ್ನು ಮೆರವಣಿಗೆಯಿಂದ ಕರೆತಂದರು. ಆ ಪಶು ಒಂದು ದೊಡ್ಡ ಕೋಣ. (ಎಮ್ಮೆ ಇದ್ದರೂ ಇರಬಹುದು.) ಆ ಕೋಣಕ್ಕೆ ಅರಿಶಿನ ಕುಂಕುಮಗಳೂ ದೊಡ್ಡ ದೊಡ್ಡ ಹೂವಿನ ಹಾರಗಳೂ ಒಂದು ವಿಶೇಷ ಕಳೆಯನ್ನು ತಂದಿದ್ದವು. ತಾಳಮೇಳಗಳ ಸಂಭ್ರಮವೂ ಸೇರಿತ್ತು. ಪಶುವನ್ನು ಗೊತ್ತಾಗಿದ್ದ ಸ್ಥಳಕ್ಕೆ ತಂದ ಮೇಲೆ ಏನಾಯಿತೆಂಬು ದನ್ನು ನಾವು ಕಣ್ಣಿನಿಂದ ಕಾಣಲಾಗಲಿಲ್ಲ. ಕಿವಿಯಿಂದ ಕೇಳಿ ಊಹಿಸು ವಂತಾಯಿತು. ಸ್ವಲ್ಪ ಘಂಟಾನಾದವೂ ಏನೇನೋ ಕೂಗುಗಳೂ ಆದ ಬಳಿಕ ಮಾಳಿಗೆಯ ಮೇಲಿದ್ದ ನಮಗೆ ಕೇಳಿಬಂದದ್ದು ಒಂದು ಅರಚಲು ಶಬ್ದ. "ಹೋ ಕಿಲ್ಲಲ್ಲಲ್ಲಲ್ಲೋ!" ಎಂದು. ಆ ಧ್ವನಿಯನ್ನು ಮಾರಿಯ ಭಕ್ತರು ಎತ್ತಿದಾಗ ಕೋಣನನ್ನು ಕಡಿಯುವವರು ಮಚ್ಚು ಕತ್ತಿಯನ್ನು ಮೇಲಕ್ಕೆತ್ತಿ ಯೂಪಸ್ತಂಭದ ಮೇಲಿಟ್ಟಿದ್ದ ಕೋಣನ ಕೊರಳನ್ನು ಹೊಡೆದು ಕತ್ತರಿಸಿ ದರು. ಹೀಗೆಂದು ನಮಗೆ ದೊಡ್ಡವರು ಹೇಳಿದರು. ಇನ್ನೂ ಏನೇನನ್ನೋ ಬಲಿಕೊಟ್ಟರು. ಮಾರಮ್ಮನಿಗೆ ತೃಪ್ತಿಯಾಯಿತು. ಊರಿಗೆ ಶಾಂತಿ ಯಾಯಿತು.

ಆಮೇಲೆ ಮೂರು ನಾಲ್ಕು ದಿನ, ಹುಡುಗರಾದ ನಾವು ಆ ಕಡೆ ಹೋಗಲಿಲ್ಲ ಹೆದರಿ ಪುಕ್ಕಲುಬಿದ್ದು ಮನೆಗಳಲ್ಲಿ ಅಡಗಿಕೊಂಡಿದ್ದೆವು. ಬಳಿಕ ಕುತೂಹಲ ನಮ್ಮನ್ನು ಆ ಕಡೆಗೆಳೆಯಿತು. ರಕ್ತದ ಕಲೆಗಳು ಗಟ್ಟಿಕಟ್ಟಿ ಕಾಣುತ್ತಿದ್ದವು.

ಬಹುಶಃ ಅದೇ ಕಡೆಯ ಸಾರಿಯ 'ಊರ ದೇವರು' ಎಂದು ತೋರುತ್ತದೆ. ಪುರಂದರದಾಸರ ಹಾಡನ್ನು ಜ್ಞಾಪಕ ಮಾಡಿಕೊಳ್ಳಬಹುದು :

ಊರ ದೇವರ ಮಾಡಬೇಕಣ್ಣಾ...

## ಚಲ್ಲಮುದ್ದ

ನಮ್ಮ ಊರಿನಲ್ಲಿ ಮಾರಿಯ ಗುಡಿಗಳು ನಾಲ್ಕೈದಿದ್ದವು. ನಮ್ಮ ಮನೆಗೆ ಸಮೀಪವಾಗಿ ಕೆರೆಗೆ ಹೋಗುವ ದಾರಿಯಲ್ಲಿ ಒಂದು ಮಾರಮ್ಮನ ಗುಡಿ ಇತ್ತು. ನಮ್ಮ ಮನೆಯಲ್ಲಿ ಮಕ್ಕಳಿಗೆ ಸಿಡುಬು ಬಂದಾಗ, ಯಾರಿಗಾದರೂ ಕಾಯಿಲೆ ಬಂದಾಗ, "ಚಲ್ಲಮುದ್ದ" ಇಟ್ಟು ಆ ಸಂಜೆ ಅದನ್ನು ತೆಗೆದುಕೊಂಡು ಹೋಗಿ ಮಾರಮ್ಮನ ಮುಂದೆ ಇರಿಸಿ ಬರುತ್ತಿದ್ದೆವು.

"ಚಲ್ಲಮುದ್ದ" ಎಂಬುದು ತೆಲುಗು ಮಾತು. ಅದನ್ನು ಕನ್ನಡದಲ್ಲಿ ತಂಪು ಗೂಳು ಅಥವಾ ತಂಗೂಳು ಎಂದು ಹೇಳಬಹುದು. ಅದರ ವಿಧಾನ ಹೀಗೆ: ಮಡಿಉಟ್ಟು ಒಂದು ತಪ್ಪಲೆಯಲ್ಲಿ ಅನ್ನ ಮಾಡುವುದು. ನಡುಮನೆಯಲ್ಲಿ ಸಾರಿಸಿ ರಂಗವಲ್ಲಿ ಇಟ್ಟ ಕಡೆ ಒಂದು ಬಾಳೆ ಎಲೆ ಹರಡುವುದು. ಅದರ ಮೇಲೆ ಮಡಿ ಅನ್ನವನ್ನು ಹಾಕಿ ಕಟ್ಟೆ ಕಟ್ಟುವುದು. ಆ ಕಟ್ಟೆಯ ಒಳಗೆ ಈ ಪೂಜೆಗಾಗಿಯೇ ತೆಗೆದಿಟ್ಟ ಮೊಸರನ್ನು ಸುರಿಯುವುದು. ಇದಾದ ಮೇಲೆ ಈ ಕೂಳಿನ ಮುಂದೆ ಎರಡು ದೀಪ ಹೊತ್ತಿಸಿಡುವುದು. ಕೂಳಿನ ಕಟ್ಟೆಗೆ ಅರಿಶಿನ ಕುಂಕುಮ ಹಚ್ಚಿ ಪುಷ್ಪಾಕ್ಷತೆಗಳಿಂದ ಪೂಜೆಮಾಡುವುದು, ಧೂಪ ಹಾಕುವುದು, ನಮಸ್ಕಾರ ಮಾಡಿ ಅದನ್ನು ದೇವತೆಗೆ ಅರ್ಪಿಸುವುದು. ಹೀಗೆ ತಯಾರಾದದ್ದು ತಂಪುಗೂಳು. ಅದನ್ನು ಕೊಂಚ ಹೊತ್ತು ಹಾಗೆಯೇ ಬಿಟ್ಟದ್ದು ಬಳಿಕ ಅದನ್ನು ಗುಡಿಯ ಮಾರಮ್ಮನಿಗೆ ಒಪ್ಪಿಸಿ ಬರುವುದು. ಇದರಿಂದ ಮಾರಿಕಾದೇವಿ ಪ್ರಸನ್ನಳಾಗುತ್ತಾಳೆ. ಎಲ್ಲ ಕಾಯಿಲೆಗಳೂ, ಎಲ್ಲ ಉಪದ್ರವಗಳೂ, ಎಲ್ಲ ಅಶುಭಗಳೂ ತೊಲಗಿ ಮನೆಗೆ ಕ್ಷೇಮ ಉಂಟಾಗುತ್ತದೆ. ಹೀಗೆಂದು ಆ ಕಾಲದವರ ನಂಬಿಕೆ.

## ರೋಣೂರು ವೆಂಕಟರಾಮ ಶಾಸ್ತ್ರಿಗಳು

ವೆಂಕಟರಾಮ ಶಾಸ್ತ್ರಿಗಳ ಸ್ಥಳ ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ರೋಣೂರು. ವಯಸ್ಸಿನಲ್ಲಿ ಅವರು ನನಗಿಂತ ಐದಾರು ವರ್ಷ ದೊಡ್ಡವರು, ಸುಮಾರು ೧೮೯೭–೯೮ರಲ್ಲಿ ನನ್ನೊಡನೆ ಅವರು ಲೋವರ್

ಸೆಕಂಡರಿ ಪರೀಕ್ಷೆಗೆ ಬಂದಿದ್ದರು. ನಮ್ಮ ಪ್ರಾಂತಕ್ಕೆ ಲೋವರ್ ಸೆಕಂಡರಿ ಪರೀಕ್ಷೆಗೆ ಕೇಂದ್ರಸ್ಥಾನ ಕೋಲಾರ ಟೌನ್. ಮುಳುಬಾಗಲಿನಿಂದ ನಾನೂ ನನ್ನ ಸಹಾಧ್ಯಾಯಿಗಳು ಏಳೆಂಟು ಮಂದಿಯೂ, ಬಹುಶಃ ಮೇಷ್ಟರು ಸುಬ್ಬ ರಾಯರೂ ಕೋಲಾರಕ್ಕೆ ಬಂದು ನನ್ನ ತಾತನ ಮನೆಯಲ್ಲಿ ಬಿಡಾರ ಮಾಡಿ ದೆವು. ನನ್ನ ತಾತ ಲಾಯರು, ಮನೆ ವಿಶಾಲವಾಗಿತ್ತು. ಅಡಿಗೆ ಮಾಡಿ ಬಡಿ ಸಲು ಪರಮ ಪರಿಶುದ್ಧರಾದ ಹುದುಕಲು ದಾಸಂಭಟ್ಟರು ಸಿದ್ಧರಾಗಿದ್ದರು. ಯಾವ ಕೊರತೆಯೂ ಇರಲಿಲ್ಲ.

ನಾವು ಹೋಗಿ ಅಲ್ಲಿ ಸೇರಿದ ಮಾರನೆಯ ದಿನ ರಾತ್ರಿ ಎಂಟು ಘಂಟೆಯ ವೇಳೆಗೆ ರೋಣೂರು ವೆಂಕಟರಾಮ ಶಾಸ್ತ್ರಿಗಳೂ ಅಲ್ಲಿಗೆ ಬಂದರು. ವಿದ್ಯಾರ್ಥಿ ಗಳಾದ ನಾವೆಲ್ಲ ಹೊಗೆ ದೀಪದ ಸುತ್ತ ಕುಳಿತು ಪ್ರಶ್ನೋತ್ತರ ನಡಸುತ್ತಿದ್ದೆವು. ಆವೇಳೆಗೆ ಒಬ್ಬ ಹಿರಿಯರು ಅಲ್ಲಿಗೆ ದಯಮಾಡಿಸಿದರು. ನಮ್ಮ ತಾತನ ಕಕ್ಷಿ ಗಾರರಾದ ಚೇಳೂರು ರಾಮಸ್ವಾಮಯ್ಯಂಗಾರ್ಯರು.

## ರುದ್ರಾಕ್ಷಿಯ ಮಹಿಮೆ

ರಾಮಸ್ವಾಮಯ್ಯಂಗಾರ್ಯರದು ಕೊಂಚ ಕುಚೋದ್ಯದ ಸ್ವಭಾವ. ನನಗೆ ಅವರ ಪರಿಚಯವಿತ್ತು. ಮತ್ತು ಅವರ ಹಾಸ್ಯದ ಮಾತಿನಲ್ಲಿ ಒಲವೂ ಇತ್ತು. ಅವರು ಬಂದು ನಮ್ಮಗಳ ನಡುವೆ ಕುಳಿತು ವೆಂಕಟರಾಮಶಾಸ್ತ್ರಿ ಗಳ ಕಡೆ ನೋಡಿದರು. ಶಾಸ್ತ್ರಿಗಳು ಕೊರಳಿನಲ್ಲಿ ಒಂದು ಗಜ್ಜುಗದ ಕಾಯಿ ಗಿಂತ ದಪ್ಪವಾದ ರುದ್ರಾಕ್ಷಿಯನ್ನು ಧರಿಸಿದ್ದರು. ರಾಮಸ್ವಾಮಯ್ಯಂಗಾರ್ಯರು ರುದ್ರಾಕ್ಷಿಯನ್ನು ದಿಟ್ಟಿಸಿ ನೋಡಿ ಹೇಳಿದರು.

ರಾ : "ಇದೇನಯ್ಯ—ನಾಳೆ ಪರೀಕ್ಷೆಗೆ ಬರುತ್ತದೋ ?"

ವೆಂ : (ಕಾಲು ಕ್ಷಣ ಕೂಡ ತಡ ಮಾಡದೆ) "ಓಹೋ ; ಅದಿಲ್ಲದೆ ಏನು ನಡೆಯುತ್ತದೆ ?"

ರಾ : "ಇದರಿಂದ ಏನಾಗುತ್ತದಯ್ಯ ?"

ವೆಂ : "ಸ್ವಾಮಿ, ಇದರಿಂದ ನಿರ್ಭೀತಿ—ಏನು ಬೇಕಾದರೂ ಮಾಡ ಬಹುದು, ಇದರ ರಕ್ಷಣೆ ಇದ್ದರೆ."

ರಾ : "ಹಾಗಾದರೆ ನಾನು ಹೇಳುವುದನ್ನು ಮಾಡೀಯಾ ?"

ವೆಂ : "ಓಹೋ ! ಏನು ಹೇಳಿದರೆ ಅದು."

ರಾ : "ಈಗ ಅಂತರಗಂಗೆಗೆ ಹೋಗಿ ಒಂದು ಪಂಚಪಾತ್ರೆ ನೀರನ್ನು ತಂದೀಯಾ ?"

ವೆಂ : "ಅದೇನು ಕಷ್ಟ? ಈಗಲೇ ಹೊರಟೆ. ಬರುತ್ತೀರೋ ಜೊತೆಯಲ್ಲಿ? ನಾನೇನೋ ಹೋಗಿ ತಂದೇನು. ನೀವು 'ಇದು ಯಾರ ಮನೆಯ ನೀರೋ' ಎಂದರೆ ಸಾಕ್ಷಿ ಬೇಕಲ್ಲ? ನೀವು ಸಾಕ್ಷಿ ಬೇಡವೆಂದರೆ ನಾನು ಸಿದ್ಧ."

ರಾ : "ಏನಯ್ಯಾ ಪೀಕಲಾಟಕ್ಕೆ ಸಿಕ್ಕಿಸಿದೆ? ನೀನು ಒಬ್ಬನೇ ಹೋಗಿ ಬರಬೇಕೆಂದಲ್ಲವೆ ನಾನು ಹೇಳಿದ್ದು?"

ವೆಂ : "ನಾನು ಅದಕ್ಕೆ ಸಿದ್ಧ. ಒಬ್ಬನೇ ಹೋಗಿ ಬರುತ್ತೇನೆ. ನೀವು ಅದನ್ನು ಒಪ್ಪಿಕೊಳ್ಳುತ್ತೀರೋ, ಸುಳ್ಳು ಎನ್ನುತ್ತೀರೋ!"

ಈ ವಾಗ್ವಾದದಿಂದ ನಮಗೆಲ್ಲ ತುಂಬ ನಗು. ಶಾಸ್ತ್ರಿಗಳು ಎಂಥ ಧೈರ್ಯ ಶಾಲಿಗಳೆಂದು ಮೆಚ್ಚಿಕೆ. ರಾಮಸ್ವಾಮಯ್ಯಂಗಾರ್ಯರೇ ಅದನ್ನು ಮೆಚ್ಚಿ ಕೊಂಡು ಶಾಸ್ತ್ರಿಗಳಿಗೆ ಒಂದು ಪಾವಲಿ ದಕ್ಷಿಣೆ ಕೊಟ್ಟರು.

ವೆಂಕಟರಾಮ ಶಾಸ್ತ್ರಿಗಳು ಅಧ್ಯಯನ ಮಾಡಿದ್ದವರು. ಸಂಸ್ಕೃತ ಸಾಹಿತ್ಯ ವನ್ನು ಕಲಿತಿದ್ದವರು. ಬೆಂಗಳೂರಿನಲ್ಲಿ ಯಾವುದೋ ಹೈಸ್ಕೂಲಿನಲ್ಲಿ ಪಂಡಿತ ರಾಗಿದ್ದವರು. ಅವರ ಮನೆ ಶಂಕರಪುರದ ಮೂರನೆಯ ಅಡ್ಡರಸ್ತೆಯಲ್ಲಿ ಇತ್ತು.

## ಟರ್‍ರಾವು

ಶಾಸ್ತ್ರಿಗಳು ಹಾಸ್ಯಶೀಲರು. ೧೯೩೫ರ ಸುಮಾರಿನಲ್ಲಿ ಶಂಕರಮಠದಲ್ಲಿ ಒಂದು ದೊಡ್ಡ ಸಭೆ ಸೇರಿತ್ತು. ಕರ್ಪೂರ ಶ್ರೀನಿವಾಸರಾಯರು ಅಧ್ಯಕ್ಷರಾಗಿ ದ್ದರು. ಬಿ. ವೆಂಕಟನಾರಣಪ್ಪನವರೇ ಮೊದಲಾದ ಪ್ರಮುಖರು ಆ ಸಭೆ ಯನ್ನು ಸೇರಿಸಿದ್ದರು. ಹಿಂದೂಮಠಗಳ ನಿರ್ವಾಹ ವ್ಯವಸ್ಥೆಯಲ್ಲಿ ಆಗಬೇಕಾ ಗಿದ್ದ ಸುಧಾರಣೆಗಳನ್ನು ಕುರಿತು ಪರ್ಯಾಲೋಚಿಸುವುದು ಆ ಸಭೆಯ ಉದ್ದೇಶ. ಅಲ್ಲಿ ಭಾಷಣಗಳಾದುವು. ನಿರ್ಣಯಗಳಾದವು. ಆ ನಿರ್ಣಯ ಗಳನ್ನು ಸೂಚಿಸುವವರೂ ಅನುಮೋದಿಸುವವರೂ ತಮ್ಮ ಮಾತಿನಲ್ಲಿ 'ಠರಾವು' ಎಂಬ ಮಾತನ್ನು ಪದೇ ಪದೇ ಉಪಯೋಗಿಸಿದ್ದರು. ಠರಾವು ಎಂದರೆ ತೀರ್ಮಾನ, ನಿರ್ಣಯ. ಸಭೆ ಮುಗಿವಿಗೆ ಬರುತ್ತಿದ್ದಾಗ ವೆಂಕಟರಾಮ ಶಾಸ್ತ್ರಿಗಳೆದ್ದು ನಿಂತು ಹೇಳಿದರು :

"ಸ್ವಾಮಿ, ನಿಮ್ಮ ಟರ್‍ರಾವುಗಳಿವೆಯಲ್ಲ. ಒಳ್ಳೊಳ್ಳೆಯ ಟರ್‍ರಾವುಗಳನ್ನು ಮಾಡಿದ್ದೀರಿ. ಈ ಟರ್‍ರಾವುಗಳಿಂದ ಏನಾಗುತ್ತದೆ ಸ್ವಾಮಿ?...."

ಅವರು ಕೈಗಳನ್ನು ಅಲ್ಲಾಡಿಸುತ್ತ ಆಭಾಸಗಂಭೀರವನ್ನಭಿನಯಿಸಿ 'ಟರ್‍ರಾವು' ಎಂದು ಹೇಳಿದ ರೀತಿಯನ್ನೂ, ಅವರ ಮುಖಭಾವವನ್ನೂ ನೋಡಿ

ನಗು ತಡೆಯಲಾಗಲಿಲ್ಲ. ಕರ್ಪೂರ ಶ್ರೀನಿವಾಸರಾಯರು ಮೊದಲಾಗಿ ಎಲ್ಲರೂ ಬಾಯಿಗೆ ಬಟ್ಟೆ ಮುಚ್ಚಿಕೊಂಡು ನಗುತ್ತಿದ್ದರು.

ಶಾಸ್ತ್ರಿಗಳು ಸಾತ್ತ್ವಿಕರು. ಸತ್ಕರ್ಮದಲ್ಲಿ ಶ್ರದ್ಧೆಯುಳ್ಳವರು. ಅಂಥವರು ಸಮಾಜದಲ್ಲಿದ್ದರೆ ಅದರಿಂದ ಸಮಾಜಕ್ಕೆ ಒಂದು ಕಳೆ.

## ಪ್ಲೇಗ್ ಉಪದ್ರವ

ಮುಳುಬಾಗಲಿಗೆ ಪ್ಲೇಗ್ ವ್ಯಾಧಿ ಬಂದದ್ದು ಬಹುಶಃ ಮಿಕ್ಕೆಲ್ಲ ಊರುಗಳಿಗೂ ಬಂದಾದ ಮೇಲೆ. ಕೋಲಾರಕ್ಕೆ ಬಂತು. ಬೌರಿಂಗ್ ಪೇಟೆಗೆ ಬಂತು–ಎಂದು ತಿಳಿದಾಗ ಮುಳುಬಾಗಲು ಮಹಾಜನರು "ನಮ್ಮ ಊರಿನ ಪಶ್ಚಿಮಕ್ಕೆ ವಿರೂಪಾಕ್ಷ ಮಾರಮ್ಮನಿದ್ದಾಳೆ. ಬೆಟ್ಟದಲ್ಲಿ ನಾಚಾರಮ್ಮನಿದ್ದಾಳೆ. ಊರ ಮಧ್ಯದಲ್ಲಿ ರಣಬೇರಮ್ಮನಿದ್ದಾಳೆ. ಮೂಡಲ ಭಾಗದಲ್ಲಾದರೋ ಮಹಾನುಭಾವನಾದ ಆಂಜನೇಯಸ್ವಾಮಿ ಬಾಹುವನ್ನೆತ್ತಿ ನಿಂತಿದ್ದಾನೆ ಕಾವಲಾಗಿ. ಇಷ್ಟು ಮಂದಿಯ ರಕ್ಷಣೆ ನಮಗಿರುವಾಗ ನಮ್ಮನ್ನು ಯಾರು ಮುಟ್ಟೆಯಾರು ?"—ಎಂದು ತಮಗೆ ತಾವೇ ಧೈರ್ಯ ಹೇಳಿಕೊಳ್ಳುತ್ತಿದ್ದರು.

## ನಿವಾರಣೋಪಾಯಗಳು

ಆದರೆ ಮನುಷ್ಯನು ಹೊರಗಡೆ ಧೈರ್ಯದ ಧೋರಣೆಯನ್ನು ಎಷ್ಟು ಹೆಚ್ಚಾಗಿ ತೋರಿಸಿಕೊಳ್ಳುತ್ತಾನೋ ಅಷ್ಟು ಹೆಚ್ಚಾಗಿ ಅವನೊಳಗೇ ಅಧೈರ್ಯ ತುಂಬಿರುತ್ತದೆ. ಈ ಅಳುಕು ನಮ್ಮ ಹಿರಿಯರನ್ನೂ ಬಿಟ್ಟದ್ದಲ್ಲ.

ಕೆಲವು ಉಪಾಯಗಳನ್ನು ಚಿಂತಿಸಿದರು :

(೧) ಮನೆಮನೆಯ ಹೊರಬಾಗಿಲ ಮೇಲೂ, ದೇವರಮನೆ ಅಡಿಗೆಮನೆ ನಡುಮನೆಗಳ ಬಾಗಿಲುಗಳ ಮೇಲೂ ದೊಡ್ಡ ದೊಡ್ಡ ಮೂರು ನಾಮಗಳನ್ನು ತಿದ್ದತಕ್ಕದ್ದು. ಸುಣ್ಣದಿಂದ ಬಿಳಿಯ ಪಟ್ಟೆ, ಕೆಮ್ಮಣ್ಣಿನಿಂದ ಕೆಂಪು ಪಟ್ಟೆ. ಅದರ ಸುತ್ತಲೂ ಅರಿಶಿನ ಕುಂಕುಮ. ಇದನ್ನು ಕಂಡ ಕೂಡಲೆ ಪ್ಲೇಗ್ ಮಾರಿಯ ಪಲಾಯನ.

(೨) ಬಾಗಿಲು ಬಾಗಿಲ ಮೇಲೂ "ಆಸ್ತಿಕ" ಎಂದು ಬರೆಯತಕ್ಕದ್ದು. ಆಸ್ತಿಕ ಮಹರ್ಷಿಯ ಹೆಸರನ್ನು ನೋಡುತ್ತಲೇ ಪ್ಲೇಗ್ ಮಾರಿ ಓಟ ಕೀಳುತ್ತಾಳೆ.

(೩) ಮನೆಮನೆಯಲ್ಲಿಯೂ ಭಜನೆ. ಆದರೆ ಪ್ರತಿಯೊಂದು ಮನೆ

ಯಲ್ಲಿಯೂ ಪ್ರತಿದಿನವೂ ಭಜನೆಯಾಗುವುದು ಕಷ್ಟ. ಆದದ್ದರಿಂದ ಬೀದಿಗೆ ಒಬ್ಬರ ಮನೆಯಲ್ಲಿ, ಒಂದೊಂದು ದಿನ ಒಬ್ಬೊಬ್ಬರ ಮನೆಯಲ್ಲಿ.

(ಳ) ಆಂಜನೇಯಸ್ವಾಮಿ ದೇವಸ್ಥಾನದಲ್ಲಿ ದೀಪಾರಾಧನೆ, ಭಜನೆ ಮಾಡಿಕೊಂಡು ಹೋಗುವುದು.

## ಸಾಹಿತ್ಯ ರಚನೆ

ಈ ಭಜನೆಯ ಸಂಭ್ರಮದಲ್ಲಿ ಅನೇಕ ಕೃತಿಗಳು ತಯಾರಾದವು. ಅದರಲ್ಲಿಯೂ ವೈಶ್ಯ ಸಮಾಜದಲ್ಲಿ ಈ ಭಜನೆಯ ಕೋಲಾಹಲ ವಿಶೇಷ ವಾಗಿತ್ತು. ಅವರ ಪೇಟೆಯ ಭಜನೆ ಮಂಡಲಿಯೇ ಬೇರೆ. ಅದು ಹಾಡುತ್ತಿದ್ದ ಹಾಡುಗಳಲ್ಲಿ ಮುಖ್ಯವಾದದ್ದು

ಕೋದಂಡರಾಮ ಕೋದಂಡರಾಮ
ಕೋದಂಡರಾಮ ಪಾಹಿ ಕೋದಂಡರಾಮ
ಮಾ ದಂಡಂ ಮೀಕು ಮೀ ದಂಡಂ ಮಾಕು
ಕೋದಂಡರಾಮ ಪಾಹಿ ಕೋದಂಡರಾಮ
ಪಟ್ಟಾಭಿರಾಮ ಪಟ್ಟಾಭಿರಾಮ
ಪುಟ್ಟೀಗಾ ಪಾದಂ ಪಟ್ಟಿತೀರಾ

ಇದನ್ನು ನೋಡಿ ಇನ್ನೊಂದು ಗುಂಪಿನವರು ಪ್ರತಿಹಾಡು ಕಟ್ಟಿದರು :

ಶೇರು ಪಾಲುಕು ಶೇರು ನೀಳ್ಳು ಕಲಿಶೇನಮ್ಮ
ರೂಪಾಯ್ಕು ರೂಪಾಯಿ ದೊರಿಕಾನಮ್ಮ

ಹೀಗೆ ಭಯದ ನಡುವೆ ಹಾಸ್ಯಕಲ್ಪನೆ ಮಾಡಿಕೊಂಡು ಜನ ಬದುಕಿದರು.

ಈ ಭಜನೆ ಗುಂಪುಗಳು ಊರಿನಿಂದ ಎರಡು ಮೂರು ಮೈಲಿ ದೂರದಲ್ಲಿದ್ದ ವಿರೂಪಾಕ್ಷಿಹಳ್ಳಿಗೆ ಮಂಗಳವಾರ ಮಂಗಳವಾರವೂ ಹೋಗುತ್ತಿದ್ದವು. ಆ ಮಾರಮ್ಮನ ಗುಡಿ ಎಲ್ಲ ಮಾರಮ್ಮನ ಗುಡಿಗಳಂತೆಯೇ ಒಂದು ಸಾಮಾನ್ಯ ಮಂಟಪ. ಆದರೆ ಹಳೆಯದು. ನಾಲ್ಕು ಕಡೆಯೂ ಗೋಡೆ, ಮುಂದುಗಡೆ ಬಾಗಿಲು ಎಲ್ಲ ಇದ್ದವು. ಮಾರಮ್ಮನ ಮೂರ್ತಿಯಾದರೋ ಒಂದು ಕಲ್ಲು ದಿಮ್ಮಿಯ ಕಂಬ. ಅದಕ್ಕೆ ಪಳಪಳನೆ ಹೊಳೆಯುವ ಹಿತ್ತಾಳೆಯ ಮುಖವಾಡ. ರಾಶಿ ರಾಶಿ ಹೂವು, ಅರಿಶಿನ ಕುಂಕುಮ, ಇದು ನಮ್ಮ ದೇಶದಲ್ಲಿ ಸಾಮಾನ್ಯ ವಾಗಿ ಎಲ್ಲ ಕಡೆಯೂ ಇರತಕ್ಕದ್ದೇ. ಮಾರಮ್ಮನಲ್ಲಿ ವಿಶೇಷವೇನೆಂದರೆ

"ಉಟ್ಟು ಹೊಡೆಯುವುದು." ಇದು ಅಲ್ಲಿಯ ರಥೋತ್ಸವದ ಜಾತ್ರೆಯಲ್ಲಿ ಆಕರ್ಷಕವಾದ ಸಂಗತಿ.

## ಉಟ್ಟು

ಉಟ್ಟು ಎಂದರೆ ಹೀಗೆ : ಒಂದು ಎತ್ತರವಾದ ಕಲ್ಲುಕಂಬ. ಅದರ ಮೇಲುಗಡೆ ಒಂದು ಮರದ ಚೌಕಟ್ಟು, ಕಬ್ಬಿಣದ ಗೂಟ. ಆ ಗೂಟದ ಕೆಳಗೆ, ಆ ಚೌಕಟ್ಟಿನ ಕೆಳತಳದ ಮಧ್ಯೆ ಒಂದು ರಂಧ್ರವನ್ನು ಕೊರೆದಿರುತ್ತದೆ. ಕಲ್ಲು ಕಂಬದ ಮೇಲುಗಡೆ ಒಂದು ಕಬ್ಬಿಣದ ಗಡಾರಿಗೆ ಆ ರಂಧ್ರದ ಮೂಲಕ ಚೌಕಟ್ಟನ್ನು ಸಿಕ್ಕಿಸಿರುತ್ತದೆ. ಚೌಕಟ್ಟಿನಿಂದ ನಾಲ್ಕು ಹಗ್ಗಗಳನ್ನು ಇಳಿ ಬಿಟ್ಟಿರುತ್ತದೆ. ಚೌಕಟ್ಟಿನ ಒಂದು ಮೂಲೆಗೆ ಒಂದು ದೊಡ್ಡ ಹಗ್ಗವನ್ನು ಕಟ್ಟಿ ನೆಲದ ಮೇಲಿರುವ ಒಬ್ಬ ಮನುಷ್ಯ ಹಗ್ಗವನ್ನು ಹಿಡಿದು ಕಂಬದಿಂದ ಹದಿನೈದಿಪ್ಪತ್ತು ಅಡಿ ದೂರದಲ್ಲಿ ಸುತ್ತೂರ ಸುತ್ತುತ್ತಾನೆ. ಅವನು ಸುತ್ತಿ ದಂತೆ ಆ ಮೇಲಣ ಚೌಕಟ್ಟೂ ಸುತ್ತುತ್ತದೆ. ಅವನು ಎಷ್ಟೆಷ್ಟು ಬೇಗ ಬೇಗ ಸುತ್ತಿದರೆ ಆ ಚೌಕಟ್ಟು ಅಷ್ಟಷ್ಟು ಬೇಗ ಬೇಗ ಸುತ್ತುತ್ತದೆ. ಹಾಗೆ ತಿರುಗುವಾಗ ಆ ಚೌಕಟ್ಟಿನಿಂದ ಇಳಿಬಿಟ್ಟ ನಾಲ್ಕು ಹಗ್ಗಗಳೂ ಸುತ್ತೂರ ತಿರುಗುತ್ತವೆ. ಈ ನಾಲ್ಕು ಹಗ್ಗಗಳ ಕೆಳಕೊನೆಯಲ್ಲಿ ತೆಂಗಿನಕಾಯಿಗಳನ್ನು ಕಟ್ಟಿರುತ್ತದೆ. ಈ ತೆಂಗಿನಕಾಯಿಗಳನ್ನು ಕಟ್ಟಿರುವವರು ಭಕ್ತರುಗಳು. ಕಾಯಿಗಳು ಹಾಗೆ ಪ್ರದಕ್ಷಿಣಾಕಾರವಾಗಿ ಹೋಗುತ್ತಿರುವಾಗ ಕೆಳಗಡೆ ಮೂರು ನಾಲ್ಕು ಮಂದಿ ಭಾರಿ ದೊಣ್ಣೆಗಳನ್ನೆತ್ತಿ ನಿಂತಿರುತ್ತಾರೆ. ಈ ದೊಣ್ಣೆಗೂ ಮೇಲೆ ಸುತ್ತುತ್ತಿರುವ ತೆಂಗಿನಕಾಯಿಗಳಿಗೂ ಲಟಾಪಟಿ ಆಗ ಬೇಕು. ಆಗ ತೆಂಗಿನಕಾಯಿ ಚೂರುಚೂರಾಗಿ ಒಡೆದು ಚೂರುಗಳು ಕೆಳಕ್ಕೆ ಬೀಳುತ್ತವೆ. ಅದೇ ಭಕ್ತರಿಗೆ ವರಪ್ರಸಾದ.

ಹಳ್ಳಿಯ ಜನಕ್ಕೆ ಇದೊಂದು ದೊಡ್ಡ ವಿನೋದ. ತೆಂಗಿನಕಾಯಿ ಒಡೆದದ್ದರ ಚೂರನ್ನು ನೋಡಿ ಗಾದೆ ಹುಟ್ಟಿಕೊಂಡಿತು : "ತಂಟೆ ಮಾಡಿದರೆ ತಲೆ ಉಟ್ಟು ಹೊಡೆಸಿಬಿಟ್ಟೇನು" ಎಂದು. ಈ ಉಟ್ಟಿನ ಉತ್ಸವದ ಜೊತೆಗೆ ತಂಬಿಟ್ಟಿನ ದೀಪಗಳು, ತಮಟೆಯ ವಾದ್ಯ ಮೇಳ—ಎಲ್ಲವೂ ಇತ್ತು. ಇದರ ಜೊತೆಗೆ ಹಿಂದೆ ಹೇಳಿದ 'ಚಲ್ಲಮುದ್ದ' ಒಂದು ವಿಶೇಷ. ಕಾಯಿಲೆಯವರಿರುವ ಮನೆಯಲ್ಲಿಯೂ ಮಕ್ಕಳಿರುವ ಮನೆಯಲ್ಲಿಯೂ ಮಂಗಳವಾರ ಶುಕ್ರ ವಾರಗಳಲ್ಲಿ ಈ ಪೂಜೆ. ಬಿಸಿಬಿಸಿ ಅನ್ನ ಮಾಡುವುದು, ದೊಡ್ಡ ದೊಡ್ಡ ಎಲೆ

ಗಳಲ್ಲಿ ಆ ಅನ್ನದಿಂದ ಕಟ್ಟೆ ಮಾಡುವುದು, ನಡುವೆ ಮೊಸರು ಸುರಿಯುವುದು. ಇದಕ್ಕೆ ಅರಿಶಿನ ಕುಂಕುಮದ ಪೂಜೆ. ಇದೇ ಗಂಗಮ್ಮನ ಅಥವಾ ಮಾರಮ್ಮನ ಪ್ರತೀಕ. ಕೊಂಚ ಹೊತ್ತಾದ ಮೇಲೆ ಈ ಕೂಳನ್ನು ಮಾರಮ್ಮನ ಗುಡಿಯಲ್ಲಿ ಸಮರ್ಪಣೆ ಮಾಡಿ ಕೈಮುಗಿದು ಬರುವುದು. ಇಂಥ ಕೂಳಿನ ರಾಶಿ ವಿರೂಪಾಕ್ಷಪುರದಲ್ಲಿ ಸಣ್ಣ ಬೆಟ್ಟದಂತೆ ಬೀಳುತ್ತಿತ್ತು. ಇದು ಐವತ್ತು ಅರವತ್ತು ವರ್ಷಗಳ ಹಿಂದಿನ ಮಾತು.

## ನಾಚಾರಮ್ಮ

ನಾಚಾರಮ್ಮ ಎಂಬುದು ಮಹಾಲಕ್ಷ್ಮಿಯ ತಮಿಳು ಹೆಸರೆಂದು ತೋರುತ್ತದೆ—ನಾಚ್ಚಿಯಾರ್. ನಾಚಾರಮ್ಮನ ಗುಡಿ ಇರುವುದು ಒಂದು ಗವಿಯಲ್ಲಿ. ಮುಳುಬಾಗಲು ಬೆಟ್ಟದ ತಳಭಾಗದಲ್ಲಿ ಆಗ್ನೇಯ ಪ್ರದೇಶದಲ್ಲಿ ಒಂದು ಗುಹೆಯುಂಟು. ಅದರಲ್ಲಿ ತುಂಬ ಕತ್ತಲು. ಅದರಲ್ಲಿ ಹಿಂದುಗಡೆ ಗೋಡೆಯ ಮೇಲೆ ನಾಚಾರಮ್ಮನ ಮೂರ್ತಿ, ಗುಹೆಯ ಮುಂದುಗಡೆ ಒಂದೆರಡು ಮಂಟಪಗಳುಂಟು. ನಾಚಾರಮ್ಮನ ಸನ್ನಿಧಿಗೆ ತಂಬಿಟ್ಟಿನ ದೀಪಗಳನ್ನು ಹೊತ್ತು ಹೋಗುವುದುಂಟು. ಅಲ್ಲಿಯೂ ಆಗಾಗ ಪೂಜೆ ಉತ್ಸವಗಳು ನಡೆಯುವುವು.

## ರಣಭೇರಮ್ಮ

ಇದು ಊರ ನಡುವೆ ಇರುವ ಒಂದು ಸಾಮಾನ್ಯವಾದ ಗುಡಿ. ಅಲ್ಲಿಯ ಪೂಜಾಮೂರ್ತಿ ಏಳೆಂಟು ಅಡಿ ಎತ್ತರದ ಕಲ್ಲುಕಂಬ—ಮೂಲೆಮೂಲೆಯದು. ಕಂಬದ ಮೇಲುಗಡೆ ಚಚ್ಚೌಕವಾದ ನಾಲ್ಕು ಪಕ್ಕಗಳು. ಆ ಚಚ್ಚೌಕವಾದ ಮೇಲೆ ಒಂದು ಗುಂಡಾದ ಗುಪ್ಪೆ. ಭಕ್ತರು ಯಾರೋ ರಣಭೇರಮ್ಮನಿಗೆ ಒಂದು ಮುಖವಾಡ ಮಾಡಿಸಿಕೊಟ್ಟಿದ್ದರು.

ಈ ದೇವತೆಯ ಮಹಿಮೆ ಬಹಳ ದೊಡ್ಡದು. ಆಕೆಗೆ ಪ್ರತಿ ಶುಕ್ರವಾರವೂ ಪ್ರತಿ ಮಂಗಳವಾರವೂ ಹರಿದ್ರಾಭಿಷೇಕ. ಸ್ಕೂಲುಗಳಿಗೆ ಸಮೀಪಲ್ಲಿದ್ದದ್ದರಿಂದ ನಾವು ಕ್ಲಾಸುಗಳನ್ನು ಮೇಷ್ಟರಿಗೆ ಬಿಟ್ಟು ರಣಭೇರಮ್ಮನ ವೈಭವವನ್ನು ನೋಡುತ್ತಿದ್ದೆವು. ಪೂಜಾಕಾಲದಲ್ಲಿ ಓಲಗ ನಡೆಯುತ್ತಿತ್ತು. ಆ ಓಲಗಕ್ಕೆ ಅನುಸಾರವಾಗಿ ನಮ್ಮ ಹಾಡು

ಹಾಹಾ ಹೂಹೂ ರಣಭೇರಿ
ಹೂಹೂ ಹಾಹಾ ರಣಭೇರಿ

ಹೋ ಹೋ ಘೂಹೂ ರಣಭೇರಿ
ಹೂ ಹೂ ಹೋ ಹೋ ರಣಭೇರಿ
ರಣಭೇರೀ ರಣಭೇರೀ

ಇಷ್ಟೇ. ಇದನ್ನು ಮೇಳಗಾನ ಊದಿದ್ದೂ ಊದಿದ್ದೇ, ನಾವು ಹಾಡಿದ್ದೂ ಹಾಡಿದ್ದೇ. ಗೋಡೆಗಳ ಮೇಲೂ ಕುಳಿತು ನೋಡುತ್ತಿದ್ದೆವು.

## ದೈವಾವೇಶ

ನಮ್ಮ ಉತ್ಸಾಹ ಸಂಭ್ರಮದ ಅತ್ಯುನ್ನತಿಯೆಂದರೆ "ಅಮ್ಮನವರು ಮೈಮೇಲೆ ಬರುವುದು." ಗುಂಪಿನಲ್ಲಿದ್ದ ಒಬ್ಬನು ಮೊದಲು ಕೈಸೆಳೆದು ಕೊಳ್ಳುವನು. ಆಮೇಲೆ ಕೈಕಾಲುಗಳಲ್ಲಿ ಅದಿರು ತೋರುವುದು. ಅನಂತರ ಅವನು ನೆಲದ ಮೇಲೆ ಧೊಪ್ಪನೆ ಬೀಳುವನು. ಪಕ್ಕದಲ್ಲಿದ್ದವರು ಅವನನ್ನು ಎತ್ತಿ ನಿಲ್ಲಿಸುವರು. ಆ ವೇಳೆಗೆ ಅರ್ಚಕನು ತೀರ್ಥವನ್ನು ತಂದು ಅವನ ತಲೆಯ ಮೇಲೆ ಪ್ರೋಕ್ಷಿಸಿ ಹೂವಿನ ಹಾರವನ್ನು ಅವನ ಕೊರಳಿಗೆ ಹಾಕಿ, ಅರಿಶಿನ ಕುಂಕುಮಗಳನ್ನು ಅವನ ತಲೆಯ ಮೇಲೆ ಎರಚುವನು. ಆಗ ಮೈ ಮೇಲೆ ಬಂದವನು ಕೈಕಾಲುಗಳನ್ನು ಈ ಕಡೆಗೂ ಆ ಕಡೆಗೂ ಝಾಡಿಸುತ್ತ ದೇವರ ಮುಂದೆ ನಿಲ್ಲುವನು. ಮಂಗಳಾರತಿ ಕರ್ಪೂರಾರತಿಗಳು ಬೇಕಾದಷ್ಟು ನಡೆಯುವುವು. ಭಕ್ತರು ಪಾನಕವನ್ನೂ ನೀರುಮಜ್ಜಿಗೆಯನ್ನೂ ಕೊಡುವರು. ಅವನು ಅವನ್ನು ಕೊಂಚ ಕೊಂಚ ಸೇವಿಸುವನು. ಎಲ್ಲರಿಗೂ ಹೆದರಿಕೆ. ಏನೋ ಭಯ. ಧೈರ್ಯಸ್ಥರಾದ ಒಬ್ಬಿಬ್ಬರು ಅವನೆದುರಿಗೆ ನಿಂತು ಕೇಳು ವರು :

ಅವರು : "ನೀನು ಯಾರು ? ನಿನಗೆ ಏನು ಬೇಕು ?"

ಆತ : "ನಾನು ಯಾರು ತಿಳಿಯದೆ ? ನಿಮಗೆಲ್ಲ ತಾಯಿ ನಾನು. ನಿಮ್ಮನ್ನು ಕಾಪಾಡುವವಳು. ಎಲ್ಲಿ ನನ್ನ ಶೂಲ ?"

## ಅಕ್ಕ-ತಂಗಿ

ಆಗ ಅರ್ಚಕನು ಅಮ್ಮನವರ ಹತ್ತಿರ ಇದ್ದ ಕಬ್ಬಿಣದ ತ್ರಿಶೂಲವನ್ನು ತಂದು ಅವನಿಗೆ ಕೊಡುವನು. ಆವೇಶ ಬಂದವನು ಆ ಶೂಲವನ್ನು ಹಿಡಿದು ಅಲ್ಲಿಂದ ತೆರಳುವನು. ಅವನ ಹಿಂದೆ ಗುಂಪು, ವಾಲಗದವರ ಓಟ. ಹೀಗೆ ಅವನು ಊರ ನಡುವೆ ಹೊರಟು ಬಿಟ್ಟ ದ ಕಡೆಗೆ ನುಗ್ಗುವನು, ನಾಚ್ಚಾರವನ್ನ ನ

ಗುಡಿಯನ್ನು ಸೇರುವ ವೇಳೆಗೆ ಕೈ ಕಾಲು ಕುಸಿದುಹೋಗುತ್ತಿತ್ತೆಂದು ತೋರುತ್ತದೆ. ಅಲ್ಲಿ ಅವನು ನೆಲದ ಮೇಲೆ ಬಿದ್ದುಬಿಡುವನು. ಅದೇ ನಮಸ್ಕಾರ. ರಣಭೇರಮ್ಮ ಈಗ ತನ್ನ ಅಕ್ಕ ನಾಚಾರಮ್ಮನೊಡನೆ ಸೇರಿಕೊಂಡಳು. "ತಂಗಿ ಅಕ್ಕನೊಡನೆ ಸೇರಿದಳು."

## ಶೂಲ

ಶೂಲದ ಒಂದೊಂದು ಅಗ್ರಕ್ಕೂ ಒಂದೊಂದು ನಿಂಬೆಹಣ್ಣು; ಅರಿಶಿನ ಕುಂಕುಮ ಹೂವು. ಆ ಶೂಲವನ್ನು ನಾನು ಚೆನ್ನಾಗಿ ನೋಡಿದ್ದೇನೆ. ಅದು ಸಾಮಾನ್ಯವಾದ ಶೂಲವಾಗಿದ್ದದ್ದು ಭೂತಾಕಾರವಾಗಿ ಬೆಳೆಯಿತು. ನನಗೆ ತೋರುತ್ತದೆ, ಸುಮಾರು ನಾಲ್ಕೈದಡಿ ಅಗಲ, ಐದಾರಡಿ ಎತ್ತರ, ಆ ತ್ರಿಶೂಲಗಳಲ್ಲಿ ಒಂದೊಂದು ಶೂಲವೂ ಮೂರು ಮೂರು ಶಾಖೆಗಳನ್ನು ತಳೆದು, ಆ ಮೂರರಲ್ಲಿ ಒಂದೊಂದೂ ಮೂರು ಮೂರಾಗಿ ಬೆಳೆದು ಹಬ್ಬಿಕೊಂಡಿತ್ತು; ಒಂದು ದೊಡ್ಡ ಬಳ್ಳಿಗಳ ಸ್ಕ್ರೀನಿನಂತಾಗಿತ್ತು. ಎಲ್ಲ ಕಬ್ಬಿಣ. ಅದೇ ಊರಿನ ರಾಯಪ್ಪಾಚಾರ್ರೋ ಪುಟ್ಟಸ್ವಾಮಾಚಾರ್ರೋ ಮಾಡಿದ್ದು. ಕಟ್ಟುಮಸ್ತಾದ ಆಳು ಎರಡು ಕೈಯಿಂದಲೂ ಎತ್ತಿದರೆ ನೆಲದಿಂದ ಮೇಲಕ್ಕೆ ಎತ್ತಬಹುದಾಗಿತ್ತು. ಇಷ್ಟು ಭಾರವಾದ ಆ ಕಬ್ಬಿಣದ ಆಯುಧವನ್ನು ಆವೇಶಪುರುಷನು ರಣಭೇರಮ್ಮನ ಆಯುಧವೆಂದೂ ಲಾಂಛನವೆಂದೂ ನಂಬಿ ಎತ್ತಿ ಓಡುತ್ತಿದ್ದದ್ದು ನಮಗೆ ಆಶ್ಚರ್ಯವನ್ನುಂಟುಮಾಡುತ್ತಿತ್ತು.

ಇಂಥಾದ್ದು ನಮ್ಮ ಊರಿನಲ್ಲಿ ಮೊದಲನೆಯ ಪ್ಲೇಗಿನ ಕಾಲ.

## ರಥೋತ್ಸವಗಳು

ಮುಳುಬಾಗಲಿನಲ್ಲಿ ವೈಶಾಖಮಾಸದಲ್ಲಿ ಆಂಜನೇಯ ದೇವಾಲಯದಲ್ಲಿ ಶ್ರೀರಾಮ ರಥೋತ್ಸವ. ಫಾಲ್ಗುಣದಲ್ಲಿ ಕೋದಂಡರಾಮರ ರಥೋತ್ಸವ. ಮತ್ತೆ ಯಾವಾಗಲೋ ವಿಠ್ಠಲೇಶ್ವರ ರಥೋತ್ಸವ. ಇವು ಸಂಭ್ರಮಕ್ಕೆ ಕಾರಣವಾಗಿದ್ದವು. ಆಂಜನೇಯ ರಥೋತ್ಸವ ಇದರಲ್ಲೆಲ್ಲ ದೊಡ್ಡದು. ದೊಡ್ಡ ಪರಿಷೆ ಸೇರುತ್ತಿತ್ತು. ಹಳ್ಳಿಗಳಿಂದ ಕೋಲಾಟದವರ ತಂಡಗಳು ಬಂದು ಕೋಲಾಟವಾಡಿದ್ದನ್ನು ನಾನು ನೋಡಿದ್ದೇನೆ. ಅದು ಬೆಳದಿಂಗಳ ರಾತ್ರಿ. ಆ ಕೋಲಾಟವನ್ನು ನೋಡಿದರೆ ಜನತೆಯಲ್ಲಿ ಸಮಾಧಾನವೂ ಉತ್ಸಾಹವೂ ತುಳುಕಾಡುತ್ತಿದ್ದದ್ದು ಸ್ಪಷ್ಟವಾಗುತ್ತಿತ್ತು. ಕೆಲವು ಕಾಲ ಸೋಮೇಶ್ವರ

ಸ್ವಾಮಿಯ ರಥೋತ್ಸವವೂ ಬಹು ವಿಜೃಂಭಣೆಯಿಂದ ನಡೆಯಿತು. ಮೋಕ್ಷಗುಂಡಂ ವೆಂಕಟೇಶಯ್ಯನವರು ಅಮಲ್ದಾರರಾಗಿದ್ದಾಗ ಅವರ ಪ್ರಯತ್ನದಿಂದ ಈ ಪುರಾತನ ಶಿವಾಲಯವು ಜೀರ್ಣೋದ್ಧಾರ ಪಡೆಯಿತು. ಅವರು ಅಲ್ಲಿಯ ಪುಷ್ಕರಿಣಿಯನ್ನು ದುರಸ್ತು ಮಾಡಿಸಲು ಪ್ರೋತ್ಸಾಹ ಕೊಟ್ಟರು.

## ವೆಂಕಟೇಶಯ್ಯನವರು

ಮೋಕ್ಷಗುಂಡಂ ವೆಂಕಟೇಶಯ್ಯನವರು ದಿವಾನ್ ವಿಶ್ವೇಶ್ವರಯ್ಯನವರ ಜ್ಞಾತಿ ಸಹೋದರರು. ದರ್ಶನೀಯವಾದ ಆಕಾರ. ಆಳು ಎತ್ತರ, ಮುಖದ ಮೇಲೆ ಸೊಗಸಾದ ಗಿರಿಜಾ ಮೀಸೆ. ಬಣ್ಣ ಸುಮಾರು ಕಪ್ಪು. ಒಳ್ಳೆಯ ಠೀವಿಯ ಮನುಷ್ಯ ; ಸರಸಿ.

ಅವರನ್ನು ನಾನು ಕೃತಜ್ಞತೆಯಿಂದ ಸ್ಮರಿಸಬೇಕಾದ ಕಾರಣ ಒಂದಿದೆ. ನಾನು ಹೈಸ್ಕೂಲು ತರಗತಿಯ ವಿದ್ಯಾರ್ಥಿಯಾಗಿದ್ದಾಗ ಅವರು ನನ್ನನ್ನು ಬಳಿಗೆ ಕರೆದು ಪ್ರೀತಿಯಿಂದ ಮಾತನಾಡಿಸಿದರು. ಕೊಂಚ ಮಾತುಕಥೆ. ನಡೆದ ಬಳಿಕ ಅವರು ಹೇಳಿದರು :

"ನೀನು ಅವಶ್ಯವಾಗಿ ಓದಬೇಕಾದ ಗ್ರಂಥ ಒಂದಿದೆ. ಅದನ್ನು ನಾನು ನಿನಗೆ ಕೊಡುತ್ತೇನೆ. ಓದಿ ನನಗೆ ಹೇಳು."

ಹೀಗೆನ್ನುತ್ತಾ ಒಂದು ಪುಸ್ತಕವನ್ನು ನನ್ನ ಕೈಗೆ ಕೊಟ್ಟರು. ಅದು 'The Trial and Death of Socrates' ಎಂಬ ಪ್ಲೇಟೊ ತತ್ತ್ವಜ್ಞನ ಕೃತಿ. ಅದನ್ನು ಗ್ರೀಕ್ ಭಾಷೆಯಿಂದ ಇಂಗ್ಲಿಷಿಗೆ ಪರಿವರ್ತನೆ ಮಾಡಿದ್ದವನು ಬಹುಶಃ ಚರ್ಚ್ ಎಂಬಾತ. ಆಗ್ಗೆ ಅದು ಕನ್ನಡಕ್ಕೆ ಬಂದಿರಲಿಲ್ಲ. ವೆಂಕಟೇಶಯ್ಯನವರು ಕೊಟ್ಟ ಗ್ರಂಥವನ್ನು ಓದಿದೆ. ಅಂದಿನಿಂದ ಈ ಹೊತ್ತಿನವರೆಗೂ ನಾನು ಆ ಗ್ರಂಥವನ್ನು ಆಗಾಗ ಓದುತ್ತಲೇ ಬಂದಿದ್ದೇನೆ. ಅದನ್ನು 'ಓದು' ಎನ್ನುವುದಕ್ಕಿಂತ 'ಪಾರಾಯಣ' ಎನ್ನುವುದೇ ಯುಕ್ತವೆಂದು ನನಗನ್ನಿಸುತ್ತದೆ. ಅದು ಮನುಷ್ಯನ ಅಂತರ್ಜ್ಯೋತಿಗೆ ತೈಲಪ್ರಾಯವಾದ ಗ್ರಂಥ. ಇಂಥ ಗ್ರಂಥದ ಮಹಿಮೆಯನ್ನು ಕಂಡಿದ್ದವರು ಮೋಕ್ಷಗುಂಡಂ ವೆಂಕಟೇಶಯ್ಯನವರು.

## ರಾವಣ ವಾಹನ

ರಾವಣ ವಾಹನೋತ್ಸವವನ್ನು ಅವರು ಸ್ವಂತ ಶ್ರದ್ಧೆಯಿಂದ ಉಪಕ್ರಮ ಮಾಡಿಸಿದರು. ಆ ರಾವಣ ವಿಗ್ರಹವು ಒಬ್ಬ ಆಳಿನ ಪ್ರಮಾಣಕ್ಕಿಂತ ಬಹು

ದೊಡ್ಡದು. ಇಷ್ಟರ ಮೇಲೆ ಹತ್ತು ಮುಖ: ಹತ್ತು ಕಿರೀಟಗಳು, ಇಪ್ಪತ್ತು ಭುಜಬಾಹುಗಳು, ಇಪ್ಪತ್ತು ಭುಜಕೀರ್ತಿಗಳು. ಇವುಗಳ ಜೊತೆಗೆ ಇತರ ಅಂಗಗಳು; ಅವುಗಳ ಆಭರಣಗಳು. ಈ ಮೃಣ್ಮಯ ಪ್ರತಿಮೆಯ ಹಿಂದುಗಡೆ ಮರದ ಕಟ್ಟಡ. ಇದಕ್ಕೆಲ್ಲ ಆಧಾರವಾಗಿ ಮರದ ಪೀಠ, ಬಹುಶಃ ಆರೆಂಟಡಿ ಅಗಲ, ಹತ್ತು ಹನ್ನೆರಡಡಿ ಉದ್ದದ ಹಲಗೆಗಳ ಜೋಡಣೆ. ಈ ಮಣ್ಣು ಮರಗಳ ಭಾರ ಎಷ್ಟಿರಬಹುದು! ಇದನ್ನು ಹೊರುವುದಕ್ಕಾಗಿ ಸುಮಾರು ನೂರು ಮಂದಿ. ಈ ವಾಹನದ ಮೇಲುಗಡೆ—ಎಂದರೆ ಒಂದು ಮನೆಯಷ್ಟು ಎತ್ತರದ ಮೇಲೆ ಶ್ರೀಪಾರ್ವತೀ ಸೋಮೇಶ್ವರರ ಉತ್ಸವ ಮೂರ್ತಿ. ನೂರು ನೂರಿಪ್ಪತ್ತು ಮಂದಿ ಈ ಉತ್ಸವವನ್ನು ಭುಜಗಳ ಮೇಲೆ ಹೊತ್ತು ಕೂರಿಗೆ ಕಟ್ಟಿಗೆಗಳ ಮೇಲೆ ಹೊರಿಸಿ ಇಕ್ಕಟ್ಟಾದ ರಸ್ತೆಗಳಲ್ಲಿ ಮೆರವಣಿಗೆ ತರುವುದರ ಕಷ್ಟವನ್ನೂ ಕೋಲಾಹಲವನ್ನೂ ವಾಚಕರು ಊಹಿಸಿಕೊಳ್ಳಬೇಕು. ಕಷ್ಟ ಅಷ್ಟಾದರೂ ಅದನ್ನು ಮರೆಯಿಸಿ ಮುಳುಗಿಸುವಷ್ಟು ಹೆಚ್ಚಿನದು ಉತ್ಸಾಹ ಕೋಲಾಹಲ. ವೆಂಕಟೇಶಯ್ಯನವರು ಮಹಾ ದರ್ಪವಂತರೂ ಸಾಹಸಿಗಳೂ ಸಮರ್ಥರೂ ಆಗಿದ್ದದ್ದರಿಂದ ಆ ರಾವಣ ವಾಹನೋತ್ಸವವು ಯಶಸ್ವಿಯಾಗಿ ನಡೆದು ಬಹುಕಾಲವೂ ಬಹುದೂರವೂ ಪ್ರಸಿದ್ಧಿ ಸಂಪಾದಿಸಿತು.

೧೬

# ಚಿಕಿತ್ಸಾ ಸಂಗ್ರಹ

ವೈದ್ಯವಿಜ್ಞಾನಕ್ಕೆ ಸಂಬಂಧಪಟ್ಟ ಗ್ರಂಥಗಳನ್ನೂ ಲೇಖನಗಳನ್ನೂ ಬರೆಯುವವರು ತಮ್ಮ ಸಿದ್ಧಾಂತಗಳಿಗೆ ಆಧಾರವಾಗಿ ಒಬ್ಬಾನೊಬ್ಬ ರೋಗಿಯ ಕಾಯಿಲೆ ಆರಂಭವಾದದ್ದು ಹೇಗೆ, ಉಲ್ಬಣವಾದದ್ದು ಹೇಗೆ, ಒಂದಾನೊಂದು ಔಷಧವನ್ನು ಸೇವಿಸಿದ್ದರಿಂದ ಕಾಯಿಲೆ ಹೇಗೆ ಮಂಗಮಾಯ—ಇತ್ಯಾದಿ ವಿವರಗಳನ್ನು ನಿರೂಪಿಸುತ್ತಾರೆಂದು ಕೇಳಿದ್ದೇನೆ. ನಾನು ಕಾಯಿಲೆಗಳನ್ನು ಅಷ್ಟಿಷ್ಟುಅನುಭವಿಸಿರುವವನು; ವೈದ್ಯವಿಜ್ಞಾನದ ಪ್ರಗತಿಯಲ್ಲಿ ನನಗೆ ಆಸಕ್ತಿಯುಂಟು. ಮುಂದಿನ 'ಫಾರ್ಮಕೋಪಿಯ' ಎಂದರೆ ಚಿಕಿತ್ಸಾ ಸಂಗ್ರಹ ಗ್ರಂಥಗಳನ್ನು ಬರೆಯುವವರಿಗೆ ಸಹಾಯವಾಗಲಿ ಎಂಬ ದೃಷ್ಟಿಯಿಂದ ನನಗೆ ತಿಳಿದ ಕೆಲವು 'ಕೇಸ್ ಹಿಸ್ಟರಿ'ಗಳನ್ನು ದಾಖಲೆ ಮಾಡುವುದು ಇಲ್ಲಿ ನನ್ನ ಉದ್ದೇಶ. ಸದ್ಯಕ್ಕೆ ಎರಡು ಕಾಯಿಲೆಗಳನ್ನು ಪ್ರಸ್ತಾಪಿಸಬೇಕೆಂದಿದ್ದೇನೆ: (೧) ಹಸಿವು; (೨) ಅಜೀರ್ಣ. ಕೆಲವರು ಪ್ರಸಿದ್ಧಪುರುಷರೂ, ಪ್ರಸಿದ್ಧರಲ್ಲದ ಒಬ್ಬಿಬ್ಬರೂ ಈ ಕಾಯಿಲೆಗಳಿಗೆ ಹೇಗೆ ಪರಿಹಾರ ಕಂಡುಕೊಂಡಿದ್ದರೆಂಬುದನ್ನು ನೋಡೋಣ.

ಮೈಸೂರು ಸಂಸ್ಥಾನದ ದಿವಾನರುಗಳಲ್ಲಿ ಕೆಲವರ ಭೋಜನ ಪರಿತವಣೆಗಳನ್ನು ಕುರಿತು ನಾನು ಕೇಳಿರುವ ಕಥೆಗಳಲ್ಲಿ ಕೆಲವನ್ನು ಹೇಳುತ್ತೇನೆ.

## ಶೇಷಾದ್ರಿ ಅಯ್ಯರ್

ಸರ್ ಕೆ. ಶೇಷಾದ್ರಿ ಅಯ್ಯರ್‌ರವರು ಒಳ್ಳೆಯ ಊಟಗಾರರು. ಪ್ರತಿದಿವಸ ಅವರ ಭೋಜನದಲ್ಲಿ ತರಕಾರಿಗಳೂ, ಭಕ್ಷ್ಯಭೋಜ್ಯಗಳೂ ನಾಲ್ಕಾರು ಬಗೆಯವು ಇರುತ್ತಿದ್ದವಂತೆ. ಆರು ತಿಂಗಳಿಗೆ ಒಂದು ಸಾರಿಯೋ ಇನ್ನೆಂದೋ ಅವರಿಗೆ ಅಜೀರ್ಣದ ಶಂಕೆಯುಂಟಾದರೆ ಆಗ ಅವರು ಮಾಡಿಕೊಳ್ಳುತ್ತಿದ್ದ ಔಷಧದ ರೀತಿ ಹೀಗೆ: ಸೊಗಸಾದ ಚಿರೋಟಿ ಮಾಡಿಸುವುದು. ಒಂದಡಿ. ಮಧ್ಯರೇಖೆಯುಳ್ಳ ದೊಡ್ಡ ಬೆಳ್ಳಿಯ ಡಬರಿಯಲ್ಲಿ ಅಂಗೈ ದಪ್ಪ ಸಕ್ಕರೆ ಹರಡಿಸುವುದು. ಆದರ ಮೇಲೊಂದು ಚಿರೋಟಿ. ಮತ್ತೊಂದು ಪದರ ಸಕ್ಕರೆ.

ಇನ್ನೊಂದು ಚಿರೋಟಿ, ಮತ್ತೆ ಸಕ್ಕರೆ, ಮತ್ತೆ ಚಿರೋಟಿ. ಹೀಗೆ ಮೂರು ಪದರವಾದ ಬಳಿಕ ಒಂದು ಹಿಡಿ ಮೆಗ್ನೀಸಿಯಂ ಸಲ್ಫೇಟ್ ಎಂಬ ಭೇದಿ ಯುಪ್ಪು. ಮತ್ತೆ ಅದರ ಮೇಲೆ ಚಿರೋಟಿ ಸಕ್ಕರೆ ಪದರಗಳು–ಡಬರಿ ಭರ್ತಿ ಯಾಗುವಂತೆ.

ಇಷ್ಟರ ಮೇಲೆ ಬಿಸಿಬಿಸಿ ಕಾಯಿಸಿದ ಹಾಲು ಸುರಿಯುವುದಂತೆ. ಹಾಲು ಸುರಿಯುತ್ತಿದ್ದಂತೆ ಫೋರ್ಕ್ (Fork) ಮುಳ್ಳುಚಮಚಗಳನ್ನು ಇಬ್ಬರು ಹಿಡಿದುಕೊಂಡು ಮೇಲಿನಿಂದ ಕೆಳಗಿನವರೆಗೂ ತಿವಿದು ತಿರುವಿಹಾಕುವುದು. ಹೀಗೆ ಆ ಭಕ್ಷ್ಯ ಮೆತ್ತಗಾಗಿ ಅರ್ಧಪಾನಕ ಸ್ಥಿತಿಗೆ ಬಂದಾಗ ಶೇಷಾದ್ರಿ ಅಯ್ಯರವರು ಅಷ್ಟನ್ನು ಸೇವಿಸಿದ ಬಳಿಕ ಆ ಹೊತ್ತು ಉಪವಾಸವಿರುವುದು.

ಮಾರನೆಯ ದಿನದಿಂದ ಯಥಾಪ್ರಕಾರ.

## ಟಿ. ಮಾಧವರಾವ್

ರಾಜಾ ಸರ್ ಟಿ. ಮಾಧವರಾಯರ ತಿಂಡಿಪೋತತನ ಇದಕ್ಕಿಂತ ಪ್ರಸಿದ್ಧ ವಾದದ್ದು. ಅವರ ಆಫೀಸ್ ಕೋಣೆಗೆ ಸೇರಿಕೊಂಡಂತಿದ್ದ ಹಿಂಭಾಗದ ಕೋಣೆಯಲ್ಲಿ ನಾಲ್ಕೈದು ಕುಂಪಟಿಗಳಲ್ಲಿ ಬೆಂಕಿಯನ್ನು ಸಿದ್ಧಮಾಡಿಟ್ಟು ಕೊಂಡು ಅಡಿಗೆಯವರಿರುತ್ತಿದ್ದರು. ಸುತ್ತಲೂ ಮಂಚಿಕೆಗಳ ಮೇಲೆ ಬಾಂಡಲೆ ಗಳು, ತುಪ್ಪದ ಡಬ್ಬಗಳು, ವಿಧವಿಧವಾದ ಕಲಸಿದ ಹಿಟ್ಟು, ಚಕ್ಕಲಿ ಹಿಟ್ಟು, ಲಾಡು ಹಿಟ್ಟು–ಹೀಗೆ ವಿಧವಿಧವಾದ ಹಿಟ್ಟುಗಳನ್ನೂ, ಕೊತ್ತಂಬರಿ ಮೊದ ಲಾದ ಸಾಂಬಾರ್ ದ್ರವ್ಯಗಳನ್ನೂ ಸಿದ್ಧಪಡಿಸಿ ಇಟ್ಟಿರುತ್ತಿದ್ದರು.

ಸರ್ ಟಿ. ಮಾಧವರಾಯರು ಆಫೀಸ್ ರೂಮಿನಲ್ಲಿ ಕುಳಿತು ತಾವೇ ಏನೋ ಬರೆಯುತ್ತಿರುವರು ಅಥವಾ ತಾವು ಹೇಳಿ ಗುಮಾಸ್ತನ ಕೈಯಿಂದ ಬರೆಯಿಸುತ್ತಿರುವರು. ಪಕ್ಕದ ಕೋಣೆಯಿಂದ ಅವರಿಗೆ ತಿಂಡಿ ತಂದುಕೊಡು ತ್ತಿರುವರು. ಮಸಲಾ ಅಡಿಗೆಯವರು ದೋಸೆ ತಂದುಕೊಟ್ಟರು ಎಂದಿಟ್ಟು ಕೊಳ್ಳೋಣ. ಮಾಧವರಾಯರು ಒಂದು ಚೂರನ್ನು ಬಾಯಿಗೆ ಹಾಕಿ ಕೊಂಡೋ ಹಾಕಿಕೊಳ್ಳುವುದಕ್ಕೆ ಮುಂಚೆಯೋ,

"ಏನೋ? ಪಕೋಡ ಇಲ್ಲವೇನು ?"—ಎನ್ನುವರು. ಮರುಕ್ಷಣದಲ್ಲಿಯೇ ಬಿಸಿಬಿಸಿ ಪಕೋಡ ಅವರ ಮುಂದೆ ಬರುವುದು. ಆಮೇಲೆ,

"ಎಷ್ಟು ದಿನವಾಯಿತೋ 'ಫೀವರ್' ತಿಂದು ?"

—ಎನ್ನುವರು. ಉತ್ತರಕ್ಷಣದಲ್ಲಿಯೇ 'ಫೀವರ್' ಸಿದ್ಧ. ಹಾಗೆ ಅವರು

ಕೇಳಿದ ತಿಂಡಿ ತತ್‌ಕ್ಷಣ ಬಾರದಿದ್ದರೆ ಅಡಿಗೆಯವನಿಗೆ ಎತ್ತಂಗಡಿ.

ಹೀಗೆ ಅವರು ಮನೆಯಲ್ಲಿದ್ದಷ್ಟು ಹೊತ್ತೂ ಏನಾದರೊಂದು ತಿನ್ನುತ್ತಲೇ ಇದ್ದರಂತೆ. ಅವರು ಹಾಗೆ ತಿನ್ನುತ್ತಿದ್ದದ್ದರಿಂದಲೇ ಅವರಿಗೆ ಅಂಥ ಅದ್ಭುತವಾದ ಮೇಧಾಶಕ್ತಿ !—ಎಂದು ಕೆಲವುಂದಿಯ ವಾದ.

ಸರ್ ಎ. ಶೇಷಯ್ಯಶಾಸ್ತ್ರಿಗಳವರೂ ಭೋಜನಕ್ಕೆ ಎತ್ತಿದ ಕೈ. ಇವರು ಪುದುಕೋಟೆ ಸಂಸ್ಥಾನದ ದಿವಾನರಾಗಿದ್ದು ಹೆಸರುವಾಸಿಯಾಗಿದ್ದರು. ಮಹಾ ಮೇಧಾವಿಗಳು. ಒಳ್ಳೆಯ ಸಂಸ್ಕೃತ ವಿದ್ವಾಂಸರು. ಇವರು ಸ್ಥೂಲಕಾಯರು. ಮೈ ಬಹು ಸ್ಥೂಲ. ಏಳುವುದು, ಕೂಡುವುದು, ಓಡಾಡುವುದು, ಬಹುಶ್ರಮ. ಅವರು ಭೋಜನಕ್ಕಾಗಿ ಮಾಡಿಕೊಂಡಿದ್ದ ಏರ್ಪಾಟು ಕೇಳಲು ಚೆನ್ನಾಗಿದೆ.

ಕೋರ್ಟುಗಳಲ್ಲಿರುವಂಥ ಒಂದು ಅರ್ಧಚಂದ್ರಾಕಾರದ ಮೇಜಿನ ಮಧ್ಯದ ಬಿಡುವಿನಲ್ಲಿ ಅವರು ಕೂಡುತ್ತಿದ್ದರು—ಪದ್ಮಾಸನ ಹಾಕಿಕೊಂಡು ನೆಲದಮೇಲೆ ಕೂಡುತ್ತಿದ್ದರು. ಎದೆಯ ಎತ್ತರಕ್ಕೆ ಸರಿಯಾಗಿ ಆ ಮೇಜು. ಅವರ ಬೃಹತ್ಕುಕ್ಷಿಯ ಗಾತ್ರಕ್ಕೆ ಅನುವಾಗಿ ಮೇಜಿನ ಮಧ್ಯದ ಬಿಡುತಿ. ಆ ಮೇಜಿನ ಮೇಲೆ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೂ ಬಾಳೆಯೆಲೆಗಳು. ನಾನಾ ಬಗೆಯ ಶಾಕಪಾಕ ಭಕ್ಷ್ಯಗಳು. ಅವರು ಎಲ್ಲಿ ಕೈ ಇಟ್ಟರೆ ಅಲ್ಲಿ ಒಂದು ಭಕ್ಷ್ಯ. ಬಗ್ಗಬೇಕಾದ ಪ್ರಯಾಸವಿಲ್ಲ. (ಸಾಧ್ಯವೂ ಇಲ್ಲ.) ಕೈಯಿಟ್ಟಕಡೆ ಭಕ್ಷ್ಯ. ಹೀಗೆ ಸಾವಕಾಶವಾಗಿ ಭೋಜನ ಮಾಡಿದವರು ಸರ್ ಎ. ಶೇಷಯ್ಯಶಾಸ್ತ್ರಿಗಳು.

## ಆನಂದರಾಯರು

ಟಿ. ಆನಂದರಾಯರು ಭೋಜನದಲ್ಲಿ ತಂದೆ ಮಾಧವರಾಯರಂತಲ್ಲದೆ ಸಾಮಾನ್ಯರಂತಿದ್ದರೂ ಬಂಧುಮಿತ್ರರಿಗೆ ಭೋಜನ ಮಾಡಿಸುವುದರಲ್ಲಿ ಯಶೋವಂತರಾಗಿದ್ದರು. ಅತಿಥಿಪೂಜೆಯಲ್ಲಿ ಪ್ರಶಸ್ತರಾದ ಇನ್ನೊಬ್ಬರು ಎಳಂದೂರಿನ ಶ್ರೀಮಂತರಾದ ನರಸಿಂಗರಾವ್ ಪೂರ್ಣಯ್ಯನವರು. ನರಸಿಂಗರಾಯರೂ, ಆನಂದರಾಯರೂ ಭೋಜನಪಂಕ್ತಿಗಳ ಮೇಲ್ವಿಚಾರಣೆಗಾಗಿ ಇಬ್ಬರಿಬ್ಬರನ್ನು ನಿಯಮಿಸಿಕೊಂಡಿದ್ದರು. ಆ ಇಬ್ಬರು ಪಾಲಘಾಟ್ ಅಯ್ಯರುಗಳು. ಅವರು ಶುಭ್ರವಾದ ಬಟ್ಟೆಯುಟ್ಟು, ಕಿವಿಯಲ್ಲಿ ಹತ್ತು ಕಡಕನ್ನೂ ಕೈಯಲ್ಲಿ ಉಂಗುರವನ್ನೂ ತೊಟ್ಟು, ಹಣೆಯ ಮೇಲೆ

ವಿಭೂತಿಯಿಟ್ಟು ಅಂಗವಸ್ತ್ರವನ್ನು ಭುಜದ ಮೇಲೆ ಧರಿಸಿ, ಉಟ್ಟಿದ್ದ ದಟ್ಟಿಗಳನ್ನು ಮೊಳಕಾಲಿನಿಂದ ಕೊಂಚ ಮೇಲಕ್ಕೆ ಕಟ್ಟಿ ಪಂಕ್ತಿಗಳ ಎರಡು ಕೊನೆಗಳಲ್ಲಿ ಇಲ್ಲೊಬ್ಬ ಅಲ್ಲೊಬ್ಬ ನಿಲ್ಲುವರು; ಕೈಯಲ್ಲಿ ಬೀಸಣಿಗೆ ಹಿಡಿದು ಬೀಸುವ ಶಾಸ್ತ್ರ ಮಾಡುವರು. ಅವರ ಮುಖ್ಯ ಕರ್ತವ್ಯವೇನೆಂದರೆ ಸಾಲಿನ ಕೊನೆಯಲ್ಲಿ ನಿಂತು ಯಾವ ಯಾವ ಅತಿಥಿಯ ಎಲೆಯಲ್ಲಿ ಯಾವ ಯಾವ ಪದಾರ್ಥ ಮುಗಿದುಹೋಗಿದೆ, ಯಾವ ಯಾವ ಪದಾರ್ಥದಲ್ಲಿ ಹೆಚ್ಚು ರುಚಿ ಕಾಣುತ್ತಿದ್ದಾನೆ–ಎಂಬುದನ್ನು ತಾವು ಮಾತನಾಡದೆ ಕಣ್ಣಿಂದಲೇ ಕಂಡುಕೊಳ್ಳಬೇಕು. ಹಾಗೆ ಕಂಡು ಅಲ್ಲಿಗೆ ಬೇಕಾದ ಸಾಮಾನನ್ನು ತಮ್ಮ ಕೈಸನ್ನೆಯಿಂದ ಬಡಿಸುವವರಿಗೆ ತಿಳಿಸಿ ಆ ಪದಾರ್ಥ ಎಲೆಗೆ ಸೇರುವಂತೆ ನೋಡಿಕೊಳ್ಳಬೇಕು. "ಇದು ಬೇಕು" ಎಂದು ಯಾರೂ ಕೇಳುವ ಹಾಗಿರಬಾರದು. ಮೇಲ್ವಿಚಾರಕರು ಅತಿಥಿಗಳನ್ನು ಭೋಜನಾರಂಭಕ್ಕೆ ಮೊದಲೇ ಕಂಡು ಕೈ ಮುಗಿದು ಬೇಡಿಕೊಳ್ಳುವರು:

"ನಿಮಗೆ ಏನು ಬೇಕಾದರೂ ದಯವಿಟ್ಟು ಅದನ್ನು ಬಾಯಿಂದ ಕೇಳಬೇಡಿ. ನಮ್ಮ ಕಡೆ ನೋಡಿದರೆ ಸಾಕು. ನೀವು ಪಲ್ಯ, ಮಜ್ಜಿಗೆ ಪಳದ್ಯ—ಎಂದೇನಾದರೂ ಒಂದು ಸಾರಿ ಕೇಳಿದ್ದು ನಮ್ಮ ಯಜಮಾನರ ಕಿವಿಗೆ ಬಿದ್ದರೆ ನಮಗೆ ಎಂಟಾಣೆ ಜುಲ್ಮಾನೆ ಹಾಕುತ್ತಾರೆ. ನಾವು ಸಿದ್ಧರಾಗಿದ್ದೇವೆ ನಿಮ್ಮ ಸೇವೆ ಮಾಡಲು."

ಆನಂದರಾಯರು ಮಾಡಿಸುತ್ತಿದ್ದ ಊಟವೂ ಭರ್ಜರಿ. ನರಸಿಂಗರಾಯರದೂ ಅಷ್ಟೇ. ನಾಲ್ಕು ವಿಧದ ಸಾರುಗಳು, ಎರಡು ವಿಧದ ಹುಳಿ, ಎರಡು ವಿಧದ ತೊವ್ವೆ, ಕರಿದದ್ದು, ಹುರಿದದ್ದು, ಸಿಹಿ, ಹುಳಿ, ಖಾರ, ಸಪ್ಪೆ—ಹೀಗೆ ಭೋಜನ ಇಬ್ಬರು ಆತಿಥೇಯರ ಮನೆಗಳಲ್ಲೂ ಸಮಸ್ತ ರುಚಿವಂತರಿಗೂ–ಹಲ್ಲಿದ್ದವರಿಗೂ, ಹಲ್ಲಿಲ್ಲದವರಿಗೂ ಸಹ–ತೃಪ್ತಿಪ್ರದವಾಗಿರುತ್ತಿತ್ತು.

## ಗದಗಿನ ಪ್ರವಾಸ

ಕೆಲವು ವರ್ಷಗಳ ಹಿಂದೆ ನಾವು ಏಳೆಂಟು ಜನ ಪ್ರವಾಸದಲ್ಲಿದ್ದೆವು. ಮಾರ್ಗವಶಾತ್ ಗದಗಿಗೆ ಹೋದೆವು. ಅಲ್ಲಿ ಯಾರ ಮನೆಯಲ್ಲಿಯೋ ಇಳಿದುಕೊಂಡಿದ್ದೆವು: ಹೆಸರು ಮರೆತುಹೋಗಿದೆ. ಅಲ್ಲಿ ನಾವು ಊಟ ಮಾಡಬೇಕಾಗಿರಲಿಲ್ಲ. ನಮ್ಮ ಮುಖಂಡರಾದ ವೆಂಕಟನಾರಣಪ್ಪನವರು ಸ್ವಯಂಪಾಕದವರು, ಮಡಿ. ಮಿಕ್ಕವರಿಗೆ ಹುಯಿಲಗೋಳ ನಾರಾಯಣ

ರಾಯರು ಮೊದಲಾದ ಸ್ನೇಹಿತರ ಮನೆಗಳಲ್ಲಿ ಔತಣ. ನಾವು ಆ ಊರು ತಲಪಿದ್ದು ಒಂದು ಸೋಮವಾರ ಸಂಜೆ ಎಂದಿಟ್ಟುಕೊಳ್ಳೋಣ. ಅಲ್ಲಿಂದ ಹೊರಟದ್ದು ಬುಧವಾರ ಬೆಳಗ್ಗೆ. ನಾವು ಅಲ್ಲಿದ್ದಾಗ ಆ ಮನೆಯವರಿಂದ ಪಾತ್ರೆ, ನೀರು ಮೊದಲಾದ ಸೌಕರ್ಯಗಳು ಯಥೇಷ್ಟವಾಗಿರುತ್ತಿದ್ದವು. ಆ ಉಪಕಾರಕ್ಕಾಗಿ ನಾವು ಅವರಿಗೆ ಏನಾದರೂ ಪ್ರತಿಫಲ ಕೊಡಬೇಕೆಂದು ವೆಂಕಟನಾರಣಪ್ಪನವರ ಹಟ. ಆದರೆ ಆ ಮನೆಯವರು ಹಣ ತೆಗೆದುಕೊಳ್ಳು ವವರಲ್ಲ. ಕಡೆಗೆ ಯೋಚನೆ ಮಾಡಿ ಐದು ರೂಪಾಯಿ ನೋಟೊಂದನ್ನು ಅಲ್ಲಿ 'ಮರೆತು' ಬರತಕ್ಕದ್ದೆಂದು ನಿಶ್ಚಯಿಸಿ ಹಾಗೆ ನಡಸಿದೆವು. ಮನಸ್ಸು ಸಮಾಧಾನವಾಗಿತ್ತು. ಬೆಂಗಳೂರಿಗೆ ಬಂದ ನಾಲ್ಕೈದು ದಿವಸಗಳೊಳಗಾಗಿ ಆ ಐದು ರೂಪಾಯಿ ನಮಗೇ ವಾಪಸ್ ಬಂತು: "ನೀವು ಯಾರೋ ಇದನ್ನು ಮರೆತಂತೆ ತೋರುತ್ತದೆ. ಈ ಹಣ ನಮ್ಮದಲ್ಲ. ನೀವೇ ಹಿಂದಕ್ಕೆ ತೆಗೆದುಕೊಳ್ಳತಕ್ಕದ್ದು"–ಎಂದು ಮನಿ ಆರ್ಡರ್ ಕೂಪನ್ನಿನಲ್ಲಿ ಬರೆದಿತ್ತು. ವೆಂಕಟನಾರಣಪ್ಪನವರು ನಗುತ್ತಾ "ಏನಪ್ಪಾ, ಹಿಂಗೂ ಉಂಟೆ!" ಎಂದರು. ಒಂದೆರಡು ದಿನ ಹೀಗೆ ಯೋಚನೆ ಮಾಡಿ ಆಮೇಲೆ ಅವರಿಗೆ ಪುನಃ ಬರೆದ ದ್ದಾಯಿತು. "ಈ ಹಣವನ್ನು ಹಿಂದಕ್ಕೆ ತೆಗೆದುಕೊಳ್ಳಲಾಗುವುದಿಲ್ಲ. ಹೇಗಾದರೂ ದಯವಿಟ್ಟು ನೀವೇ ವಿನಿಯೋಗಿಸಬೇಕು. ದೇವಸ್ಥಾನಕ್ಕೆ ಕೊಡಬಹುದು"—ಹೀಗೆಂದು. ಅನಂತರ ಏನಾಯಿತೋ ಗೊತ್ತಿಲ್ಲ.

## ಋಣವಿಮೋಚನೆ

ಈಗ ನಾನು ಹೇಳಹೊರಡುವುದು ಈಗ್ಗೆ ಸುಮಾರು ೭೦ ವರ್ಷದ ಹಿಂದಿನ ಮಾತು. ಆಗ ನಮ್ಮ ಜನಕ್ಕೆ ಹೊಟೇಲಿನ ವಾಡಿಕೆ ಇರಲಿಲ್ಲ. ಬೆಂಗಳೂರು ವಿನಾ ಸಣ್ಣ ಊರುಗಳಲ್ಲಿ ಹೊಟೇಲ್ ಎಂಬ ಸಂಸ್ಥೆಯೇ ಇರಲಿಲ್ಲ. ಹೊಟೇಲನ್ನು ನಡಸುವುದೂ ಹೊಟೇಲಿನಲ್ಲಿ ಊಟ ಮಾಡುವುದೂ ಬ್ರಾಹ್ಮಣ ನಿಗೆ ಅಕಾರ್ಯವೆಂಬ ಭಾವನೆ ಸಾಮಾನ್ಯವಾಗಿತ್ತು.

ಆ ಕಾಲದಲ್ಲಿ ಯಾವುದಾದರೂ ಕೋರ್ಟು ಕಚೇರಿ ಕಾರ್ಯದ ನಿಮಿತ್ತ ದಿಂದ ಜನ ಬೆಂಗಳೂರು ಕೋಲಾರ ಮುಂತಾದ ಡಿಸ್ಟ್ರಿಕ್ಟುಗಳ ಮುಖ್ಯ ಪಟ್ಟಣಗಳಿಗೆ ಹೋಗಲೇಬೇಕಾದಾಗ, ಒಂದು ಉಪಾಯ ಮಾಡುತ್ತಿದ್ದರು. ತಮಗೆ ಗೊತ್ತಿದ್ದ ಒಬ್ಬಾನೊಬ್ಬ ಬಂಧು ಅಥವಾ ಇಷ್ಟರ ಮನೆಯಲ್ಲಿ ಇಳಿದು ಕೊಳ್ಳುವುದು. ಆದರೆ ಅವರಿಗೆ ದುಡ್ಡು ಕೊಡತಕ್ಕದ್ದಲ್ಲ. ಅವರು ದುಡ್ಡು

ತೆಗೆದುಕೊಳ್ಳತಕ್ಕವರೂ ಇಲ್ಲ. ಅನ್ನವಿಕ್ರಯವು ನಿಷಿದ್ಧ ವ್ಯಾಪಾರ. ಆದರೆ ಬಿಟ್ಟಿ ಊಟ ಮಾಡತಕ್ಕದ್ದಲ್ಲ. ಒಂದು ದೃಷ್ಟಿಯಿಂದ ಅದು ಋಣ. ಆ ಹೊರೆಯನ್ನೂ ಹೊತ್ತುಕೊಳ್ಳಬಾರದು. ಇದಕ್ಕೆ ಉಪಾಯವೇನೆಂದರೆ, ಊಟಕ್ಕೆ ಹೋದವರು ಸ್ನಾನಕ್ಕಾಗಿ ಹೋದಾಗ ಬಚ್ಚಲಮನೆಯಲ್ಲಿಯೋ ಊಟದ ಮಣೆಯ ಕೆಳಗಡೆಯೋ ನಸ್ಯದ ಪಟ್ಟಿಯನ್ನು ಮರೆತುಬಿಡುವುದು, ಅದರಲ್ಲಿ ನಾಲ್ಕಾಣೆ-ಎಂಟಾಣೆ ನಾಣ್ಯಗಳನ್ನು ಬಿಟ್ಟಿರುವುದು. ಮನೆಯ ಸ್ವಂತಕರ್ತರು ಅವನ್ನು ತೆಗೆದುಕೊಂಡು ಮಾತನಾಡದಿದ್ದರೆ ಒಳಗೊಳಗೇ ಸಂತೋಷ. ಅವರು ಆ ಪ್ರಸ್ತಾಪವನ್ನೆತ್ತಿದರೆ ಊಟಮಾಡಿದವರು-

"ಓಹೋ—ಮರೆತೇಹೋಗಿದ್ದೆ. ಹಾಗೇನು? ಒಳ್ಳೆಯದಾಯಿತು"—ಎಂದು ಜವಾಬು ಹೇಳುವದು. ಆಮೇಲೆಯೂ ಮನೆಯವರು ಅದು ಕೂಡ ದೆಂದು ಹಟ ಮಾಡಿದರೆ ಒಪ್ಪಿಕೊಂಡು, ಪೇಟೆಗೆ ಹೋಗಿ ಒಂದಷ್ಟು ಸೌತೇ ಕಾಯನ್ನೋ, ನಿಂಬೆಹಣ್ಣನ್ನೋ ತಂದು ಸುರಿದು,

"ಇದು ನಮ್ಮ ಊರಿನಿಂದ ಬಂದದ್ದು, ನಾನು ಕೊಂಡದ್ದಲ್ಲ. ಆದದ್ದ ರಿಂದ ನೀವು ಇದಕ್ಕೆ ಏನನ್ನೂ ಕೊಡಬಾರದು"—ಎಂದು ಹೇಳುವುದು.

ಹೀಗೆ ಆ ಕಾಲದ ಜನ ಊಟದ ಹಂಗನ್ನು ತೀರಿಸಿಕೊಳ್ಳುತ್ತಿದ್ದರು.

## ನಂಜುಂಡಪ್ಪನ ಹೊಟೇಲು

ಇಂಥ ಕಾಲದಲ್ಲಿ-ಸುಮಾರು ೧೯೦೦ರಲ್ಲಿ-ಮುಳಬಾಗಿಲಿನಲ್ಲಿ ಹೊಟೇಲು ಇರಲಿಲ್ಲ. ಆಗ ಪ್ರಾರಂಭವಾಯಿತು ಆ ಊರಿನಲ್ಲಿ, ನವನಾಗರಿಕತೆಯ ಈ ಸಂಸ್ಥೆ. ಅದನ್ನು ಪ್ರಾರಂಭ ಮಾಡಿದಾತ ನಂಜುಂಡಯ್ಯನೆಂಬ ಬಡಗನಾಡು ಬ್ರಾಹ್ಮಣ. ಆತ ಆ ಊರಿನ ಸಮೀಪದ ಮೂಗಾಂಡಹಳ್ಳಿ ಪ್ರಾಂತದವ ಎಂದು ನನ್ನ ಜ್ಞಾಪಕ.

ಆತ ತನ್ನ ಸಹಾಯಕ್ಕಾಗಿ ಒಬ್ಬ ಹೆಂಗಸನ್ನೂ ಕರೆದುಕೊಂಡು ಬಂದಿದ್ದ ನೆಂದು ಜನ ಹೇಳಿಕೊಳ್ಳುತ್ತಿದ್ದರು.

ನಂಜುಂಡಪ್ಪನ ಹೊಟೇಲು ನಮ್ಮ ಬೀದಿಯ ಹಿಂದಿನ ಬೀದಿಯಲ್ಲಿ ಕೊಪ್ಪರದವರ ಸತ್ರದ ಮುಂದುಗಡೆಗೆ ಸಮೀಪವಾಗಿ-ನರ್ತಕ ಶಿಖಾಮಣಿ ಸೀತಮ್ಮ ಎಂಬಾಕೆಯ ಮನೆಯ ಪಕ್ಕದಲ್ಲಿ ಇತ್ತು. ಗಿರಾಕಿಗಳು ಅಷ್ಟೇನೂ ಹೆಚ್ಚಾಗಿರಲಿಲ್ಲ. ಮೊದಮೊದಲು ಎರಡು ಹೊತ್ತಿನ ಊಟದ ವ್ಯವಸ್ಥೆ ಮಾತ್ರ ಇತ್ತು. ಕ್ರಮೇಣ ಫಲಾಹಾರ ಸಾಮಾನುಗಳೂ ಬಂದವು.

ಆಗ್ಗೆ ನಾನು ಬಹುಶಃ ಕನ್ನಡ ನೂರು-ನಾಲ್ಕನೆಯ ತರಗತಿಯಲ್ಲಿ ವಿದ್ಯಾರ್ಥಿಯಾಗಿದ್ದೆ. ನನ್ನ ಮನೆಯಲ್ಲಿ ವಿಧವಿಧವಾದ ತಿಂಡಿ ಪದಾರ್ಥಗಳು ದಿನಾಗಲೂ ಯಥೇಷ್ಟವಾಗಿ ಆಗುತ್ತಿದ್ದದ್ದರಿಂದಲೂ, ಮೇಲ್ಖರ್ಚಿಗಾಗಿ ನನ್ನ ಹಿರಿಯರಾರೂ ನನಗೆ ಕಾಸು ಕೊಡುತ್ತಿರಲಿಲ್ಲವಾದದ್ದರಿಂದಲೂ, ನನಗೆ ನಂಜುಂಡಪ್ಪನ ಫಲಾಹಾರದ ಸಂತೋಷ ಸಿಕ್ಕಲಿಲ್ಲ. ಆದರೆ ನನಗೆ ಸಹಪಾಠಿಯೂ, ಸ್ನೇಹಿತನೂ ಆಗಿದ್ದ ವೆಂಕಟರಾಯ ಎಂಬಾತ—ನನ್ನ ವಯಸ್ಸಿನವನು ಅಥವಾ ಒಂದೆರಡು ವರ್ಷ ದೊಡ್ಡವನು—ನಮ್ಮ ಮನೆಯಲ್ಲಿದ್ದ.

### ವೆಂಕಟರಾಯನ ಅಪಥ್ಯ

ಈ ವೆಂಕಟರಾಯನ ವಿಷಯ ಹೇಳಬೇಕಾದದ್ದು. ಈತ ಮುಳಬಾಗಿಲಿನ ಸಮೀಪದ ಒಂದು ಹಳ್ಳಿಯವನು. ಈತನ ತಂದೆ ಸಂಜೀವಪ್ಪನವರು ನನ್ನ ತಾತನ ಕಕ್ಷಿಗಾರರು. (ಇದನ್ನು ಬೇರೆ ಕಡೆ ಪ್ರಸ್ತಾಪಿಸಿದ್ದೇನೆ.) ಸಂಜೀವಯ್ಯನವರ ಮನೆಗೂ ನಮ್ಮ ಮನೆಗೂ ಅತ್ಯಂತ ಗಾಢವಾದ ಸ್ನೇಹವಿತ್ತು. ಸಂಜೀವಯ್ಯನವರ ಹಿರಿಯ ಮಗ ವೆಂಕಟೇಶಯ್ಯ. ವೆಂಕಟೇಶಯ್ಯ ನನ್ನ ತಂದೆಗೆ ಅತ್ಯಂತ ಸ್ನೇಹಿತರು. ಕಿರಿಯ ಮಗ ನಮ್ಮ ವೆಂಕಟರಾಯ. ಈ ಹುಡುಗನನ್ನು ವಿದ್ಯಾಭ್ಯಾಸಕ್ಕಾಗಿ ನಮ್ಮ ಮನೆಯಲ್ಲಿ ಬಿಟ್ಟಿದ್ದರು. ಸಂಜೀವಯ್ಯನವರಾಗಲಿ, ವೆಂಕಟೇಶಯ್ಯನವರಾಗಲಿ ಹದಿನೈದಿಪ್ಪತ್ತುದಿನಕ್ಕೊಮ್ಮೆ ಮುಳಬಾಗಿಲಿಗೆ ಬಂದಾಗ ವೆಂಕಟರಾಯನನ್ನು ನೋಡಿ ವಿಚಾರಿಸಿಕೊಂಡು, ಅವನ ಕೈಗೆ ಅರ್ಧಾಣೆ, ಒಂದಾಣೆ ಕೊಟ್ಟು ಪ್ರೋತ್ಸಾಹದ ಮಾತನ್ನಾಡಿ ಹೋಗುತ್ತಿದ್ದರು. ಹೀಗೆ ವೆಂಕಟರಾಯನ ಕೈಯಲ್ಲಿ ಕೊಂಚ ಪುಡಿಕಾಸು ಓಡಾಡುತ್ತಿತ್ತು.

ಒಂದು ದಿನ ವೆಂಕಟರಾಯನಿಗೆ ಹೊಟ್ಟೆನೋವಾಯಿತಂತೆ. ಅದನ್ನು ನನ್ನ ಅಜ್ಜಿ ಮುದುಕಿಯ ಸಂಗಡ ಹೇಳಿಕೊಂಡ. ಆಕೆಗೆ ಹಳೆಯ ಕಾಲದ ಗಿಡಮೂಲಿಕೆಗಳ ಔಷಧ ಗೊತ್ತಿತ್ತು. ಆದರೆ ಆಕೆ ಕೇಳಿದಳು :

"ಏನು ಅಪಥ್ಯ?"

ವೆಂಕಟರಾಯ ಬಾಯಿ ಬಿಡಲಿಲ್ಲ. ಅಂದು ರಾತ್ರಿ ಪುನಃ ಹೊಟ್ಟೆನೋವು ಬಂತು. ಆಗ ನನ್ನ ಸೋದರಮಾವ ಅವನನ್ನು ಕುರಿತು,

"ಗಟ್ಟಿಯಾಗಿ ಮುಲುಗಬೇಡ. ಔಷಧಿ ಹಾಕಿಬಿಡುತ್ತಾರೆ"—ಎಂದ. ವೆಂಕಟರಾಯನು ಔಷಧ ಕುಡಿಯಲು ಹೆದರಿದ್ದ. ಆದರೆ ನೋವು. ಏನು

ಮಾಡುವುದು ? ಬೋರಲು ಮಲಗಿಕೊಂಡು ಕಿಬ್ಬೊಟ್ಟೆಯನ್ನು ನೆಲಕ್ಕೆ ಅದುಮಿಕೊಳ್ಳುವಂತೆ ನನ್ನ ಮಾವ ಅವನಿಗೆ ಉಪದೇಶ ಮಾಡಿದ. ವೆಂಕಟ ರಾಯ ಹಾಗೆ ಮಾಡಿದ. ಅಪಾನವಾಯು. ನಾನಾ ವಿಧ ಶಬ್ದಪರಂಪರೆ. ಇದು ರಾತ್ರಿಯೆಲ್ಲ ನಡೆಯಿತು. ಕೊಂಚ ನಿಲ್ಲುವುದು ; ಹತ್ತು ನಿಮಿಷವಾದ ಮೇಲೆ ಮತ್ತೆ ಫರ್‌ಭರ್‌ ಝಂಕಾರಗಳು. ಮನೆಮಕ್ಕಳಿಗೆ ನಿದ್ರೆಯಿಲ್ಲ. ಎಲ್ಲ ರಿಗೂ ನಗು. ವೆಂಕಟರಾಯನಿಗೆ ನೋವಿನ ಜೊತೆಗೆ ಅವಮಾನ.

ಮೂರನೆಯ ದಿನ ನೋವು ಇನ್ನೂ ಜೋರಾಯಿತು. ವೆಂಕಟರಾಯ ಅಳು ವುದಕ್ಕಾರಂಭಿಸಿದ. ಬಗ್ಗಿ ಕುರಿ ಕೋಣಗಳಂತೆ ಮುಂಗೈಗಳನ್ನು ನೆಲದ ಮೇಲೆ ಊರಿಕೊಂಡು ಅತ್ತ.

## ಗುಟ್ಟು ಬಯಲಾಯಿತು

ಆಗ ನಮ್ಮ ಅಜ್ಜಿ ಅಲ್ಲಿ ಬಂದು,

"ಎಲಾ ವೆಂಕಟರಾಯ, ಈಗಲಾದರೂ ಹೇಳಪ್ಪ. ಏನಾದರೂ ಮಾಡಿ ಯೇನು"—ಎಂದು ಅಂಗಲಾಚಿದಳು. ವೆಂಕಟರಾಯನಿಗೆ ಬಿಗುಮಾನ. ಅಷ್ಟು ಹೊತ್ತಿಗೆ ನನ್ನ ತಂದೆ ಮನೆಗೆ ಬಂದರು ; ಸಂದರ್ಭವನ್ನು ನೋಡಿ ಘಾಟರಿಸಿದರು. ವೆಂಕಟರಾಯ ಹೆದರಿದ. ಆಮೇಲೆ ಹೇಳಿದ (ತೆಲುಗಿನಲ್ಲಿ) :

"ಮೊನ್ನೆ ನಮ್ಮಣ್ಣ ಬಂದಿದ್ದಾಗ ಕಾಸುಕೊಟ್ಟು, 'ಏನಾದರೂ ತೆಗೆದುಕೋ'-ಎಂದ. ನಾನು ನಂಜುಂಡಯ್ಯನ ಅಂಗಡಿಗೆ ಹೋಗಿ ಇಥೆರಡು, ಅದೆರಡು ('ಇವಿರೆಂಡು, ಅವಿರೆಂಡು') ಬಾಯಲ್ಲಿ ಹಾಕಿಕೊಂಡೆ. ಅವನ ಮನೆ ಹಾಳಾಗ...."

ಎಲ್ಲರೂ ನಗುತ್ತಿದ್ದರು. ಯಾರೋ ಕೇಳಿದರು :

"ರೆಂಡು ಅಂಟೆ ?" (ಎರಡು ಅಂದ್ರರೆ ?)

"ರೆಂಡು ಪಕೋಡಾಲು, ರೆಂಡು ಬೋಂಡಾಲು, ರವಂತ ಕಾರಾಶೇವ" (ಎರಡು ಪಕೋಡ, ಎರಡು ಬೋಂಡಾ, ಒಂದಷ್ಟು ಕಾರಾಶೇವೆ.)

ಎಲ್ಲರೂ ನಕ್ಕರು. ನನ್ನ ತಂದೆ ಮಾತ್ರ ನಗಲಿಲ್ಲ. ದೇವರ ಮನೆಯಿಂದ ಉದ್ಧರಣೆ ತಂದು ಅದರ ಕಾಲನ್ನು ವೆಂಕಟರಾಯನ ಬಾಯಲ್ಲಿಟ್ಟು ಹಲ್ಲುಗಳ ನ್ನಗಲಿಸಿದರು. ವೆಂಕಟರಾಯ ಅಷ್ಟು ಗಟ್ಟಿಯಾಗಿ ಹಲ್ಲುಗಳನ್ನು ಸೇರಿಸಿ ಕೊಂಡಿದ್ದ—ಔಷಧಕ್ಕೆ ಬಾಯಿ ಬಿಡದೆ. ಹಲ್ಲುಗಳು ಹಿಗ್ಗಿದ ಮೇಲೆ ನಮ್ಮ ಅಜ್ಜಿ ಔಷಧಿ ತಂದರು. ಅದು ಹಸಳೆ ಹುಳಿಯಂತೆ.

## ಕಡಲೆ ಹುಳಿ

ಕಡಲೆ ಹುಳಿ ಎಂದರೆ ಅದೊಂದು ಪಾಕವಸ್ತುವಲ್ಲ. ಕಡಲೆಗಿಡದ ಪೈರು, ಇನ್ನೂ ಹೊಲದಲ್ಲಿರುವಾಗ ಅದರ ಮೇಲೆ ಒಂದು ತೆಳ್ಳನೆಯ, ಬೆಳ್ಳನೆಯ ಬಟ್ಟೆಯನ್ನು ಹಾಸುತ್ತಾರೆ. ರಾತ್ರಿ ಹಿಮ ಆ ಬಟ್ಟೆಯ ಮೇಲೆ ಬೀಳುತ್ತದೆ. ಹೀಗೆ ಅದರ ಒಂದು ಕಡೆ ಚಂದ್ರರಸವೂ ಇನ್ನೊಂದು ಕಡೆ ಎಳೆಯ ಕಡಲೆ ಕಾಳಿನ ಸಾರವೂ ಎರಡೂ ಬೆರೆತುಕೊಂಡು ಒಂದು ದ್ರವ್ಯವಾಗುತ್ತದೆ. ಬೆಳಗ್ಗೆ ಬಟ್ಟೆಯನ್ನು ತೆಗೆದು ಒಂದು ಬಟ್ಟಲಿನೊಳಕ್ಕೆ ಹಿಂಡಿಕೊಳ್ಳುತ್ತಾರೆ. ಅದಕ್ಕೆ ಸೈಂಧವ ಲವಣ ಮೊದಲಾದ ಔಷಧ ವಸ್ತುಗಳನ್ನು ಸೇರಿಸುತ್ತಾರೆ. ಹೀಗೆ ತಯಾರಾದದ್ದನ್ನು ಶೀಸೆಗಳಲ್ಲಿ ಎತ್ತಿಟ್ಟುಕೊಳ್ಳುತ್ತಾರೆ. ಇದು ಕಡಲೆ ಹುಳಿ. ಅಜೀರ್ಣ ವ್ಯಾಧಿಗಳಿಗೆ ರಾಮಬಾಣ.

ಈ ಬಾಣವನ್ನು ನಮ್ಮ ರಾಯನ ಹೊಟ್ಟೆಯ ಮೇಲೆ ಪ್ರಯೋಗ ಮಾಡಿದ್ದಾಯಿತು. ಆಮೇಲೆ ಇನ್ನೊಂದು ಸ್ವಾರಸ್ಯ. ಇದನ್ನು ಪೂರ್ವಾಷಾಢ-ಉತ್ತರಾಷಾಢಗಳೆಂದು ಭಾವಿಸಬಹುದು. ಹಾಗೆಂದರೆ ವಾಂತಿ ಭೇದಿ.

ಇಷ್ಟಾದ ಮೇಲೆ ವೆಂಕಟರಾಯನ ನೋವು ನಿಂತಿತು.

ನಾಲ್ಕೈದು ದಿನ ಕಳೆದ ಮೇಲೆ ಆತನ ಹಿರಿಯರು ಬಂದು ಆತನನ್ನು ಕರೆದುಕೊಂಡು ಹೋದರು.

ಅನಂತರ ಪುಂಗನೂರಿನ ಪ್ರಸಿದ್ಧರಾದ ಉಮಾ ಪಂಡಿತರು ಒಂದು ತಿಂಗಳು ವೆಂಕಟರಾಯನನ್ನು ಪಥ್ಯದಲ್ಲಿಟ್ಟು ಆರೋಗ್ಯವನ್ನು ಹಿಂತಿರುಗಿಸಿದರು.

# ಹೃದಯ ಸೌಂದರ್ಯ: ಒಂದು ಮಧುರ ಸ್ಮೃತಿ

ಬಹುಶಃ ೧೯೩೦-೩೧ ಇರಬಹುದು. ಬೆಂಗಳೂರು ಹೊಸ ತರಗುಪೇಟೆ ಪೂರ್ವದಿಕ್ಕಿನ ಮಂಡಿ ಅಂಗಡಿ ಸಾಲು: ವಿಕ್ಟೋರಿಯ ಆಸ್ಪತ್ರೆಯ ಪಶ್ಚಿಮ ಕಾಂಪೌಂಡ್ ಗೋಡೆಯ ಎದುರಾಗಿ ಮಂಡಿ ಅಂಗಡಿಗಳ ಪೈಕಿ ಮೂರನೆಯದೋ ನಾಲ್ಕನೆಯದೋ ದಿವಂಗತ ಧರ್ಮಪ್ರವರ್ತಕ ಡಿ. ಅಪ್ಪೂರಾಯರ ಮಕ್ಕಳು ಡಿ. ಶ್ರೀನಿವಾಸರಾಯರಿಗೆ ಸೇರಿದ್ದು. ಆ ಕಟ್ಟಡದಲ್ಲಿ ಇದ್ದದ್ದು ನವರತ್ನ ಅಂಡ್ ಕಂಪೆನಿ ಅವರ ಮುದ್ರಣಾಲಯ. ಅಲ್ಲಿ ಆಗ ನಾನು ನಡಸುತ್ತಿದ್ದ 'ದಿ ಕರ್ನಾಟಕ' (The Karnataka) ಎಂಬ ಇಂಗ್ಲಿಷ್ ಪತ್ರಿಕೆ ಅಚ್ಚಾಗುತ್ತಿತ್ತು. ಅದು ಪತ್ರಿಕೆಯ ಕಡೆಯ ದಿನಗಳೆಂದು ಜ್ಞಾಪಕ.

## ಶಾಸ್ತ್ರಿಗಳ ವಾದ

ಆ ಕಾಲದಲ್ಲಿ ನಾನು ಅಲ್ಲಿ ಪ್ರತಿದಿನವೂ ಸಂಜೆ ೪ ಘಂಟೆಯಿಂದ ಅಂಗಡಿಯ ಮುಂದುಗಡೆಯಿದ್ದ ಸಣ್ಣ ಬಯಲು ಜಾಗದಲ್ಲಿ ಕುಳಿತು ಪ್ರೂಫ್ ತಿದ್ದುವುದು, ಬರೆಯುವುದು ಮುಂತಾದ ಕೆಲಸಗಳನ್ನು ಮಾಡುತ್ತಿದ್ದೆ. ಅಲ್ಲಿಗೆ ಒಂದೊಂದು ಸಾರಿ ಸ್ನೇಹಿತರು ಬಂದು ಹರಟೆಗೋಷ್ಠಿಗೆ ಸೇರುತ್ತಿದ್ದರು. ಅವರಲ್ಲೊಬ್ಬರು ವೀರಕೇಸರಿ ಸೀತಾರಾಮಶಾಸ್ತ್ರಿಗಳವರು. ಶಾಸ್ತ್ರಿಗಳವರಿಗೂ ನನಗೂ ತುಂಬ ಬಳಕೆ. ನಾವಿಬ್ಬರೂ ಶಂಕರಮಠದಲ್ಲಿ ಸಹಾಧ್ಯಾಯಿಗಳಾಗಿದ್ದೆವು. ಆ ಕಾಲದಲ್ಲಿ ನಾನು ಚಡಾವಿನ ಆಕಾರದ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಿದ್ದೆ. ಶಾಸ್ತ್ರಿಗಳು ನನ್ನ ಚಡಾವುಗಳ ಕಡೆ ಕೈತೋರಿಸಿ, "ನಿಮ್ಮ ಗಾಂಧಿ ಹೇಳೋದು ಎಲ್ಲಾ ಸರಿ ಸ್ವಾಮಿ! ಆದರೆ ಇವರಿಗೆ ಬಗ್ಗಬೇಕು ಎನ್ನುತ್ತಾರಲ್ಲಾ, ಅದಕ್ಕೆ ನಾನು ತಯಾರಿಲ್ಲ" ಎಂದು ವಾದ ಎಬ್ಬಿಸುವರು. ನಾನು "ಅವರೂ ಬಗ್ಗೋದಿಲ್ಲ; ನೀವೂ ಬಗ್ಗೋದಿಲ್ಲ ಅಂತೀರಿ. ಫೈಸಲ್ ಆಗುವುದು ಹೇಗೆ?" ಎಂದು ಕೇಳಿದ್ದಕ್ಕೆ ಶಾಸ್ತ್ರಿಗಳು, "ಅವರೂ ನಿಂತುಕೊಂಡಿರಲಿ. ನಾವೂ ನಿಂತೇ ಅವರಿಗೆ ಸಲ್ಲಿಸಬೇಕಾದದ್ದನ್ನು ಸಲ್ಲಿಸುತ್ತೇವೆ" ಎಂದು ಜವಾಬು ಹೇಳುವರು. ಹಾಸ್ಯದಲ್ಲಿ ನಮ್ಮ ವಾದ ಮುಗಿಯುತ್ತಿತ್ತು. "ಅವರು" ಎಂದರೆ ಈ ವಾದದಲ್ಲಿ "ನಾವು" ಎಂದರೆ ಹಿಂದೂಗಳು.

ಮುಸಲ್ಮಾನರು. ಅದು ಖಿಲಾಫತ್ ಚಳವಳಿಯ ಕಾಲ. ಮುಹಮ್ಮದ್ ಅಲಿ, ಶೌಕತ್ ಆಲಿ ಎಂಬ ಸಹೋದರರು ಮುಸಲ್ಮಾನರ ಪ್ರತಿನಿಧಿಗಳು. ಮಿಕ್ಕದ್ದನ್ನು ವಾಚಕರು ಊಹಿಸಿಕೊಂಡಾರು.

ನಾನು ಇಲ್ಲಿ ಹೇಳಹೊರಟ ವಿಷಯಕ್ಕೆ ಈಗ ಬರುತ್ತೇನೆ. ನಾನು ಹೋಗುತ್ತಿದ್ದ ಅಚ್ಚಿನ ಕಾರ್ಖಾನೆಯ ಎರಡು ಪಕ್ಕಗಳಲ್ಲಿಯೂ ಮುಂಡಿ ಅಂಗಡಿಗಳ ಹಿಂಭಾಗದ ಸಾಲು, ಎಲ್ಲ ವೆರಾಂಡ (ಕೈಸಾಲೆ)ಗಳು. ಅವು ಖಾಲಿ ಇದ್ದುವು. ಆದದ್ದರಿಂದ ಮುಂಡಿಗಳಲ್ಲಿ ಕೆಲಸ ಮಾಡುವ ಆಳುಗಳಿಗೆ ಅದು ವಾಸಸ್ಥಾನ. ಅವರವರ ಮುಂಡಿಗೆ ಆ ಆಳುಗಳು ಕಾವಲು. ಆ ಆಳು ಗಳಿಗೆ ಆಯಾ ಮುಂಡಿಯ ಖಾಲಿ ಜಾಗವೇ ಮನೆ.

ಒಂದು ದಿನ ಇಂಥಾ ಒಂದು ಮುಂಡಿಯ ಹಿಂಭಾಗದ ವೆರಾಂಡದಲ್ಲಿ ನನ್ನ ಕಣ್ಣಿಗೊಂದು ಸಂದರ್ಭ ಕಾಣಿಸಿತು. ಯಾರೋ ಒಬ್ಬ ಹೆಂಗಸು, ಆ ವೆರಾಂಡದಲ್ಲಿ ನಿಂತಿದ್ದಳು. ಆಕೆಯ ಎದುರಿಗೆ ಮೈಗೆ ಅಂಟಿಕೊಳ್ಳುವಂತೆ ಒಬ್ಬ ಮುಸಲ್ಮಾನ್ ಮನುಷ್ಯ ನಿಂತಿದ್ದ. ಅವರಿಬ್ಬರಿಗೂ ಏನೋ ಜಗಳ ವೆಂದು ತೋರಿತು. ಆಕೆಯ ತುಟಿಯಿಂದ ರಕ್ತ ಬರುತ್ತಿತ್ತು. ಆಕೆ ಅತ್ತು ಕೂಗಿಕೊಳ್ಳುತ್ತಿದ್ದಳು. ಇದನ್ನು ಕಂಡು ನಾನು ಅಲ್ಲಿ ಏನೋ ಪ್ರಾಣಾ ಪಾಯವಾದೀತೆಂದು ಭಯಪಟ್ಟೆ. ಆಗ ಕೋಟೆಯಲ್ಲಿದ್ದ ಪೊಲೀಸ್ ಸ್ಟೇಷನ್ನಿಗೆ ಹೋಗಿ ಹೇಳಿದೆ.

ಪೊಲೀಸ್ ಇನ್‌ಸ್ಪೆಕ್ಟರಾಗಿದ್ದವರು ಕೃಷ್ಣರಾಯರು, ಸುಬ್ಬರಾಯರು ಎಂಬಿಬ್ಬರು. ಸೂಪರಿಂಟೆಂಡೆಂಟರು ಟಿ. ತಂಬೂಚೆಟ್ಟಿಯವರು. ಈ ಮೂವರೂ ನನಗೆ ತಿಳಿದಿದ್ದವರು. ಒಳ್ಳೆಯ ಮನುಷ್ಯರು. ನನಗೆ ಸ್ನೇಹಿತರು. ಅವರ ಪೈಕಿ ಕೃಷ್ಣರಾಯರು ಒಬ್ಬ ತಕ್ಕಮಟ್ಟಿಗೆ ವಯಸ್ಸಾಗಿದ್ದ ಕಾನ್ಸ್‌ಟೇಬಲನ್ನು ನನ್ನೊಡನೆ ಕಳುಹಿಸಿದರು. ಆ ಕಾನ್‌ಸ್ಟೇಬಲ್ಲು ಬಂದು ವಿದ್ಯಮಾನವನ್ನು ನೋಡಿ ಕೊಂಚ ಕೊಂಚ ನಗುತ್ತಾ ನನ್ನನ್ನೇ ಆಕ್ಷೇಪಿಸಿದ. "ನಿಮಗೇಕೆ ಸ್ವಾಮಿ ಈ ತಂಟೆ? ನಿಮ್ಮ ಪಾಡಿಗೆ ನೀವು ಹೋಗಿ. ಏನೂ ಆಗುವುದಿಲ್ಲ. ಇಂಥಾದ್ದು ಸಾಮಾನ್ಯ" ಎಂದ. ಕೃಷ್ಣರಾಯರೂ ಸುಬ್ಬ ರಾಯರೂ ನನ್ನನ್ನು ಆಮೇಲೆ ನೋಡಿದಾಗಲೆಲ್ಲಾ ನಗುತ್ತಿದ್ದರು—ನಾನು ಅಂಜುಬುರಕ ಎಂದು. ಕೃಷ್ಣರಾಯರೆಂಬವರು ಕಾಲಾನುಕಾಲಕ್ಕೆ ನ್ಯಾಯಪತಿ ಮಾಧವರಾಯರ ಕೈಕೆಳಗೆ ಎಫಿಷೆನ್ಸಿ ಆಡಿಟ್ (Efficiency Audit) ಇಲಾಖೆಯಲ್ಲಿ ಅಸಿಸ್ಟೆಂಟರಾಗಿದ್ದರು.

ಈಗ ಮುಖ್ಯ ವಿಷಯ.

ಪ್ರೆಸ್ಸಿನ ಪಕ್ಕದ ಮಂಡಿಯ ಹಿಂದುಗಡೆಯ ವೆರಾಂಡದಲ್ಲಿ ಆ ಮಂಡಿಗೆ ಸೇರಿದ ಒಬ್ಬ ಮುದುಕ, ಒಬ್ಬ ಮುದುಕಿ ವಾಸಮಾಡುತ್ತಿದ್ದರು. ಆ ಮುದುಕಿ ಆ ಮಂಡಿಯಲ್ಲಿ ಕಸಗುಡಿಸುವವಳು. ಆ ಮುದುಕ ತುಂಬ ವಯಸ್ಸಾಗಿದ್ದದ್ದರಿಂದಲೊ ಏನೋ, ಯಾವಾಗಲೂ ಮಲಗಿರುತ್ತಿದ್ದ. ಆ ಹೆಂಗಸು ತಾನು ಬೆಳಗ್ಗೆ ಕೆಲಸ ಮಾಡುವಾಗ ಸಿಕ್ಕಿದ ಕೊಂಚ ಕೊಳೆತ ಈರುಳ್ಳಿ, ಹುಳಿತ ಆಲೂಗೆಡ್ಡೆ, ಕರಟು ಬದನೆಕಾಯಿ—ಇವುಗಳನ್ನು ಸಂಗ್ರಹ ಮಾಡುತ್ತಿದ್ದಳು.

ಮಧ್ಯಾಹ್ನ ಆಕೆ ಆ ಈರುಳ್ಳಿ ಆಲೂಗೆಡ್ಡೆಗಳ ಕೊಳಕು ಹುಳುಕಲು ಭಾಗಗಳನ್ನೆಲ್ಲ ತೆಗೆದುಹಾಕಿ ಸರಿಯಾಗಿದ್ದ ಭಾಗಗಳನ್ನೆಲ್ಲ ಹಾಕಿ ಅಡಿಗೆ ಮಾಡುತ್ತಿದ್ದಳು. ಪದಾರ್ಥಗಳು ಬೇಯುತ್ತ ಬೇಯುತ್ತ ಘಮಲೆದ್ದು ಬೀದಿಯೆಲ್ಲ ವ್ಯಾಪಿಸುವುದು. ನನ್ನ ಮೂಗಿಗೂ ತಗಲುವುದು.

## ದಿನಚರಿ

ಇದಾದ ಮೇಲೆ ಸ್ನಾನ. ಅವರಿಗೆ ಇದ್ದದ್ದು ಎರಡು ಮೂರು ಮಡಕೆಗಳು. ಒಂದು ಹಿಟ್ಟು ಬೇಯಿಸುವುದಕ್ಕೆ, ಇನ್ನೊಂದು ಅಂಬಲಿ ಕಾಯಿಸುವುದಕ್ಕೆ. ಇನ್ನೊಂದು ಕುಡಿಯುವ ನೀರಿಟ್ಟುಕೊಳ್ಳುವುದಕ್ಕೆ. ಒಂದು ದೊಡ್ಡ ಮಣ್ಣು ಗಡಿಗೆ ಬೇರೆ: ಸ್ನಾನಕ್ಕೆ ನೀರು ಕಾಯಿಸುವುದಕ್ಕಾಗಿ. ಆ ಹೆಂಗಸು ತಾನು ಸಂಪಾದಿಸಿದ್ದ ಕಸಕಡ್ಡಿಗಳನ್ನು ಉರಿಹಾಕಿ ಈ ದೊಡ್ಡಗಡಿಗೆ (ಕಡಾಯಿ)ಯೊಳಗೆ ನೀರು ಕಾಯಿಸುವಳು. ಆ ಬಿಸಿನೀರನ್ನು ಗಂಡನಿಗೆ ಸ್ನಾನ ಮಾಡಿಸುವಳು, ಅದೂ ಸಾವಕಾಶವಾಗಿ. ಆತನ ಮೈ ಹುಣ್ಣಾಗಿ ಕರಟುಕಟ್ಟಿದ್ದ ಕಡೆಯೆಲ್ಲಾ ಮೆತ್ತಗೆ ಕೈ ಸವರುತ್ತಾ ಅವನ ನೋವೂ ಆಯಾಸವೂ ಪರಿಹಾರವಾಗುವಂತೆ ಬಿಸಿನೀರು ಹಾಕುವಳು. ಅವನು ಆ ಸಂತೋಷದಲ್ಲಿ ನಗುಮುಖದಿಂದ ಸ್ನಾನ ಮಾಡಿಸಿಕೊಳ್ಳುವನು. 'ಹಾಯ್' ಎಂದು ಮಧ್ಯೇ ಮಧ್ಯೇ ಉದ್ಗಾರ ಮಾಡುವನು. ಸ್ನಾನವಾದ ಬಳಿಕ ಅವರ ಕೊಳೆಯ ಬಟ್ಟೆಯಿಂದಲೇ ಮೈ ಒರಸಿಕೊಳ್ಳುವನು, ಒರಸಿಸಿಕೊಳ್ಳುವನು. ಇದೆಲ್ಲ ಬಯಲಿನಲ್ಲಿ ಆದದ್ದರಿಂದ ನನ್ನ ಕಣ್ಣಿಗೆ ಕಾಣಿಸುತ್ತಿತ್ತು.

## ಭೋಜನಾನಂದ

ಬಳಿಕ ಆಕೆ ಒಂದು ಊಟದೆಲೆಯನ್ನು ಹಾಕಿ ಅದರ ನಡುವೆ ಬಿಸಿಬಿಸಿ ರಾಗಿ ಹಿಟ್ಟಿನ ಮುದ್ದೆಯನ್ನು ಇರಿಸುವಳು. ತಂಬಿಗೆ ಗಾತ್ರದ ದೊಡ್ಡ ಮುದ್ದೆ. ಅದರಲ್ಲಿಯೇ ಬಟ್ಟಲಿನಂತೆ ಕೈಯಿಂದ ಕೊರೆಯುವಳು—ಕಟ್ಟೆ ಕಟ್ಟಿದ ಕೊಳದಂತೆ. ಅದರ ನಡುವೆ ತಾನು ಕಾಯಿಸಿದ್ದ ಅಂಬಲಿಯನ್ನು ಹಾಕುವಳು. ಮುದುಕನು ಹಿಟ್ಟಿನ ಸ್ವಲ್ಪವನ್ನು ತೆಗೆದು ತುಂಡುಮಾಡಿ ಅಂಬಲಿಯಲ್ಲಿ ಅದ್ದಿ ಬಾಯಲ್ಲಿಟ್ಟುಕೊಂಡು ಚಪ್ಪರಿಸಿ ನುಂಗುವನು, ನಗುವನು. ಒಂದೊಂದು ಮಾತನಾಡುವನು. ಆಕೆಯೂ ಮಾತನಾಡುವಳು. ಈ ಊಟ ಅರ್ಧ ಘಂಟೆ ನಡೆಯುವುದು. ಇದನ್ನು ಸಾಕ್ಷಿಯಂತೆ ನೋಡುವುದು ನನಗೊಂದು ಸಂತೋಷ.

ಸಂಜೆ ಸಂಜೆಯೂ ತಪ್ಪದೆ ನಾನು ಇದನ್ನು ಬಹು ಕುತೂಹಲದಿಂದ ನೋಡುತ್ತಿದ್ದೆ. ಅದೊಂದು ಆನಂದಾನುಭವ.

ಆನಂದೋ ಬ್ರಹ್ಮೇತಿ ವ್ಯಜಾನಾತ್ ।
ಆನಂದಾದ್ಧ್ಯೇವ ಖಲ್ವಿಮಾನಿ
ಭೂತಾನಿ ಜಾಯನ್ತೇ ।
ಆನಂದೇನ ಜಾತಾನಿ ಜೀವನ್ತಿ ।
ಆನಂದಂ ಪ್ರಯನ್ತ್ಯಭಿಸಂವಿಶನ್ತಿ ।
('ತೈತ್ತಿರೀಯೋಪನಿಷತ್ತು')

ಆನಂದವೇ ಬ್ರಹ್ಮವೆಂದು ನೀನರಿಯಯ್ಯ ।
ಆನಂದದಿಂದ ಪುಟ್ಟಿಹುದೆಲ್ಲಮಲ್ತೇ ।
ಆನಂದದಿಂ ಪುಟ್ಟಿದೆಲ್ಲಮುಂ ಬಾಳುಗುಂ ।
ಆನಂದವನೆ ಕುರಿತು ಪೋಗುತಲಿ ಪುಗುಗುಂ ॥

## ಪ್ರೀತಿಯೇ ಸೌಂದರ್ಯ

ಆನಂದಕ್ಕೆ ಕಾರಣವಾದದ್ದು ಇಲ್ಲಿ ಪ್ರೀತಿ. ಅನ್ಯೋನ್ಯ ಪ್ರೀತಿ ಆ ಮುದುಕ ಮುದುಕಿಯರ ಬಡತನವನ್ನು ಮರೆಯಿಸಿತ್ತು. ಅವರಿಗೆ ಆಗ ಲಾಟರಿಯಿಂದಲೋ ಬೇರೆಲ್ಲಿಂದಲೋ ಹಣ ಬಂದಿದ್ದರೆ ಅದರಿಂದ ಅವರಿಗೆ ಆಗ—ಆ ವಯಸ್ಸಿನಲ್ಲಿ—ಏನು ತಾನೆ ಪ್ರಯೋಜನವಾಗುತ್ತಿತ್ತು? ಹಣ ಪ್ರಯೋಜನಕ್ಕೆ ಬಾರದ ವಯಸ್ಸು ಅದು. ಅದಕ್ಕಿಂತ ಹೆಚ್ಚಾಗಿ, ಪ್ರೀತಿ

ಅವರ ಮುಪ್ಪನ್ನು ಮರೆಯಿಸಿ ಯೌವನವನ್ನು ತಂದುಕೊಟ್ಟಿತ್ತು. ಇನ್ನೂ ಹೆಚ್ಚಾಗಿ, ಪ್ರೀತಿಯು ಅವರ ನೊಂದ ಬಡಕಲು ಕೊಳಕಲು ಮೈಗಳಲ್ಲಿ ಅವರ ಪಾಲಿಗೆ ಸೌಂದರ್ಯದರ್ಶನ ಮಾಡಿಸಿತು. ಪ್ರೀತಿಯೇ ಸೌಂದರ್ಯ; ಪ್ರೀತಿ ಸಾಲದೆಹೋದಲ್ಲಿ ಆಭರಣ ಅಲಂಕಾರ ಐಶ್ವರ್ಯಗಳು ಬರಿಯ ಭಾರ. ಪ್ರೀತಿಯೇ ಸೌಂದರ್ಯ ; ಪ್ರೀತಿಯೇ ಐಶ್ವರ್ಯ. ಪ್ರೀತಿಯೆಂದರೆ ಹೃದಯವಿಕಾಸ.

## ೧೮

# ಹಕ್ಕಿಯ ಪಯಣ

ಹಕ್ಕಿ, ಹಕ್ಕಿ, ಎಲ್ಲಿಗೆ ?
ಪಯಣವೆಲ್ಲಿಗೆ ?

ಎಲ್ಲಿಗೆಂದರಲ್ಲಿಗೆ
ಹಳ್ಳದಿಂದ ತಿಟ್ಟಿಗೆ
ಹಳ್ಳಿಯಿಂದ ದಿಳ್ಳಿಗೆ
ದಿಳ್ಳಿಯಿಂದ ಹಳ್ಳಿಗೆ
ಅಲ್ಲಿಗಿಲ್ಲಿಗೆ

ಗೂಡಿನಿಂದ ಕಾಡಿಗೆ
ಕಾಡಿನಿಂದ ಗೂಡಿಗೆ
ನಾಡಿನಿಂದ ನಾಡಿಗೆ
ಬೀಡಿನಿಂದ ಬೀಡಿಗೆ
ಇಲ್ಲಿಗಲ್ಲಿಗೆ.

ಹಕ್ಕಿ, ಹಕ್ಕಿ, ಕೆಲಸವೇನು ?
ರೆಕ್ಕೆ ದುಡಿಸಿ ಫಲಿತವೇನು ?

ಆಟಪಾಟ ಊಟವು
ಊಟ ಕಣ್ಣ ನೋಟವು
ಗಾಳಿಯೊಳೀಜಾಟವು
ಬಾನಿನ ತೇಲಾಟವು
ಬಾಯ್ಗೆ ದೊರೆತುದೂಟವು
ಕೊರಲಿ ಕೂಗು ಪಾಟವು
ಮನವು ಆಡಿದಾಟವು
ಚಣದ ಆಟವು.

ಹಕ್ಕಿ, ಹಕ್ಕಿ, ಕಂಡುದೇನು ?
ಕಂಡು ನೀನುಂಡುದೇನು ?

ಸ್ವರ್ಗದಿಂದ ಭೂತಲ
[illegible]

ಸುರರು ಬೆಳೆದ ತೋಟವು
ದುರುಳರ ದುರುಳಾಟವು
ದೇವ ದೇವನುದ್ಯಾನ
ಮನಸಿಸ ಮಾಡಿಪ ಹೈರಾಣ.

ಹಕ್ಕಿ, ಹಾಡದಾವುದು ?
ರಾಗವಾವುದು ?

ಹಾಡಿಪೆನೆ ? ಏನದು ?
ಹಾಡಲೆನಗೆ ಬಾರದು.
ರಾಗವೆನಗೆ ಕಲಿಪರಾರು ?
ಕೇಳ್ವರಾರು ? ಹೇಳ್ವರಾರು ?
ಕೊರಗನೆದೆಯೊಳಿಡುವರಾರು ?
ಸ್ವರವ ಕೊರಲೊಳಿಡುವರಾರು ?
ಮಿಡಿವುದೇನೊ ಮನದೊಳು
ನುಡಿವುದೇನೊ ಬಾಯೊಳು.
ಕೂಗು ರಾಗವಪ್ಪುದೇನು ?
ಮಾತು ಗೀತೆಯಪ್ಪುದೇನು ?
ಇನಿದೊ ಕಟುವೋ ದನಿಯದೆಂತೋ
ಅಣಗಿರುವ ಕಡುಮರ್ಮವೇನೋ
ಬ್ರಹ್ಮನಿರ್ಮಿತಿಯರ್ಥವ
ತಿಮ್ಮಲಿಂಗನು ತಿಳಿಯುವ.

ಯಾವ ಮನುಷ್ಯನಿಗೂ ತನ್ನ ಸ್ವಭಾವದಲ್ಲಿ ಏನೇನು ಸೇರಿವೆ ಎಂಬುದನ್ನು ನಿಷ್ಕರ್ಷೆಯಾಗಿ ತಿಳಿದುಕೊಳ್ಳುವುದು ಅಸಾಧ್ಯವೆಂದು ನಾನು ಭಾವಿಸಿದ್ದೇನೆ. ನನ್ನ ಸ್ವಭಾವವನ್ನು ಕುರಿತು ನಾನು ಅನುಭವಪರೀಕ್ಷೆಯಿಂದ ಮಾತನಾಡಬಹುದಾದರೆ, ಅದರಲ್ಲಿ ಎರಡು ಪ್ರವೃತ್ತಿಗಳು ಅಡಗಿಕೊಂಡಿವೆ. ಒಂದು ತೊಂಡುತನ, ಇನ್ನೊಂದು ಅಂಜುಬುರುಕತನ. ತೊಂಡುತನವೆಂದರೆ ಯಾವ ಜವಾಬ್ದಾರಿಯನ್ನೂ ತಗಲಿಸಿಕೊಳ್ಳದೆ ಮನಸ್ಸು ಬಂದಂತೆ ತಿರುಗುವುದು. ಅಂಜುಬುರುಕತನವೆಂದರೆ ಯಾವುದೋ ಒಂದು ಕಾರಣಕ್ಕೆ ವಿಧೇಯನಾಗಿರುವುದು. ಇವೆರಡೂ ಪರಸ್ಪರ ಪ್ರತಿಕೂಲಗಳಾದ ಪ್ರವೃತ್ತಿಗಳು.

## ಬಾಲ್ಯದಲ್ಲಿ

ನನಗೆ ಬಾಲ್ಯದಿಂದ ಜೋಗಿಗಳು, ಸನ್ಯಾಸಿಗಳು, ವೈರಾಗಿಗಳು,

ಸಂನ್ಯಾಸಿಗಳು, ಫಕೀರರು—ಇಂಥವರನ್ನು ನೋಡಿದಾಗ, ನಾನು ಅವರಂತೆ ಎಂದಿಗೆ ನಿರುಪಾಧಿಕವಾಗಿ ತಿರುಗಾಡಿಯೇನು? ಎನ್ನಿಸುತ್ತಿತ್ತು—ಬೋನಿನೊಳಗಣ ಕೋತಿಗಳಿಗೆ ಅನ್ನಿಸುವ ಹಾಗೆ. ಆ ಪರಿವ್ರಾಜಕ ಜೀವನದಲ್ಲಿ ನನಗೆ ಆಕರ್ಷಕವಾಗಿದ್ದದ್ದು ಅವರ ನಿಶ್ಚಿಂತತೆ. ಅವರು ರಾತ್ರಿಗೇನು, ನಾಳೆಗೆಲ್ಲಿ ಎಂದು ಕ್ಷಣಮಾತ್ರವೂ ಯೋಚಿಸುತ್ತಿದ್ದವರಲ್ಲ. ಯಾವುದೋ ಒಂದು ತತ್ತ್ವದಲ್ಲಿ ಸಂಪೂರ್ಣವಾದ ನಂಬಿಕೆ. ಆ ನಂಬಿಕೆ ದೃಢವಾಗಿದ್ದದ್ದರಿಂದ ಸಂಪೂರ್ಣವಾದ ಧೈರ್ಯ ಮತ್ತು ನಿರಂಕುಶವಾದ ಮನೋವೃತ್ತಿ : ನನ್ನ ಅಂತರಂಗದಲ್ಲಿ ಸುಳಿದಾಡುತ್ತಿದ್ದದ್ದು ಆ ನಿಸ್ಸಂಸಾರದ ಮೇಲಣ ಉತ್ಸಾಹ.

ನನಗೆ ಇದು ಅಷ್ಟು ಪ್ರಿಯವಾಗಿದ್ದಲ್ಲಿ ನಾನು ಅದನ್ನು ಏಕೆ ಅವಲಂಬಿಸಲಿಲ್ಲ? ಅದು ಅಂಜುಬುರುಕತನ. ಅದರಲ್ಲಿ ಎರಡು ಅಂಶಗಳಿವೆ. ಮೊದಲನೆಯದು ಸಮಾಜ ಸಂಪ್ರದಾಯಗಳಲ್ಲಿ ಗೌರವ. ಎರಡನೆಯದು ದೇಹಕ್ಕೆ ಉಂಟಾಗಬಹುದಾದ ಕಷ್ಟಗಳ ಭೀತಿ. ನಾನು ಬಾಲ್ಯವನ್ನು ಸುಖದಲ್ಲಿ ಕಳೆದವನು : ಚೆನ್ನಾಗಿ ಊಟಮಾಡಿದವನು, ತಿಂಡಿ ತಿಂದವನು, ಮೆತ್ತನೆಯ ಹಾಸಿಗೆಯ ಮೇಲೆ ಮಲಗಿ ಬೆಚ್ಚಗೆ ಹೊದೆದು ನಿದ್ರಿಸಿದವನು. ನಾನು ಗ್ರಾಮೈಕರಾತ್ರಿಯಾಗಿ ಅಲೆಯುತ್ತ ಹೊರಟರೆ ಊಟ ಉಪಚಾರಗಳು ಹೇಗೆ? ಮಲಗಲು ಹಾಸಿಗೆ ತಲೆದಿಂಬುಗಳು? ಹೀಗೆ ಚಿಂತೆಗಳು ಬಂದು 'ಗೀತೆ'ಯಲ್ಲಿ ಹೇಳಿರುವಂತೆ "ಕಾಯಕ್ಲೇಶ ಭಯ" ನನಗುಂಟಾಯಿತು. ಸಮಾಜದ ಹೆದರಿಕೆ ಪರಿಸರ ಪ್ರಭಾವದಿಂದ ಬಂದಿತು. ನಾನು ಪ್ರಬುದ್ಧನೆನಿಸಿಕೊಂಡಮೇಲೆ ನನ್ನ ಹಿರಿಯರು ನನಗೆ ತಕ್ಕಷ್ಟು ಸ್ವಾತಂತ್ರ್ಯ ಕೊಟ್ಟಿದ್ದರು. ಆದರೂ ಹೇಗೋ—'ಸಾಕ್ರಟೀಸನ ಸಂವಾದಗಳು' ಮೊದಲಾದ ಗ್ರಂಥಗಳ ಪ್ರಭಾವದಿಂದಲೋ ಏನೋ—ಸಮಾಜ ಸಂಪ್ರದಾಯಗಳು ಗೌರವಾರ್ಹಗಳೆಂದು ನನ್ನ ಮನಸ್ಸಿನಲ್ಲಿ ನಂಬಿಕೆ ದೃಢಪಟ್ಟಿತ್ತು.

## ಗೋದಾವರಿ ಬ್ರಾಹ್ಮಣರು

ಸುಮಾರು ಅರವತ್ತು ವರ್ಷಗಳ ಹಿಂದೆ ಗೋದಾವರಿ ಪ್ರಾಂತದಲ್ಲಿ ನದಿ ಕಾಲುವೆ ನೀರಾವರಿಗಳು ಹೆಚ್ಚಾಗಿರಲಿಲ್ಲ; ದೇಶದ ಬಹುಭಾಗ ಬೆಂಗಾಡಾಗಿತ್ತು. ಆ ಪ್ರಾಂತದ ಬ್ರಾಹ್ಮಣ ತಂಡಗಳು ರಾಮೇಶ್ವರಯಾತ್ರೆ, ತಿರುಪತಿಯಾತ್ರೆ ಮೊದಲಾದ ವ್ಯಾಜದಿಂದ ದಕ್ಷಿಣದೇಶಕ್ಕೆ ಪದೇ ಪದೇ ಬರುತ್ತಿದ್ದರು. ಆ ಬ್ರಾಹ್ಮಣರೆಲ್ಲ ನಿಯಮನಿಷ್ಠೆಯುಳ್ಳವರು. ಮುಳುಬಾಗಿಲಿನ

ಶ್ರೀಮದಾಂಜನೇಯ ಸ್ವಾಮಿ ದೇವಾಲಯದ ಮುಂಭಾಗಕ್ಕೆ ಅಂಟಿಕೊಂಡಂತೆ ತವ್ವಾ ಎಂಬ ವೈಶ್ಯಧರ್ಮಿಷ್ಠರು ಕಟ್ಟಿಸಿದ್ದ ಒಂದು ಸತ್ರವಿತ್ತು. ಆ ಊರಿಗೆ ಬಂದ ಗೋದಾವರಿ ಬ್ರಾಹ್ಮಣರು ಸಾಮಾನ್ಯವಾಗಿ ಈ ಸತ್ರದಲ್ಲಿ ಬಿಡಾರ ಮಾಡುತ್ತಿದ್ದರು.

ಗೋದಾವರಿ ಬ್ರಾಹ್ಮಣರು ಬಹುಮಟ್ಟಿಗೆ ಪಾದಚಾರಿಗಳು. ನಮ್ಮ ಕಾಲದಲ್ಲಿ ವಿನೋಬಾ ಭಾವೆಯವರ ಪ್ರಯಾಣ ಪ್ರಸಿದ್ಧವಾಗಿದೆ. ಆದರೆ ಅರವತ್ತು ವರ್ಷಗಳ ಹಿಂದೆ ಪಾದಸಂಚಾರವೇ ಸಾಮಾನ್ಯವಾಗಿದ್ದ ಪ್ರಯಾಣ ಕ್ರಮ. ಗೋದಾವರಿ ಬ್ರಾಹ್ಮಣರಿಗೆ ದಿನಕ್ಕೆ ಹದಿನೈದಿಪ್ಪತ್ತು ಮೈಲಿ ಸಂಚಾರ ಮಾಡುವುದು ಕಷ್ಟವೆನಿಸುತ್ತಿರಲಿಲ್ಲ. ಅವರಲ್ಲಿ ಚೌಡೇಶ್ವರಿ ಉಪಾಸಕರು, ಭದ್ರಕಾಲಿ ಉಪಾಸಕರು, ಶ್ರೀವಿದ್ಯಾ ಪರಿಣತರು ಎಲ್ಲರೂ ಇರುತ್ತಿದ್ದರು.

ನಮ್ಮ ಮನೆಗಳಿಗೆ ಹೆಚ್ಚಾಗಿ ಬರುತ್ತಿದ್ದವರು ವೇದಾಧ್ಯಯನನಿಷ್ಠರು. ಅವರು ವೇದದ ಮಹಿಮೆಯಲ್ಲಿ ಅಕುಂಠಿತವಾದ ಶ್ರದ್ಧೆಯುಳ್ಳವರು. ಅವರ ದೇಹಾಕೃತಿ ದೃಢವಾದದ್ದು. ಆದದ್ದರಿಂದ ಅವರ ಕಂಠಸ್ವರ ಉಚ್ಚಸ್ಥಾಯಿಯಲ್ಲಿ ಗಂಭೀರವಾಗಿ ಬರುತ್ತಿತ್ತು.

ಆ ಬ್ರಾಹ್ಮಣರು ಮನೆಗೆ ಬಂದು "ಇದು ಬ್ರಾಹ್ಮಣರ ಮನೆ ತಾನೆ ? ಇಲ್ಲಿ ನಮಗೆ ಭೋಜನ ಕೊಡಲು ಅನುಕೂಲ ಉಂಟೆ ?"—ಎಂದು ಕೇಳಲು ಸಂಕೋಚ ಪಡುತ್ತಿರಲಿಲ್ಲ. ಮನೆಯ ಯಜಮಾನನಾದರೋ ಅಂಥ ಪ್ರಶ್ನೆಯನ್ನು ಒಂದು ಪರಮಾನುಗ್ರಹವೆಂದು ಭಾವಿಸಿ, "ಅವಶ್ಯ ದಯಮಾಡಬೇಕು" ಎನ್ನುತ್ತಿದ್ದ. ಬಂದ ಬ್ರಾಹ್ಮಣರು ಒಂದರ್ಧಘಂಟೆ ವೇದ ಹೇಳಿದ ಹೊರತು ಭೋಜನಕ್ಕೇಳುತ್ತಿರಲಿಲ್ಲ.

ಅವರ ಭೋಜನ ಪರಿಕರ ಹೆಚ್ಚು ಕಷ್ಟ ಕೊಡತಕ್ಕದ್ದೂ ಆಗಿರಲಿಲ್ಲ. ಅವರಿಗೆ ಬೇಕಾಗಿದ್ದದ್ದು ಅನ್ನ, ತೊವ್ವೆ, ಖಾರ ಖಾರವಾಗಿ ಹುಳಿ (ಪಪ್ಪುಧಪ್ಪಳಂ), ಗೊಜ್ಜು ಅಥವಾ ಚಟ್ನಿ, ಕೈತುಂಬ ತುಪ್ಪ, ಒಂದಿಷ್ಟು ಮಜ್ಜಿಗೆ. ನಮ್ಮ ದೇಶದ ಸಾರನ್ನು ಎಲೆಯ ಹತ್ತಿರ ತಂದರೆ "ಜಬ್ಬು ಲೇದಂಡಿ" ("ರೋಗ ಇಲ್ಲ ಸ್ವಾಮಿ") ಎನ್ನುತ್ತಿದ್ದರು. ತಿಳಿಸಾರು ಏನಿದ್ದರೂ ಕಾಯಿಲೆಯವರಿಗೆ ! ಇದು ಅವರ ಕಲ್ಪನೆ. ತರಕಾರಿ ಭಕ್ಷ್ಯಗಳನ್ನು ಅವರು ಬೇಡವೆನ್ನುತ್ತಿರಲಿಲ್ಲ. ಅವರಿಗೆ ಮುಖ್ಯವಾಗಿ ಬೇಕಾಗಿದ್ದದ್ದು ಅಶನ—ಪಪ್ಪುಧಪ್ಪಳಂ—ಅಭಿಘೃತ.



ರಾತ್ರಿ ಅವರು ಊಟ ಮಾಡುತ್ತಿರಲಿಲ್ಲ.

## ನಿಶ್ಚಿಂತತೆ

ಸಾಮಾನ್ಯವಾಗಿ ಬೆಳಗ್ಗೆ ಐದು ಘಂಟೆಯಿಂದ ಎಂಟು ಒಂಭತ್ತರವರೆಗೆ ಪ್ರಯಾಣ. ಸಂಜೆ ನಾಲ್ಕರಿಂದ ಏಳರವರೆಗೆ ಪ್ರಯಾಣ. ಹೀಗೆ ದಿನಕ್ಕೆ ಐದಾರು ಘಂಟೆಗಳ ಕಾಲ ಪ್ರಯಾಣದಲ್ಲಿ ಕಳೆಯುತ್ತಿತ್ತು. ಅವರು ಮನಸ್ಸಿಗೆ ಯಾವ ಚಿಂತೆಯನ್ನೂ ಹಚ್ಚಿಕೊಂಡವರಲ್ಲ.

ಒಬ್ಬರು ಒಂದು ಶಿವಲಿಂಗವನ್ನು ಯಾವಾಗಲೂ ಜೊತೆಯಲ್ಲಿ ತೆಗೆದು ಕೊಂಡು ಹೋಗುತ್ತಿದ್ದರು. ಸುಮಾರು ಒಂದಡಿಯಷ್ಟು ದೊಡ್ಡದಾಗಿತ್ತು ಆ ಬಾಣಲಿಂಗ. ಅದನ್ನು ತಟ್ಟೆಯಲ್ಲಿರಿಸಿ ರುದ್ರಾಭಿಷೇಕ ಮಾಡುತ್ತಿದ್ದರು. ಇಬ್ಬರದು ಒಂದೇ ಕಂಠವೆಂಬಂತೆ ನಮಕ ಚಮಕಗಳು ಕೇಳಿಬರುತ್ತಿದ್ದವು. ನಮ್ಮಿಂದ ಅವರು ಏನನ್ನೂ ಬೇಡುತ್ತಿರಲಿಲ್ಲ. ಪೂಜೆಗೆ ಬೇಕಾದ ಹೂವನ್ನೂ ಅವರು ದಾರಿಯಲ್ಲಿಯೇ ಸಂಪಾದಿಸಿಕೊಂಡು ಬಂದಿರುತ್ತಿದ್ದರು. ನೈವೇದ್ಯಕ್ಕೆ ಒಂದಷ್ಟು ಹಾಲನ್ನೋ ಬೆಲ್ಲವನ್ನೋ ಕೊಟ್ಟರೆ ಸಾಕಾಗಿತ್ತು.

## ಬೈರಾಗಿ ತಂಡ

ಕಾಯಕ್ಲೇಶಕ್ಕೂ ಸಮಾಜಪರಿಸರಕ್ಕೂ ಹೆದರಿ ನನ್ನ ತೊಂಡುತನವನ್ನು ತಡೆದಿಟ್ಟುಕೊಂಡರೂ, ಮಧ್ಯೆ ಮಧ್ಯೆ ಒಂದೊಂದು ವೇಳೆ ಫಕೀರ ಆವೇಶ ಮೇಲ್ಗೈಯಾಗುವುದುಂಟು. ೧೯೦೮-೯ರ ಸುಮಾರಿನಲ್ಲಿ ಒಮ್ಮೆ ಹಾಗಾ ಗಿತ್ತು.

ಒಂದು ಸಂಜೆ ಬೆಂಗಳೂರು ರೈಲ್ವೆ ಸ್ಟೇಷನ್ನಿನ ಮುಂದುಗಡೆಯಿರುವ ಧರ್ಮಾಂಬುಧಿ ಕೆರೆಯ ಏರಿಯಮೇಲೆ ನಡೆದುಹೋಗುತ್ತಿದ್ದೆ. ಕಟ್ಟೆಯ ದಕ್ಷಿಣದ ಕಡೆಯ ಅರಳೀಮರದ ಕೆಳಗೆ ಕೆಲವರು ಬೈರಾಗಿಗಳು ಕುಳಿತಿದ್ದ ದ್ದನ್ನು ಕಂಡೆ. ಒಂದು ದಿನವನ್ನು ಅವರ ಜೊತೆಯಲ್ಲಿ ಕಳೆಯಬೇಕೆಂದು ನನಗೆ ಮನಸ್ಸಾಯಿತು.

ಮಾರನೆಯ ದಿನ ಬೆಳಗ್ಗೆ ನಾನು ಆ ಸ್ಥಳವನ್ನು ಮುಟ್ಟುವ ವೇಳೆಗೆ ಬಿಸಿಲು ಹರಿದಿತ್ತು; ಸುಮಾರು ಏಳು ಘಂಟೆ.

ಬೈರಾಗಿಗಳು ಐದು ಮಂದಿ ಇದ್ದರು. ಮುಖಕ್ಕೂ ತೋಳುಗಳ ಮೇಲೂ ಗೋಪೀಚಂದನ. ಇಬ್ಬರ ಕೈಗಳಲ್ಲಿ ಕಮಂಡಲುಗಳು. ಇಬ್ಬರ ಕೈಗಳಲ್ಲಿ ಮಡಿಸಿ ಬಳೆಹಾಕಿದ್ದ ಎರಡು ಮೂರು ಅಡಿ ಉದ್ದದ ಕಬ್ಬಿಣದ ಪಟ್ಟಿಗಳು. ಅರಳೀಕಟ್ಟೆಯ ಮೇಲೆ ಒಂದರಲ್ಲಿ ಬೆಂಕಿ ಹೊಗೆ ಬಾರಿಸುತ್ತಾ ಹಾಯಿತು.

ಅದರ ಮೇಲೆ ಒಂದು ದೊಡ್ಡ ಮರದ ಕೊರಡು. ಬೆಂಕಿ ಹೊತ್ತಿ ಕುಮುಲು ತ್ತಿತ್ತು.

ಬೈರಾಗಿಗಳು ಗುಂಪಾಗಿ ನಿಂತು "ಜೈ ಸೀತಾರಾಮ್" ಎಂದು ಘೋಷಿಸಿ ಹೊರಟರು. ಕೆಂಪೇಗೌಡ ರಸ್ತೆಯಲ್ಲಿ ಮೆರವಣಿಗೆ ಹೊರಟು, ಒಂದು ತಂಡ ದವರು "ಭಗವನ್ ಪಾಲಕ ಸೀತಾರಾಮ್" ಎಂದೂ ಇನ್ನೊಂದು ತಂಡ ದವರು "ಬಾಲಾಜೀ ಬೇಹಾರೀ ರಾಮ್" ಎಂದೂ ಹೇಳಿಕೊಂಡು ಗ್ರಾಮ ಪ್ರದಕ್ಷಿಣೆ ಹೊರಟರು. ಕೊಂಚ ದೂರ ಹೋದ ಮೇಲೆ "ಜಗಪತಿ ಜಾನಕೀ ಜೀವನ ರಾಮ್" "ಬಾಲಾಜೀ ಬೇಹಾರೀ ರಾಮ್." ಅಲ್ಲಲ್ಲಿ ನಿಂತು "ಜಯ ಜಯ ರಾಮ್" "ರಾಮ್ ಕಹೋ ಸೀತಾರಾಮ್" ಎಂಬ ಪಲ್ಲವಿ ನುಡಿ ಯುತ್ತಿದ್ದರು.

ಬೈರಾಗಿ ತಂಡವು ದೊಡ್ಡಪೇಟೆಯ ಕಡೆ ತಿರುಗಿ ಸಜ್ಜನರಾಯರ ಅಂಗಡಿಯ ಹತ್ತಿರ ಬರುವ ವೇಳೆಗೆ ಸುಮಾರು ಒಂಭತ್ತು ಒಂಭತ್ತೂವರೆ ಘಂಟೆಯಾಗಿತ್ತು. ರಾಯರು ಈ ಬೈರಾಗಿಗಳನ್ನು ಕಂಡೊಡನೆಯೇ ಕೈಯಲ್ಲಿ ಎರಡು ರೂಪಾಯಿ ಹಿಡಿದು ಹೊರಕ್ಕೆ ಬಂದು "ರಾಂ ರಾಂ" ಹೇಳಿ, ಒಬ್ಬ ಆಳನ್ನು ಬೈರಾಗಿಗಳ ಜೊತೆಗೆ ಹೋಗಿ ಅವರಿಗೆ "ಸದಾವರ್ತ್" ಕೊಡಿಸು ವಂತೆ ಹೇಳಿ ಕಳುಹಿಸಿದರು. ಆ ಆಳು ಬೈರಾಗಿಗಳನ್ನು ಹಿಂಬಾಲಿಸಿ ದಿನಸಿ ಅಂಗಡಿಯಿಂದ ಆಟಾ (ಗೋಧಿಯ ಹಿಟ್ಟು), ಅಕ್ಕಿಯ ಹಿಟ್ಟು, ಎರಡು ದೊನ್ನೆ ತುಪ್ಪ—ಇಷ್ಟನ್ನು ಕೊಡಿಸಿದ. ಮಾಂಧಾತನ ಅಂಗಡಿಯ ಬಳಿ ಬಂದಾಗ ಆತ ಒಂದಷ್ಟು ಸಿಹಿತಿಂಡಿ ಕಟ್ಟಿಸಿಕೊಟ್ಟ. ಮಾರ್ಕೆಟ್ ಬಳಿ ಬೈರಾಗಿಗಳು ಕೊಂಚ ಉಪ್ಪು, ಮೆಣಸಿನಕಾಯಿ ಕೊಂಡರು—ಅವರಿವರು ಕೊಟ್ಟಿದ್ದ ಪುಡಿಕಾಸುಗಳಿಂದ.

ಬೈರಾಗಿಗಳು ರಾಣಾಸಿಂಗ್ ಪೇಟೆಯನ್ನು ಹಾದು ಅರಳೇಪೇಟೆ ಸೇರಿ ಅಲ್ಲಿಂದ ರೈಲ್ವೇಸ್ಟೇಷನ್ ಕಡೆಗೆ ತಿರುಗಿ ಅರಳೀಕಟ್ಟೆಗೆ ಬಂದರು. ಅಲ್ಲಿ ಮತ್ತೆ "ಜೈ ಸೀತಾರಾಮ್."

ಅವರ ಪೈಕಿ ಇಬ್ಬರು ಗೋಧಿಯ ಹಿಟ್ಟನ್ನು ಕಲಸಿ ಆದರ ಮೇಲೆ ಒಂದು ಒದ್ದೆಬಟ್ಟೆ ಹಾಕಿ ಬೆಂಕಿಯನ್ನು ಸರಿಮಾಡಹೊರಟರು. ಮೂವರು ಉತ್ತರ ಪಾರ್ಶ್ವದ ಮಂಟಪದ ಮುಂದಿನ ಕೊಳದೊಳಕ್ಕೆ ದುಮುಕಿ ಈಜಿ ಸ್ನಾನ ಮಾಡಿ ಬಂದರು ; ಭಸ್ಮಧಾರಣ ಮಾಡಿದರು. ಇವರು, ಮೊದಲೇ ನೆನೆಸಿಟ್ಟಿದ್ದ ಗೋಧಿ ಹಿಟ್ಟಿಗೆ ಉಪ್ಪು, ಮೆಣಸಿನಕಾಯಿ, ತುಪ್ಪ ಹಾಕಿ ಕಲಸಿ ರೊಟ್ಟಿ

ತಟ್ಟಲು ಕುಳಿತರು. ಮೊದಲಿನ ಇಬ್ಬರು ಆ ವೇಳೆಗೆ ಸ್ನಾನ ಮುಗಿಸಿಕೊಂಡು ಬಂದರು. ರೊಟ್ಟಿ ಸುಟ್ಟಿದ್ದಾಯಿತು. ಐವರೂ ಕೈತೊಳೆದುಕೊಂಡು ತುಲಸೀ ಮಣಿಯ ಜಪಸರಗಳನ್ನು ಹಿಡಿದು ಕುಳಿತರು. ಆಚಮನ ಮಾಡಿದರು. ಏನೇನೋ ಮಂತ್ರ ಹೇಳಿ ಸೂರ್ಯನಿಗೆ ಕೈಮುಗಿದರು, ಅರ್ಘ್ಯ ಕೊಟ್ಟರು. ಆದಾದ ಬಳಿಕ ರೊಟ್ಟಿಗಳನ್ನೂ ತುಪ್ಪವನ್ನೂ ಮಿಠಾಯಿ ತುಣುಕುಗಳನ್ನೂ ತಮಗೆ ಬೇಕಾದಷ್ಟು ಭುಜಿಸಿದರು. ಮಧ್ಯೆ ಮಧ್ಯೆ "ಹರೇ ರಾಮ್", "ಜಯ ಜಯ ರಾಮ್." ಕೊಂಚ ಕೊಂಚ ಮಾತನಾಡಿಕೊಳ್ಳುತ್ತಿದ್ದರು. ಬಹುಶಃ ಹಿಂದಿ ಭಾಷೆಯಲ್ಲಿ. ಅವರ ಹತ್ತಿರ ಹೋಗುವುದಕ್ಕೆ ನನಗೆ ಭಯ. ಅವರು ಭೋಜನೋಪಕ್ರಮ ಮಾಡುವ ವೇಳೆಗೆ ಘಂಟೆ ಒಂದಾಗಿರಬಹುದು.

ನಾನು ಚಿಕ್ಕಪೇಟೆಗೆ ಬಂದು ನನ್ನ ಮಿತ್ರ ಅಪ್ಪಣ್ಣನವರ ಮನೆಯಲ್ಲಿ ಊಟಮಾಡಿ ಅವಸರವಸರವಾಗಿ ಅರಳಿಕಟ್ಟೆಗೆ ಹಿಂದಿರುಗಿ ಬಂದೆ. ಸುಮಾರು ಮೂರು ಘಂಟೆಯಾಗಿತ್ತು. ಬೈರಾಗಿಗಳು ನೆರಳಿನಲ್ಲಿ ಮಲಗಿ ನಿದ್ರಿಸುತ್ತಿದ್ದರು. ನಾಲ್ಕು ಘಂಟೆಯ ವೇಳೆಗೆ ಅವರು ಮೇಲಕ್ಕೆದ್ದು ಮುಖಪ್ರಕ್ಷಾಳನ, ಪಾದಪ್ರಕ್ಷಾಳನ ಮಾಡಿಕೊಂಡು ಬಂದು, ಸುತ್ತಮುತ್ತ ಎಲ್ಲೋ ಬಚ್ಚಿಟ್ಟಿದ್ದ ಮಣ್ಣಿನ ಚಿಲುಮೆಗಳನ್ನು ಹೊರತೆಗೆದರು. ತೆಂಗಿನ ಜುಂಗನ್ನು ಸಿದ್ಧಪಡಿಸಿಟ್ಟು ಕೊಂಡು, ತಮ್ಮ ಅಂಗೈಯಲ್ಲಿ ಏನೋ ಒಂದು ವಸ್ತುವನ್ನಿಟ್ಟುಕೊಂಡು ನಶ್ಯ ತಿಕ್ಕುವಂತೆ ಅದನ್ನು ತಿಕ್ಕುತ್ತಿದ್ದರು. ಅದು ಬಹುಶಃ ಗಾಂಜಾ.

ಚಿಲುಮೆಗೆ ಬೆಂಕಿ ಸೇರಿಸಿ ಅದು ಹದಕ್ಕೆ ಬಂದ ಬಳಿಕ ಅದರಲ್ಲಿ ಗುಳಿಗೆಯನ್ನು ಹಾಕಿ ಚಿಲುಮೆಯ ಬುಡಕ್ಕೆ ಒದ್ದೆ ಬಟ್ಟೆಯನ್ನು ಸುತ್ತಿ, ಬಟ್ಟೆಯ ಮೂಲಕ ಗಾಂಜಾ ಸೇವನೆಯನ್ನಾರಂಭಿಸಿದರು. ನಾನು ಕೊಂಚ ಹೊತ್ತಾದ ಮೇಲೆ ಅಲ್ಲಿಂದ ಹಿಂದಿರುಗಿದೆ. ಗಾಂಜಾ ಭಂಗಿ ಸೇವನೆ ಮಾಡುವವರ ಸಾಮೀಪ್ಯ ಸಂಜೆಯಾದಮೇಲೆ ಅಪಾಯಕರವೆಂದು ಕೇಳಿದ್ದೆ.

ಬೈರಾಗಿಗಳು ಯಾವ ಊರಿನಲ್ಲಿಯೂ ಒಂದೆರಡು ದಿನಕ್ಕೆ ಹೆಚ್ಚಾಗಿ ನಿಲ್ಲುವವರಲ್ಲ. ಬೆಂಗಳೂರಿನಿಂದ ಅವರು ತಿರುಪತಿಯ ಕಡೆಗೋ ರಾಮೇಶ್ವರದ ಕಡೆಗೋ ನಡೆಯುವುದು ವಾಡಿಕೆಯಂತೆ. ಅವರಲ್ಲಿ ಹಳಬರಾದವರಿಗೆ ತಿಳಿದಿರುತ್ತದೆ—ತಮ್ಮ ಹಿರಿಯರಿಂದ—ಯಾವ ಊರಿನಲ್ಲಿ ಸದಾವರ್ತ ಸಿಕ್ಕುತ್ತದೆ, ವಸತಿಯ ಅನುಕೂಲವಿದೆ—ಎಂಬುದು. ಅದರಂತೆ ಅವರು ತಮ್ಮ ದಾರಿಯನ್ನು ಗೊತ್ತುಮಾಡಿಕೊಂಡಿರುತ್ತಾರೆ.

## ನನ್ನ ಯೋಜನೆಗಳು

ಹೀಗೆ ನನಗೆ ಬಾಲ್ಯದಲ್ಲಿ ದೊರೆತ ಯಾತ್ರಿಕರು, ಬೈರಾಗಿಗಳು, ಗೋಸಾಯಿಗಳು—ಇಂಥವರ ಸಹವಾಸವೇ ನನ್ನ ತೊಂಡುತನಕ್ಕೆ ಪ್ರೋತ್ಸಾಹವಾಗಿದ್ದಿರಬೇಕು.

ಆ ತೊಂಡುತನವನ್ನು ನಿಶ್ಶೇಷ್ಟವಾಗಿ ಮಾಡಿದ್ದು ಮದುವೆ. ನನಗೆ ಮದುವೆಯಾದಾಗ ವಯಸ್ಸು ಹದಿನೈದು ಹದಿನಾರು. ನಾನು ಹೈಸ್ಕೂಲಿನ ಐದನೆಯ ಫಾರ್ಮಿನಲ್ಲಿದ್ದೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ತಮ್ಮ ಮದುವೆಯ ಕಥೆಯನ್ನು ನನಗೆ ಒಂದು ಸಾರಿ ಹೇಳಿದರು. ಅವರ ತಂದೆಯೂ ಹೆಣ್ಣಿನ ತಂದೆಯೂ ಸ್ನೇಹಿತರು ; ತಮ್ಮತಮ್ಮಲ್ಲೇ ಮಾತನಾಡಿಕೊಂಡು ಲಗ್ನ ನಿಷ್ಕರ್ಷೆ ಮಾಡಿ ಅದಕ್ಕೆ ಬೇಕಾದದ್ದನ್ನೆಲ್ಲ ಅಣಿಮಾಡಿಕೊಂಡು ಆಮೇಲೆ ಸಂಗತಿಯನ್ನು ಹೊರಪಡಿಸಿದರಂತೆ. ರಾಮಸ್ವಾಮಿ ಅಯ್ಯಂಗಾರ್ಯರು ಯೋಚನೆ ಮಾಡಬೇಕೆಂದಾಗ ಅವರ ತಾಯಿ—

"ಮಾಡಿಟ್ಟಿರುವ ಹೋಳಿಗೆ, ಭಕ್ಷ್ಯಗಳೆಲ್ಲ ಮುಗ್ಗಿಹೋಗುತ್ತವೆ ; ಆದದ್ದರಿಂದ ಬೇಗ ಮದುವೆಯಾಗಿಬಿಡಬೇಕು"

—ಎಂದು ಒತ್ತಾಯಪಡಿಸಿದರಂತೆ. ನನಗಾದದ್ದೂ ಹಾಗೆಯೇ. ನನ್ನ ನಕ್ಷತ್ರಕ್ಕೆ ಮಾವನಿಲ್ಲದ ಮನೆ ಸರಿಯಂತೆ ; ಆ ಕಡೆ ಹುಡುಗಿಯ ತಂದೆ ಹೋದ ವರ್ಷದೊಳಗಾಗಿ ಕನ್ಯಾದಾನ ಮಾಡತಕ್ಕದ್ದೆಂದು ವ್ರತಮಾಡಿಕೊಂಡಿದ್ದರಂತೆ. ಇಂಥ ಸದವಕಾಶವನ್ನು ಕಳೆದುಕೊಂಡರೆ ಬೇರೆ ತಂದೆಯಿಲ್ಲದ ಹುಡುಗಿಯನ್ನು ಹುಡುಕುವುದು ಪ್ರಯಾಸವೆಂದು ನನ್ನ ಹಿರಿಯರು ನಿಶ್ಚಯಿಸಿದರು.

ಹೀಗಾಗಿ ನನ್ನ ತೊಂಡುತನದ ಯೋಜನೆಗಳು ಮೂಲೆಗೆ ಬಿದ್ದವು. ಆ ಯೋಜನೆಗಳಲ್ಲಿ ಎರಡನ್ನು ಹೇಳುತ್ತೇನೆ.

## ಶರದಾಕಾಶವೀಕ್ಷಣ

ಹೀಗೆಂದರೆ, ಶರದೃತುವಿನಲ್ಲಿ ಆಕಾಶವನ್ನು ನೋಡುವ ಸಂತೋಷದ ಅನುಭವ. ಇದಕ್ಕಾಗಿ ನಾಲ್ವರೈವರು ಸ್ನೇಹಿತರು ಬೆಂಗಳೂರಿನಿಂದ ಎತ್ತಿನ ಗಾಡಿಗಳಲ್ಲಿಯೂ ಕಾಲುನಡಿಗೆಯಿಂದಲೂ ಪ್ರಯಾಣಮಾಡತಕ್ಕದ್ದು. ಒಂದು ಗಾಡಿಯಲ್ಲಿ ಅಡಿಗೆಗೆ ಬೇಕಾದ [illegible] ಖೀಲು. ಇನ್ನೊಂದು ಗಾಡಿಯಲ್ಲಿ ಅವಲಕ್ಕಿ, ಹುರಿಟ್ಟು, ಪುಳ್ಳಂಗಾಯುಂಡೆ, ಚಕ್ಕುಲಿ,

ಕೋಡುಬಳೆ ಇತ್ಯಾದಿ ಫಲಾಹಾರ ಸಾಮುಗ್ರಿ ಡಬ್ಬಿಗಳು ಮತ್ತು ಸಣ್ಣ ಸಣ್ಣ ಹಾಸಿಗೆಗಳು. ಮೂರನೆಯ ಗಾಡಿಯಲ್ಲಿ ದಪ್ಪನೆಯ ಜಮಖಾನೆ ಹಾಸಿ, ನಡಿಗೆಗೆ ಸಿದ್ಧವಾಗಿಲ್ಲದವರು ಕೂಡತಕ್ಕದ್ದು.

ಬೆಳಗ್ಗೆ ಐದು ಘಂಟೆಗೆ ಗಾಡಿ ಕಟ್ಟಿ ಹೊರಡತಕ್ಕದ್ದು. ನಾವು ಮುಖವನ್ನು ಆಕಾಶದ ಕಡೆಗೆ ತಿರುಗಿಸಿ ಅದರ ಸ್ವಚ್ಛ ನೀಲಿಮೆಯನ್ನು ನೋಡಿಕೊಂಡು ಆನಂದಿಸುತ್ತ ಹರಟೆ ಹೊಡೆಯುತ್ತ, ಹಾಡು ಪದ್ಯ ಹೇಳಿಕೊಳ್ಳುತ್ತ ಎಂಟು ಘಂಟೆಯವರೆಗೂ ನಡೆಯುವುದು. ಕೊಳವನ್ನೋ, ಕೆರೆಯನ್ನೋ ಕಂಡಾಗ ಅಲ್ಲಿ ಗಾಡಿ ನಿಲ್ಲಿಸಿ ಅಡಿಗೆ ಮಾಡಿಕೊಳ್ಳುವುದು. ಹಾಲು ಮೊಸರುಗಳನ್ನು ಸಮೀಪದ ಹಳ್ಳಿಗಳಿಂದ ತರುವುದು. ಭೋಜನಾನಂತರ ನಾಲ್ಕು ಘಂಟೆಯವರೆಗೂ ವಿಶ್ರಮಿಸಿಕೊಳ್ಳುವುದು. ಅನಂತರ ಚಕ್ಕುಲಿ ಕೋಡುಬಳೆಗಳನ್ನು ಮೆಲ್ಲುತ್ತ ಸಂಜೆ ತೀರಾ ಕತ್ತಲಾಗುವವರೆಗೂ ನಡೆಯುವುದು. ದಾರಿಯಲ್ಲಿ ಅಲ್ಲಲ್ಲಿ ಗುಡಿಗಳಿಗೆ ಹೋಗುವುದು, ಮಠಗಳಿಗೆ ಹೋಗುವುದು, ಊರಿನ ವಿದ್ಯಮಾನಗಳನ್ನು ತಿಳಿದುಕೊಳ್ಳುವುದು.

ಹೀಗೆ ದಿನಕ್ಕೆ ಐದಾರು ಘಂಟೆಗಳಂತೆ ಪ್ರಯಾಣಮಾಡಿದರೆ ಒಂದು ವಾರದೊಳಗಾಗಿ ಮುಳುಬಾಗಲನ್ನು ತಲಪಬಹುದು. ಬೆಂಗಳೂರಿನಿಂದ ಅರವತ್ತು ಮೈಲಿ. ಅಲ್ಲಿ ಎರಡು ಮೂರು ದಿನವಿದ್ದು, ಬಂದ ಕ್ರಮದಲ್ಲಿಯೇ ಹಿಂತಿರುಗುವುದು. ಒಟ್ಟು ಹದಿನೈದುः ದಿನದ ಪ್ರವಾಸ.

ಈ ಯೋಜನೆಯನ್ನು ಸ್ನೇಹಿತರಲ್ಲಿ ಹೇಳಿದೆ. ಅವರು ನಕ್ಕು "ಬಹು ಚೆನ್ನಾಗಿದೆ, ಅದಕ್ಕೇನು ಕಷ್ಟ?" ಎಂದರೇ ಹೊರತು ಒಂದು ಬೆಟ್ಟನ್ನು ಮುಂದಿಟ್ಟವರಲ್ಲ. ಅವರ ಮನಸ್ಸುಗಳಲ್ಲಿ ಇದೊಂದು ಹಾಸ್ಯವಿಷಯವೆನಿಸಿರಬೇಕು. ನನ್ನ ಈಗಿನ ಸ್ಥಿತಿಯಲ್ಲಿ ಆ ಯೋಜನೆಯನ್ನು ಪುನರುಜ್ಜೀವನ ಮಾಡುವ ಸಾಹಸಮಾಡಿಲ್ಲ.

## ಸುಲಭ ತೀರ್ಥಯಾತ್ರೆ

ಈ ಯೋಜನೆಗೆ ನನ್ನ ಭಾವನವರೂ ಒಪ್ಪಿದ್ದರು. ಇದು ನಮಗಿಬ್ಬರಿಗೂ ಕಳತ್ರವಿಯೋಗವಾದ ಮೇಲೆ ಬಂದ ಯೋಚನೆ. ನಾವಿಬ್ಬರೂ ಮಾಡಿಕೊಳ್ಳಬೇಕಾದ ಸಿದ್ಧತೆ ಹೀಗೆ: ಒಬ್ಬೊಬ್ಬರು ಒಂದೊಂದು ತೆಳ್ಳನೆಯ ಸಣ್ಣ ಜಮಖಾನೆಯನ್ನು ಮಡಿಸಿ ಎಡಹೆಗಲ ಮೇಲೆ ಹಾಕಿಕೊಳ್ಳತಕ್ಕದ್ದು. ಅದರ ಮೇಲೆ ಒಂದು ಹಸಿಬೆ ಚೀಲ—ಬಳೆಗಾರರು ತಗಲಿಹಾಕಿಕೊಳ್ಳುತ್ತಿದ್ದ ಹಾಗೆ. ಆ

ತಿತ್ತಿಯ ಒಂದು ಭಾಗದಲ್ಲಿ ಒಂದು ಶಾಲು, ಎರಡು ಪಂಚೆಗಳು, ಎರಡು ಸಣ್ಣ ಪಂಚೆಗಳು ಅಥವಾ ಟವಲುಗಳು, ಒಂದು ಸಂಚಪಾತ್ರೆ, ಅದರಲ್ಲಿ ವಿಭೂತಿ ಡಬ್ಬಿ ಮತ್ತು ಜಪಸರ, ಎರಡು ಮೂರು ಪೆನ್ಸಿಲ್ ಕಡ್ಡಿಗಳು, ಒಂದು ಪಂಚಾಂಗ ಅಥವಾ ಡಯರಿ, ಒಂದು ಚಾಕು, ಒಂದು ಸಣ್ಣ ನೋಟ್ ಬುಕ್ಕು. ತಿತ್ತಿಯ ಇನ್ನೊಂದು ಭಾಗದಲ್ಲಿ ಒಂದು ಅವಲಕ್ಕಿ ಗಂಟು, ಒಂದು ಹುರಿಟ್ಟಿನ ಗಂಟು. ಒಂದು ಬೆಲ್ಲದಚ್ಚು, ಒಂದು ಒಣಕೊಬರಿ ಗಿಟಕು, ಒಂದು ಪಾವಿನಷ್ಟು ಹುರಿದ ನೆಲೆಗಡಲೆಕಾಯಿ ಪೊಟ್ಟಣ, ಇನ್ನೂ ಏನಾದರೂ ಹುರಿಗಾಳು ಕೋಡುಬಳೆ ಮೊದಲಾದ ಕುರುಕುತಿಂಡಿಗಳು, ಒಂದು ಡಬ್ಬ ತ್ರಿಫಲಾಚೂರ್ಣ, ಒಂದು ಡಜನ್ ಕ್ವಿನೈನ್ ಗುಳಿಗೆಗಳು. ಒಂದು ಸಣ್ಣ ವ್ಯಾಸಲೀನ್ ಡಬ್ಬಿ, ಒಂದು ಮೋಂಬತ್ತಿ, ಒಂದು ದೀಪದ ಕಡ್ಡಿ ಪೆಟ್ಟಿಗೆ—ಈ ಸಾಮಾನುಗಳಿರತಕ್ಕದ್ದು. ನನ್ನ ಭಾವನ ತಿತ್ತಿಯಲ್ಲಿ ಒಂದು ಉಪ್ಪು ಪುಡಿಯ ಡಬ್ಬಿ ಹೆಚ್ಚಾಗಿರಬೇಕಾದದ್ದು, ನಾವು ಬನೀನು ಧರಿಸಿ ಅದರ ಒಳಜೇಬಿನಲ್ಲಿ ಇಪ್ಪತ್ತು ಇಪ್ಪತ್ತೈದು ರೂಪಾಯಿ ಇಟ್ಟುಕೊಳ್ಳತಕ್ಕದ್ದು. ತಲೆಗೆ ಒಂದು ಸಣ್ಣ ಪಂಚೆ ಲಪ್ಪಟ್ಟೆ, ಕಾಲಿಗೆ ಚಪ್ಪಲಿ, ಒಂದು ಕೈಯಲ್ಲಿ ಹಗ್ಗ ಕಟ್ಟಿದ ತಂಬಿಗೆ—ಅದು ಮೊಣಕೈಯಿಂದ ನೇತುಹಾಕಿಕೊಳ್ಳಲು ಅನುಕೂಲವಾಗಿರಬೇಕು. ಇನ್ನೊಂದು ಕೈಯಲ್ಲಿ ಕಟ್ಟಿಗೆ. ಅದು ಊರುಗೋಲೂ ಆಗಿರಬೇಕು, ಭಯೋತ್ಪಾದಕವೂ ಆಗಿರಬೇಕು. ಇಷ್ಟು ಸಿದ್ಧತೆ ಮಾಡಿಕೊಂಡು

ಜೈ ಪರಮೇಶ್ವರ।

ಬೆಂಗಳೂರಿನಿಂದ ಮೊದಲು ಹಿಂದೂಪುರಕ್ಕೆ ಹೋಗತಕ್ಕದ್ದು. ಅಲ್ಲಿ ರೈಲಿನಿಂದಿಳಿದು ಮುಂದಿನ ಪ್ರೋಗ್ರಾಂ. ಎಲ್ಲಿ ಪ್ರಸಿದ್ಧ ದೇವಾಲಯ, ಎಲ್ಲಿ ರಥೋತ್ಸವ, ಎಲ್ಲಿ ಸಂತರ್ಪಣೆ—ಇದನ್ನು ವಿಚಾರಿಸಿಕೊಂಡು, ರೈಲಿನಲ್ಲಂದರೆ ರೈಲಿನಲ್ಲಿ, ಬಸ್ಸಿನಲ್ಲಂದರೆ ಬಸ್ಸಿನಲ್ಲಿ, ಕಾಲುನಡಿಗೆಯಿಂದ ಎಂದರೆ ಕಾಲುನಡಿಗೆಯಿಂದ—ಮುಂದಿನ ಮಜಲಿಗೆ ಹೋಗತಕ್ಕದ್ದು. ಮೊದಲೇ ಗೊತ್ತಾದ ನಿರ್ಬಂಧದ ಕಾರ್ಯಕ್ರಮವೇನಿಲ್ಲ. ನಾವು ಮಾಡಿಕೊಂಡ ನಿಯಮಗಳು ನಾಲ್ಕು: (೧) ತಿತ್ತಿಯಲ್ಲಿನ ತಿಂಡಿಗಳನ್ನು ಹೆಚ್ಚಾಗಿ ತಿನ್ನತಕ್ಕದ್ದಲ್ಲ; ಅವಶ್ಯವಾದಾಗ ಮಾತ್ರ ಉಪಯೋಗಿಸತಕ್ಕದ್ದು. (೨) ಚೀಲದ ಭಾರವನ್ನು ಹೆಚ್ಚುಮಾಡತಕ್ಕದ್ದಲ್ಲ. (೩) ಎಲ್ಲದರಲ್ಲೂ ಮಿತವಾಗಿರಬೇಕು. ಹಣ

ವನ್ನು ಹಿಡಿತದಿಂದ ಉಪಯೋಗಿಸಬೇಕು. (೪) ಬ್ರಾಹ್ಮಣರ ಮನೆಯಲ್ಲಿ ಊಟಮಾಡಬೇಕು; ಅವರು ಯಾರಾದರೂ ಸರಿಯೇ.

ನನ್ನ ಭಾವಂದಿರು ಈ ವಿಷಯದಲ್ಲಿ ಒಂದು ಕಟ್ಟಲೆಯ ಕವಿತ್ವ ಮಾಡಿದ್ದರು:

ಎಲ್ಲಿ ಎಲ್ಲಿ ತೋರಣ,
ಅಲ್ಲಿ ಅಲ್ಲಿ ಹೂರಣ।
ಕರೆದರೂ ಸರಿ ಬಿಟ್ಟರೂ ಸರಿ
ನಡೀ ಅಲ್ಲಿಗೆ ಹೋಗೋಣ॥

ರಾತ್ರಿ ಹೊತ್ತು ಭೋಜನವಿಲ್ಲ. ಕ್ಷುತ್ತು ಇದ್ದರೆ ಆ ಊರಿನ ಗುಡಿಯ ದೇವರ ಪ್ರಸಾದ. ಬಾಳೆಹಣ್ಣು ಅಥವಾ ರಸಾಯನ ಆಗಬಹುದು. ತೆಂಗಿನ ಹೋಳು ಪ್ರಸಾದ ದೊರೆತರೆ ಕೊಬ್ಬರಿಯನ್ನು ಚಾಕುವಿನಿಂದ ಚೂರು ಚೂರಾಗಿ ಕತ್ತರಿಸಿ ಎರಡು ದಿನಕ್ಕೆ ದಾಸ್ತಾನಿರಿಸಿಕೊಳ್ಳತಕ್ಕದ್ದು.

ಈ ಯೋಜನೆಯಲ್ಲಿ ಅತಿ ಕಷ್ಟದ ಭಾಗವೇನೂ ತೋರಲಿಲ್ಲ. ದಾರಿಯ ಖರ್ಚಿಗೆ ನನ್ನ ಭಾವನವರ ಪಿಂಛನಿ ಸಾಕಾಗುತ್ತಿತ್ತು. ನನ್ನ ಖರ್ಚನ್ನೂ ಅವರೇ ಕೊಡುವುದಾಗಿ ಹೇಳಿದ್ದರು. ನಾವು ಈಹೊತ್ತು, ನಾಳೆ ಎಂದು ಮೀನ—ಮೇಷ ನೋಡುತ್ತಿರುವಷ್ಟರಲ್ಲಿ ದೇವರು ನನ್ನ ಭಾವಂದಿರನ್ನು ತನ್ನ ಹತ್ತಿರಕ್ಕೆ ಕರೆದುಕೊಂಡ.

ನಾನು ಆ ಯೋಚನೆಯನ್ನು ಕೈಬಿಟ್ಟು, ನನಗೆ ದೊರೆತ ಚಿರಂಜೀವಿಗಳಿಗೆ ಕಾಟ ಕೊಡುವುದರಿಂದ ತೃಪ್ತನಾಗಿರಬೇಕಾಗಿದೆ.

ತನಗಳುವರಾರುಮಿಲ್ಲದೆ।
ಮನುಜಂ ತಾನಾರ್ಗಮಳುವುದಿರದಿರೆ ಧನ್ಯಂ।
ಅನುಸರಿಸದೆ ತಾನಾರನು—।
ಮನುಸರಿಪರ್ ತನಗಮಿಲ್ಲದಿರೆ ಕಡುಧನ್ಯಂ।

